"ನಗು" ಎಂದರೇನು? ಎಂಬ ಪ್ರಶ್ನೆ ಉದ್ಭವಿಸುವುದು ಸಹಜ. ನಗು ಒಂದು ರಿಫ್ಲೆಕ್ಸ್ ಕ್ರಿಯೆ. ಬೆಂಕಿ ತಾಗಿದರೆ ಹೇಗೆ ಕೈ ತಾನೇ ತಾನಾಗಿ ಹಿಂದಕ್ಕೆಳೆದುಕೊಳ್ಳುವುದೋ ಹಾಗೆಯೇ, ಕಚಗುಳಿ ಇಟ್ಟರೆ ಒಳ್ಳೆಯ ನಗೆಹನಿ ಓದಿದರೆ ವ್ಯಂಗ್ಯ ಚಿತ್ರವೊಂದನ್ನು ನೋಡಿದರೆ ತಾನೇ ತಾನಾಗಿ ಹೊರಹೊಮ್ಮುವ ಶಾರೀರಿಕ ಪ್ರತಿಕ್ರಿಯೆ ನಗು.

ಮನುಷ್ಯನ ಸಮಗ್ರ ಆರೋಗ್ಯಕ್ಕೆ ಹಾಸ್ಯಪ್ರಜ್ಞೆ ಅತ್ಯಗತ್ಯ. ಒಂದು ರೀತಿಯಲ್ಲಿ ನೋಡಿದರೆ, ಒಬ್ಬ ವ್ಯಕ್ತಿಯ ಹಾಸ್ಯಪ್ರಜ್ಞೆ ಆತನ ಪ್ರಬುದ್ಧತೆಯ ಸಂಕೇತ ಎಂತಲೂ ಹೇಳಬಹುದು. ಬಹುಶಃ ತೀವ್ರವಾಗಿ ಬದಲಾಗುತ್ತಿರುವ ಈ ಆಧುನಿಕ ಯುಗದಲ್ಲಿ, ಮಾನವ ತನ್ನ ಮನಸ್ಸನ್ನು ಆತಂಕ ಗಳ ಆಘಾತದಿಂದ ರಕ್ಷಿಸಿಕೊಂಡು, ಮನಸ್ಸಿನ ಸಮತೋಲನವನ್ನು ಕಾಪಾಡಿಕೊಳ್ಳಲು ಪ್ರಕೃತಿ ಮುಂಗಡವಾಗಿಯೇ ಅವನಿಗೆ ನೀಡಿರುವ ಬಳುವಳಿ ಹಾಸ್ಯಪ್ರಜ್ಞೆ.....

...ಮುನ್ನುಡಿಯಿಂದ

ಪ್ರಿಸಮ್ ಹಾಸ್ಯ ಮಾಲಿಕೆ

# ನಗೆಗಾರ ರಾ. ಶಿ.

(ರಾ.ಶಿ. ಅವರ ಆಯ್ದ ನಗೆಬರಹಗಳ ಸಂಕಲನ)

ಸಂಪಾದಕರು
**ಎಂ. ಶಿವಕುಮಾರ್**
(ಅಪರಂಜಿ ಶಿವು)

**ಪ್ರಿಸಮ್ ಬುಕ್ಸ್ ಪ್ರೈ. ಲಿ.**
ನಂ. 1865, 32ನೇ ಕ್ರಾಸ್, ಬನಶಂಕರಿ ಎರಡನೇ ಹಂತ, ಬೆಂಗಳೂರು - 560 070

ಶಾಖೆಗಳು
ಮುಂಬಯಿ • ಕಲ್ಕತ್ತಾ • ಹೈದರಾಬಾದ್

**NAGEGAARA RASHI**—A collection of selected Humour writings of Raa.Shi. (Dr. M. Shivaram), edited by M. Shivakumar and published by Prism Books Pvt Ltd., 1865, 32nd Cross, Banashankari 2nd Stage, Bangalore - 560070. Ph:6713979. pp.xii + 196. First edition: 1999. Price: Rs.120.

ISBN: 81-7286-173-7

ಬೆಲೆ: ರೂ. 120.

ಪ್ರಥಮ ಮುದ್ರಣ: 1999



ರಕ್ಷಾಪುಟ ವಿನ್ಯಾಸ: ಚಂದ್ರನಾಥ ಆಚಾರ್ಯ

ರಾ.ಶಿ. ಭಾವಚಿತ್ರ ಕೃಪೆ: ಕೆ. ಜಿ. ಸೋಮಶೇಖರ್

ಒಳಪುಟಗಳ ವ್ಯಂಗ್ಯ ಚಿತ್ರಗಳು: ರಾಮಮೂರ್ತಿ

ಪ್ರತಿಗಳು ಇಲ್ಲೂ ಲಭ್ಯ
**ಪ್ರಿಸಮ್ ದ ಬುಕ್ ಶಾಪ್**
ನಂ. 16, 11ನೇ ಮುಖ್ಯರಸ್ತೆ
4ನೇ ಬ್ಲಾಕ್, ಜಯನಗರ
ಬೆಂಗಳೂರು - 560 011
ಫೋನ್: 6637527

ಮುದ್ರಣ: ಪಯೋನಿಧಿ ಪ್ರಿಂಟರ್ಸ್ ಪ್ರೈ. ಲಿ., ಬೆಂಗಳೂರು

# ರಾ.ಶಿ.- ವ್ಯಕ್ತಿಪರಿಚಯ

ರಾ.ಶಿ. ಎಂಬ ಕಾವ್ಯನಾಮದಿಂದ ಕನ್ನಡ ಜನತೆಗೆ ಸುಪರಿಚಿತರಾಗಿದ್ದ ಡಾ|| ಎಂ. ಶಿವರಾಂ ಅವರು ೧೯೦೫ನೇ ಇಸವಿ ನವೆಂಬರ್ ಹತ್ತರಂದು ಬೆಂಗಳೂರಿನಲ್ಲಿ ಜನಿಸಿದರು. ತಂದೆ ರಾಮಸ್ವಾಮಯ್ಯನವರಿಗೆ ಸರ್ಕಾರೀ ಹುದ್ದೆ. ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಓದುತ್ತಿದ್ದಾಗಲಿಂದಲೇ ಶಿವರಾಂಗೆ ಹಾಸ್ಯ ಸಾಹಿತ್ಯದ ಮೇಲೆ ಒಲವು. ಕಾಲೇಜ್ ಲೈಬ್ರರಿಯಲ್ಲಿ ಆಂಗ್ಲ ನಗೆನಿಯತಕಾಲಿಕ 'ಪಂಚ್'ನ ಪರಿಚಯವಾಗಿದ್ದು ನಗೆಗಾರ ರಾ.ಶಿ.ಯ ಹುಟ್ಟಿಗೆ ಕಾರಣವಾಯಿತು. ೧೯೩೦ರಲ್ಲಿ ರಾ.ಶಿ. ವೈದ್ಯಕೀಯ ವ್ಯಾಸಂಗ ಮುಗಿಸಿ ಖಾಸಗೀ ವೈದ್ಯವೃತ್ತಿಯಲ್ಲಿ ತೊಡಗಿಸಿಕೊಂಡನಂತರ ಅಂದಿನ ಕಾಲದ ದೈನಂದಿನ ಪತ್ರಿಕೆಯೊಂದರಲ್ಲಿ "ಸೋಮವಾರದ ಸುಸುದ್ದಿ" ಎಂಬ ಕಾಲಂ ಒಂದನ್ನು ಬರೆಯಲು ಪ್ರಾರಂಭಿಸಿದರು. ಇದು ಮುಂದೆ 'ಕೊರವಂಜಿ'ಯೂ ಸೇರಿದಂತೆ ಅವರ ಎಲ್ಲ ನಗೆಸಾಹಿತ್ಯ ರಚನೆಗೆ ನಾಂದಿಯಾಯಿತೆಂದು ಹೇಳಬಹುದು. ೧೯೪೨ರಲ್ಲಿ ರಾ.ಶಿ. 'ಕೊರವಂಜಿ' ಮಾಸಪತ್ರಿಕೆಯನ್ನು ಹೊರತರುವ ಯತ್ನ ಮಾಡಿದಾಗ ಅವರಿಗೆ ಒತ್ತಾಸೆಯಾಗಿ ನಿಂತವರು ಇನ್ನೊಬ್ಬ ನಗೆಸಾಹಿತಿ, ನಾ. ಕಸ್ತೂರಿ ಹಾಗೂ ಪ್ರತಿಭಾವಂತ ತರುಣ ವ್ಯಂಗ್ಯಚಿತ್ರಕಾರ ಆರ್.ಕೆ. ಲಕ್ಷ್ಮಣ್. ರಾ.ಶಿ.ಯವರ ಸಂಪಾದಕತ್ವದಲ್ಲಿ 'ಕೊರವಂಜಿ' ಸತತವಾಗಿ ಇಪ್ಪತ್ತೈದು ವರ್ಷಗಳ ಕಾಲ ಕನ್ನಡ ನಗೆರಸಿಕರನ್ನು ರಂಜಿಸಿದಳು. ರಾ.ಶಿ.ಯವರ ನಗೆಗಾರಿಕೆಗೆ 'ಕೊರವಂಜಿ' ಒಂದು ಹೊಸ ಮೊನಚನ್ನು ನೀಡಿತು.

ರಾ.ಶಿ.ಯವರ ಸಾಹಿತ್ಯಸೃಷ್ಟಿ ಹಾಸ್ಯಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ಅವರ ಆಸಕ್ತಮುಖವನ್ನು ಕಾಣಬಹುದಾಗಿತ್ತು. ಮನೋವಿಜ್ಞಾನದ ತಿರುಳನ್ನು ಜನಸಾಮಾನ್ಯರಿಗೆ ಮುಟ್ಟಿಸುವ ಯತ್ನದ 'ಮನೋನಂದನ' ಹಾಗೂ 'ಮನಮಂಥನ', ದೈಹಿಕ ಆರೋಗ್ಯ ಕುರಿತು ಬರೆದ 'ಅಲರ್ಜಿ', ನಮ್ಮ ದಿನನಿತ್ಯದ ಆಹಾರಗಳ ಸತ್ವಾಂಶಗಳನ್ನು ಸರಳವಾಗಿ ತಿಳಿಯಹೇಳುವ 'ನಮ್ಮ ಅಡಿಗೆ ಪಥ್ಯದ ಊಟ', ಇಂತಹ ಪುಸ್ತಕಗಳು ಬಹು ಬೇಗ ಓದುಗರ ಮೆಚ್ಚುಗೆ ಪಡೆದವು. ಇವೇ ಅಲ್ಲದೆ, 'ಮನನ', 'ಮೃಗಶಿರ' ಮುಂತಾದ ವಿಚಾರ ಪ್ರಚೋದನೆಯ ಬರಹಗಳು, ಟಿ.ಪಿ. ಕೈಲಾಸಂ, ಜಿ.ಪಿ. ರಾಜರತ್ನಂ, ಇವರುಗಳ ವ್ಯಕ್ತಿಚಿತ್ರಗಳು, ಅನೇಕ ಕಥೆ ಕಾದಂಬರಿಗಳು ರಾ.ಶಿ.ಯವರ ಪ್ರತಿಭೆಯ ಟೆಂಕ ಹೊತ್ತು ಹೊರಬಂದವು.

ರಾ.ಶಿ.ಯವರ ಕ್ರಿಯಾಶೀಲ ಪ್ರವೃತ್ತಿಗೆ ಇನ್ನೊಂದು ಉಜ್ವಲ ನಿದರ್ಶನವೆಂದರೆ, ಅವರು ಜನಗಳನ್ನು ಕಲೆಹಾಕಿ, ಬಹು ಆಸ್ಥೆಯಿಂದ ನಿರ್ಮಿಸಿದ ಬೆಂಗಳೂರು ಮೆಡಿಕಲ್ ಕಾಲೇಜ್. ಮೂರು-ನಾಲ್ಕು ವರ್ಷಗಳ ಸತತ ದುಡಿಮೆಯ ನಂತರ ೧೯೫೫ರಲ್ಲಿ ಪ್ರಾರಂಭವಾದ ಈ

ಕಾಲೇಜನ್ನು ಒಂದೆರಡು ವರ್ಷಗಳಕಾಲ ದಕ್ಷತೆಯಿಂದ ನಡೆಸಿ ಕೊನೆಗೆ ಜನಸಾಮಾನ್ಯರಿಗೆ ಅನುಕೂಲವಾಗಲೆಂದು ಅದನ್ನು ಸರ್ಕಾರಕ್ಕೇ ವಹಿಸಿಕೊಟ್ಟದ್ದು, ರಾ.ಶಿ.ಯವರ ಮನೋವೈಶಾಲ್ಯಕ್ಕೊಂದು ಉದಾಹರಣೆ.

ರಾ.ಶಿ.ಯವರ ಸಾಹಿತ್ಯ ಕೃಷಿಯ ಸಮಯದಲ್ಲಿ ಅವರಿಗೆ ಅನೇಕ ಪ್ರಶಸ್ತಿಗಳು ದೊರಕಿದವು. "ಕರ್ನಾಟಕ ರಾಜ್ಯ ಪ್ರಶಸ್ತಿ", "ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ", 'ಮನಮಂಥನ'ಕ್ಕೆ "ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ", ಇತ್ಯಾದಿಗಳಿಂದ ನಾಡು ಅವರನ್ನು ಗೌರವಿಸಿತು. ೧೯೭೮ರಲ್ಲಿ ರಾ.ಶಿ.ಯವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು.

ಒಬ್ಬ ಗೃಹಸ್ಥನಾಗಿ, ಒಬ್ಬ ವೈದ್ಯನಾಗಿ, ಒಬ್ಬ ಜಿಜ್ಞಾಸುವಾಗಿ, ಒಬ್ಬ ಸಾಹಿತಿಯಾಗಿ, ಆ ಕ್ಷೇತ್ರಗಳಲ್ಲಿ ಅಸಾಧಾರಣ ಯಶಸ್ಸನ್ನು ಗಳಿಸಿ ತುಂಬು ಜೀವನ ನಡೆಸಿದ ವ್ಯಕ್ತಿ ರಾ.ಶಿ. ಅವರು ೧೯೮೫ರ ಜನವರಿ ೧೩ ರಂದು ದೈವಾಧೀನರಾದಾಗ ನಾಡಿಗೆ ನಾಡೇ ಕಂಬನಿಗರೆಯಿತು. ರಾ.ಶಿ. ಇನ್ನಿಲ್ಲ. ಆದರೆ ಅವರ ನಗೆಪ್ರಜ್ಞೆ ಸದಾಕಾಲಕ್ಕೂ ಜೀವಂತ.

# ಪ್ರಸ್ತಾವನೆ

"ನಗೆಗಾರ ರಾ.ಶಿ." ರಾ.ಶಿ.ಯವರ ಒಂಭತ್ತು ನಗೆಸಂಕಲನಗಳಿಂದ ಆಯ್ದ ಬರಹಗಳ ಲೇಖನಮಾಲೆ. ಈ ಬರಹಗಳು ರಾ.ಶಿ.ಯವರ ಹಾಸ್ಯಪ್ರಜ್ಞೆಯ ಒಂದು ಮುಖ ಅಷ್ಟೇ. ಅವರ ನಗೆಮನೋಭಾವದ ಇನ್ನೊಂದು ಆಯಾಮವೆಂದರೆ ಮಾತುಗಾರಿಕೆ. ಮನೆಯಲ್ಲಿ ಮಾತನಾಡುವಾಗ, ಗೆಳೆಯರೊಂದಿಗೆ ಹರಟುವಾಗ, ವೇದಿಕೆಯ ಮೇಲಿನಿಂದ ಭಾಷಣ ಮಾಡುವಾಗ, ಪಟಾಕಿ ಸಿಡಿದಂತೆ ಚಟಪಟಗುಟ್ಟುತ್ತಿದ್ದ ಅವರ ನಗೆಚಟಾಕಿಗಳು ಸುತ್ತಲಿನವರನ್ನು ಸದಾ ನಗೆಗಡಲಿನಲ್ಲಿ ಮುಳುಗಿಸುವುದರಲ್ಲಿ ಸಫಲವಾಗುತ್ತಿದ್ದವು. ಈ ನಗಿಸುವ ಚಾಳಿ ನಮ್ಮ ತಂದೆ ರಾ.ಶಿ.ಯವರಿಗೆ ಚಿಕ್ಕಂದಿನಿಂದಲೇ ಇತ್ತು. ಅವರು ಚಿಕ್ಕವರಾಗಿದ್ದಾಗ ಒಮ್ಮೆ ಚಿಕ್ಕಮ್ಮನ ಜೊತೆ ಪೇಟೆ ಬೀದಿಗೆ ಹೋಗಿದ್ದರಂತೆ. ದಾರಿಯ ಬದಿಯಲ್ಲಿ ನಿಂತಿದ್ದ ಕತ್ತೆಯೊಂದನ್ನು ಚಿಕ್ಕಮ್ಮ ಬಳಸಿ ಹೋಗುತ್ತಿದ್ದಾಗ, ಕತ್ತೆ ಚಿಕ್ಕಮ್ಮನನ್ನು ಒದೆಯಿಂತಂತೆ. ಅಷ್ಟೇನೂ ಪೆಟ್ಟಾಗದಿದ್ದರೂ, ವಿಷಯ ಎಲ್ಲರಿಗೂ ತಿಳಿದರೆ ಗೇಲಿಮಾಡುತ್ತಾರಲ್ಲಾ ಎಂಬ ಆತಂಕ ಚಿಕ್ಕಮ್ಮನಿಗೆ. ಆಕೆ ಹುಡುಗನಿಗೆ ಹೇಳಿದರಂತೆ, "ಶಿವು, ಮನೆಗೆ ಹೋದಮೇಲೆ ಕತ್ತೆ ಒದ್ದದ್ದನ್ನು ನೀನು ಖಂಡಿತ ಯಾರಿಗೂ ಹೇಳಬಾರದು. ಹಾಗಂತ ಭಾಷೆ ಕೊಡು." ಶಿವು ಭಾಷೆ ಕೊಟ್ಟ. ಆದರೆ ಅಂತಹ ಸ್ವಾರಸ್ಯವಾದ ಸುದ್ದಿಯನ್ನು ಸುಮ್ಮನೆ ಬಿಡುವುದಕ್ಕಾಗುತ್ತದೆಯೇ? ಮನೆ ಸೇರಿದ ತಕ್ಷಣ ಶಿವು ಅವರಮ್ಮನಿಗೆ ಹೇಳಿದನಂತೆ, "ಅಮ್ಮಾ, ಇವತ್ತು ಪೇಟೇಲಿ ಚಿಕ್ಕಮ್ಮನ್ನ ಕತ್ತೆ ಒದೀಲೇ ಇಲ್ಲ." ನಾವೆಲ್ಲಾ ಚಿಕ್ಕವರಿದ್ದಾಗ, ಪರೀಕ್ಷೆ ಮುಗಿಸಿಕೊಂಡು ಮನೆಗೆ ಬಂದರೆ "ಇನ್ನೂ ಎಷ್ಟು ದಿನ ನಿನ್ನ ಸೂತಕ?" ಎಂದು ನಮ್ಮಪ್ಪ ಕೇಳುತ್ತಿದ್ದರು. ಸೂತಕದ ದಿನಗಳಂತೆ ಪರೀಕ್ಷಾದಿನಗಳು ಹಾಸ್ಯ ಹುಡುಗಾಟ ರಹಿತವಾಗಿ ಇರುತ್ತಿದ್ದುದನ್ನು ಅವರು ಲೇವಡಿ ಮಾಡುತ್ತಿದ್ದ ರೀತಿ ಇದು. ಒಮ್ಮೆ ನಮ್ಮ ತಾಯಿ ಹಾಸನಕ್ಕೆ ಹೊರಟಿದ್ದರು. ಅವರ ತವರೂರು ಅದು. ಹೊರಡುವ ಮುಂಚೆ ಮನೆಯ ಕಡೆ, ಅದರಲ್ಲೂ ಅಡಿಗೆಯ ಮನೆಯ ಕಡೆಗಿನ ಉಸ್ತುವಾರಿಯನ್ನು ತಂದೆಯವರ ಮೇಲೆ ಬಿಟ್ಟುಹೋಗಲು ನಮ್ಮ ತಾಯಿ ಅನುಮಾನಿಸುತ್ತಿದ್ದಾಗ, ತಂದೆಯವರು "ನೀನೇನೂ ಯೋಚನೆ ಮಾಡಬೇಡ. ನಾನೂ ಹೆಣ್ಣುಮಕ್ಕಳೂ ಅಡಿಗೆ ಮಾಡ್ಕೋತೀವಿ. ಕೂದಲು ಯಾವಾಗ ಹಾಕಬೇಕು ಅನ್ನೋದನ್ನ ಮಾತ್ರ ಹೇಳಿಬಿಟ್ಟು ಹೋಗು" ಅಂದು ನಗಿಸಿದ್ದುಂಟು.

ರಾ.ಶಿ.ಯವರ ಒಲವು ನಗೆಸಾಹಿತ್ಯದ ಕಡೆ ತಿರುಗಲು ಎರಡು ಮುಖ್ಯ ಕಾರಣಗಳನ್ನು ಗುರುತಿಸಬಹುದು. ಬಿ.ಎ. ವಿದ್ಯಾರ್ಥಿಯಾಗಿ ರಾ.ಶಿ. ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದಾಗ ಉತ್ಕೃಷ್ಟವಾದ ತಿಳಿಹಾಸ್ಯಕ್ಕೆ ಹೆಸರಾದ ಇಂಗ್ಲೀಷಿನ 'ಪಂಚ್' ವಾರಪತ್ರಿಕೆ ಕಾಲೇಜಿನ ಲೈಬ್ರರಿಯಲ್ಲಿ

ಓದಲು ಸಿಗುತ್ತಿತ್ತು. ಆ ಪತ್ರಿಕೆಯನ್ನು ಅವರು ಓದಲು ಪ್ರಾರಂಭಿಸಿದ ಸಂದರ್ಭವನ್ನು ಅವರ ಮಾತಿನಲ್ಲೇ ಕೇಳಿ:

"ಸೆಂಟ್ರಲ್ ಕಾಲೇಜಿಗೆ ಸೇರಿದ ಮೇಲೆ, ಮಧ್ಯಾಹ್ನದ ವಿರಾಮದ ವೇಳೆಯನ್ನು ಲೈಬ್ರರಿ ಮತ್ತು ರೀಡಿಂಗ್ ರೂಮುಗಳಲ್ಲಿ ಕಳೆಯುತ್ತಿದ್ದೆ. ಕಾರಣ ಇಷ್ಟೆ. ಉಳಿದ ಸ್ನೇಹಿತರೆಲ್ಲರೂ ತಿಂಡಿ ತಿನ್ನಲು ಹೋಟಲಿಗೆ ಹೋಗುತ್ತಿದ್ದರು. ನನಗೆ ಆ ಸೌಕರ್ಯವಿಲ್ಲದ ಕಾರಣ, ಶ್ರೀಮಂತ ಸ್ನೇಹಿತರೊಡನೆ ಅಂಥ ವೇಳೆಯಲ್ಲಿ ಇರಬಾರದಾದ್ದರಿಂದ, ನಾನು ಹಾಗೆ ಮಾಡಬೇಕಾಗಿತ್ತು. ರೀಡಿಂಗ್ ರೂಮ್‌ಗೆ ಹೋದ ಮೊದಲ ದಿನವೇ 'ಪಂಚ್' ಪತ್ರಿಕೆಯ ಪರಿಚಯವಾಯಿತು. ಅದರಲ್ಲಿದ್ದ ವ್ಯಂಗ್ಯ ಚಿತ್ರಗಳು, ಲೇಖನಗಳು, ಕುಹಕಿಡಿಗಳು ನನ್ನನ್ನು ಸೆರೆಹಿಡಿದವು. ಸಮಕಾಲೀನ ಇಂಗ್ಲೆಂಡಿನ ಜೀವನ ವೈಪರೀತ್ಯವನ್ನು ಎಷ್ಟು ಚುರುಕಾಗಿ ಅದು ಎತ್ತಿ ತೋರಿಸುತ್ತಿತ್ತು ಅಂತ. ಅಂದಿನಿಂದ ಪಂಚ್ ಪತ್ರಿಕೆಯನ್ನು ಓದುವುದೇ ಒಂದು ಒಲವಿನ ವಿದ್ಯಾಭ್ಯಾಸವಾಯಿತು."

ಪಂಚ್‌ನಿಂದ ದೊರಕಿದ ಈ ಆನಂದದ ಋಣವನ್ನು ಪರಿಹರಿಸಲು ರಾ.ಶಿ. ನಗೆ ಸಾಹಿತ್ಯದ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಮೂವತ್ತರ ದಶಕದಲ್ಲಿ ಅವರ ಮಿತ್ರ ಅಶ್ವತ್ಥನಾರಾಯಣ ರಾಯರು ಹೊರತರುತ್ತಿದ್ದ 'ನವಜೀವನ' ಎಂಬ ದಿನಪತ್ರಿಕೆಯಲ್ಲಿ, "ಸೋಮವಾರದ ಸುಸುದ್ದಿ" ಎಂಬ ಶೀರ್ಷಿಕೆಯಡಿಯಲ್ಲಿ ನಗೆಚಟಾಕಿ, ಕುಹಕಿಡಿಗಳನ್ನು ರಾ.ಶಿ. ಬರೆಯಲು ಪ್ರಾರಂಭಿಸಿದರು.

ಕೈಲಾಸಂ ಅವರೊಂದಿಗಿನ ಒಡನಾಟ, ರಾ.ಶಿ.ಯವರ ಹಾಸ್ಯ ಮನೋವೃತ್ತಿ ಹೊಳಪು ಪಡೆಯಲು ಇನ್ನೊಂದು ಕಾರಣ. ರಾ.ಶಿ.ಯವರು ಕೈಲಾಸಂ ಅವರನ್ನು ಮೊದಲು ಭೇಟಿಮಾಡಿದ್ದು ರಂಗಮಂದಿರದ ಕಾರ್ಯಕ್ರಮವೊಂದರಲ್ಲಿ. ಕ್ಲಾಸಿನಲ್ಲಿ ಪಾಠಗಳು ಬೋರ್ ಹೊಡೆದದ್ದರಿಂದ ಒಮ್ಮೆ ರಾ.ಶಿ.ಯವರು ಮಿತ್ರ ಅಪ್ಪಣ್ಣನೊಡನೆ ಗಾಳಿಸಂಚಾರಕ್ಕೆ ಹೊರಟರು. ದಾರಿಯಲ್ಲಿನ ರಂಗಮಂದಿರ ವೊಂದರಲ್ಲಿ ಒಂದು ಕಾರ್ಯಕ್ರಮ. ಮಿತ್ರರಿಬ್ಬರೂ ಒಳಗೆ ನುಗ್ಗಿದರು. ರಂಗಸಜ್ಜಿಕೆಗೋಸ್ಕರವೋ ಏನೋ ವೇದಿಕೆಯ ಮುಂದಿನ ಪರದೆಯನ್ನು ಮುಚ್ಚಿದ್ದರು. ಇವರಿಬ್ಬರೂ ಒಳಕ್ಕೆ ಹೋಗುತ್ತಿದ್ದಂತೆ ಮಧ್ಯವಯಸ್ಕನೊಬ್ಬನು ಪರದೆಯ ಎದುರಿಗೆ ಬಂದು ನಿಂತನಂತೆ. ಕಪ್ಪು ಬಣ್ಣದ ನೆಟ್ ಬನಿಯನ್, ಕಚ್ಚೆ ಪಂಚೆ ಉಟ್ಟಿದ್ದ ಬರಿಗಾಲಿನ ಆ ವ್ಯಕ್ತಿ ವೇದಿಕೆಯ ಅಂಚಿನಲ್ಲಿ ನಿಂತು, ಹಾವ ಭಾವ ಸಹಿತವಾಗಿ ಇಂಗ್ಲೀಷಿನ ಶಿಶು ಗೀತೆಯೊಂದನ್ನು ಹಾಡಲು ಪ್ರಾರಂಭಿಸಿದನಂತೆ.

There was an old woman, who lived in a shoe.
She had too many children, she didn't know what to do.

ರಾ.ಶಿ.ಯವರಿಗೆ ಈ ಬಾಲಿಶವಾದ ನಟನೆಯನ್ನು ನೋಡಿದಾಗ ಯಾಕಾದರೂ ಇಲ್ಲಿಗೆ ಬಂದನಪ್ಪಾ ಅನ್ನಿಸಿತಂತೆ. ಅಷ್ಟರಲ್ಲಿ ಆ ಕರಿಯ ಬನಿಯನ್ ಧಾರಿ ಮೆಲ್ಲನೆ ವೇದಿಕೆಯುದ್ದಕ್ಕೂ ನಡೆದು ಬಂದು, ಬಲತುದಿಯಲ್ಲಿ ನಿಂತು,

There was another old woman, who lived in another shoe.
She had no children,

ಅಂತ ಹೇಳಿ, ಸ್ವಲ್ಪ pause ಕೊಟ್ಟು but, by God, she knew what to do! ಎಂದಾಗ ಮಿತ್ರರಿಬ್ಬರಿಗೂ ನಗು ತಡೆಯಲಾಗಲಿಲ್ಲವಂತೆ. ಆ ನೆಟ್ ಬನಿಯನ್ ವ್ಯಕ್ತಿ ಇನ್ನಾರೂ ಅಲ್ಲ, ಕೈಲಾಸಂ.

ಕೈಲಾಸಂ ಜೊತೆಗಿನ ಸಂಪರ್ಕ ರಾ.ಶಿ.ಯವರ ಜೀವನದೃಷ್ಟಿಯನ್ನೇ ಬದಲಿಸುವಂತಹ ಪರಿಣಾಮ ಬೀರಿತ್ತು. ರಾ.ಶಿ.ಯವರು ವಿಕ್ಟೋರಿಯಾ ಆಸ್ಪತ್ರೆಯ ಆವರಣದಲ್ಲಿದ್ದ ತಮ್ಮ ಮೆಡಿಕಲ್ ಕಾಲೇಜಿನ ತರಗತಿಗಳನ್ನು ಮುಗಿಸಿಕೊಂಡು ಸಂಜೆ ಕೈಲಾಸಂ ಅವರನ್ನು ನೋಡಲು ಹೋಗುತ್ತಿದ್ದರು. ಕೈಲಾಸಂ ಆ ದಿನಗಳಲ್ಲಿ ತಮ್ಮ ತಂದೆ ಪರಮಶಿವ ಐಯರ್ ಅವರು ವಾಸಿಸುತ್ತಿದ್ದ ವೈಟ್‌ಹೌಸ್‌ನ ಹಿಂಭಾಗದಲ್ಲಿದ್ದ ಕೊಠಡಿಯೊಂದರಲ್ಲಿ ವಾಸಿಸುತ್ತಿದ್ದರು. ರಾ.ಶಿ., ತಂದೆಯ ಕಣ್ಣು ತಪ್ಪಿಸಿ ಮಗನ ಕೊಠಡಿಗೆ ಹೋಗಬೇಕಾಗಿತ್ತು. ಅನಂತರ ಕೈಲಾಸಂರವರೊಡನೆ ಕಂಟೋನ್‌ಮೆಂಟ್‌ಗೆ ಸೈಕಲ್ಲಿನಲ್ಲಿ ಸವಾರಿ. ದಾರಿಯುದ್ದಕ್ಕೂ ಮಾತುಕತೆ. ಅನೇಕ ಬಾರಿ, ಕಂಟೋನ್‌ಮೆಂಟಿನ ಪೆರೇಡ್ ಗ್ರೌಂಡ್ಸ್ ಹತ್ತಿರ ಇದ್ದ ಚರ್ಚಿನ ಆವರಣದಲ್ಲಿ ಕುಳಿತು, ಏಕಲವ್ಯ, ಮಾರ್ಕಾಂಡೇಯ, ಕರ್ಣ ಇವರುಗಳ ಬಗ್ಗೆ ಕೈಲಾಸಂ ಕಥನಮಾಡುತ್ತಿದ್ದಾಗ ರಾ.ಶಿ. ತಲ್ಲೀನರಾಗಿ ಕೇಳುತ್ತಿದ್ದರಂತೆ. "ಕೈಲಾಸಂ ಅವರ ಮಾರ್ಕಾಂಡೇಯ ಚಿತ್ರಣ ನನ್ನ ವ್ಯಕ್ತಿತ್ವವನ್ನೇ ಬದಲಿಸಿತು. ಅಹಂಕಾರ, ಸ್ವಾರ್ಥ ಸ್ವಲ್ಪ ಕರಗಿ ನಾನು ಮನುಷ್ಯವರ್ಗಕ್ಕೆ ಸೇರುವಂತಾದೆ" ಎನ್ನುತ್ತಾರೆ ರಾ.ಶಿ.

೧೯೪೨ರಿಂದ ಸತತವಾಗಿ ಇಪ್ಪತ್ತೈದು ವರ್ಷಗಳ ಕಾಲ ನಾಡಿನ ಹಾಸ್ಯರಸಿಕರನ್ನು ರಂಜಿಸಿದ 'ಕೊರವಂಜಿ'ಯ ಹುಟ್ಟಿಗೆ ರಾ.ಶಿ.ಯವರೊಂದಿಗೆ ಒತ್ತಾಸೆಯಾಗಿ ನಿಂತವರು, ನಾ. ಕಸ್ತೂರಿಯವರು. ಸಮಾನ ಮನೋಧರ್ಮದ ಇವರಿಬ್ಬರ ಭೇಟಿ ಕನ್ನಡ ನಗೆಸಾಹಿತ್ಯಕ್ಕೆ ಒಂದು ಮಹತ್ವದ ಘಟನೆಯಾಗಿ ಪರಿಣಮಿಸಿತು. ಖ್ಯಾತ ವ್ಯಂಗ್ಯಚಿತ್ರಕಾರ ಆರ್.ಕೆ. ಲಕ್ಷ್ಮಣ್ ಆ ದಿನಗಳಲ್ಲಿ ಕಸ್ತೂರಿಯವರ ವಿದ್ಯಾರ್ಥಿ. ಲಕ್ಷ್ಮಣ್ ಚಿತ್ರಗಳು, ರಾ.ಶಿ., ಕಸ್ತೂರಿ, ಇವರುಗಳ ನಗೆಲೇಖನಗಳೊಂದಿಗೆ ೧೯೪೨ರ ಕಾಮನಹಬ್ಬದಂದು (ಮಾರ್ಚಿ ೧೮) ಜನ್ಮತಾಳಿದ 'ಕೊರವಂಜಿ'ಗೆ ಆ ಯುದ್ಧದ ದಿನಗಳಲ್ಲೂ ಒಳ್ಳೆಯ ಭವಿಷ್ಯ ಇರುವ ಸೂಚನೆಗಳಿದ್ದವು. ಹೇಳಿಕೊಳ್ಳುವಂತಹ ಯಾವ ಹಾಸ್ಯಸಾಹಿತ್ಯವೂ ಇಲ್ಲದ ಆ ಕಾಲದಲ್ಲಿ ಸಹಜವಾಗಿಯೇ ನಾಡಿನ ಓದುಗರು 'ಕೊರವಂಜಿ'ಯನ್ನು ಆದರದಿಂದ ಬರಮಾಡಿಕೊಂಡರು. ಒಂದು ತಲೆಮಾರಿನ ಹಾಸ್ಯ ಪ್ರಜ್ಞೆಯನ್ನು ರೂಪಿಸುವುದರಲ್ಲಿ 'ಕೊರವಂಜಿ' ವಹಿಸಿದ ಪಾತ್ರ ಕಡಿಮೆಯೇನಲ್ಲ. ಪ್ರಾರಂಭದಲ್ಲಿ ರಾ.ಶಿ., ನಾ. ಕಸ್ತೂರಿಯವರುಗಳ ಲೇಖನಗಳೇ ತುಂಬಿರುತ್ತಿದ್ದ ಕೊರವಂಜಿಗೆ ಕಾಲಕ್ರಮೇಣ ಹೊಸ ನಗೆಗಾರರು ಬಂದು ಸೇರಿದರು. ಟಿ. ಸುನಂದಮ್ಮ, ಕೇಫ, ಅ.ರಾ.ಸೇ., ರಾಮಿ, ದಾಶರಥಿ ದೀಕ್ಷಿತ್ ಇವರುಗಳು ರಾ.ಶಿ.ಯವರೊಂದಿಗೆ ನಡೆಸುತ್ತಿದ್ದ ಸಂವಾದ, ವಿಚಾರ ವಿನಿಮಯ ಇವುಗಳು ಹಾಸ್ಯಸಾಹಿತ್ಯ ಪ್ರಕಾರದಲ್ಲಿ 'ಕೊರವಂಜಿ'ಗೆ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿಕೊಟ್ಟಿತು. ದಿನನಿತ್ಯದ ಆಗುಹೋಗುಗಳಿಗೆ ಸ್ಪಂದಿಸಿ ಬರೆಯುತ್ತಿದ್ದ "ಕುಹಕಿಗಳು" ಹಾಗೂ "ಉರಿಗಾಳು" ಅಂಕಣಗಳು, ರಾ.ಶಿ.ಯವರ ಅರಳು ಹುರಿದಂತಹ ಮಾತುಗಾರಿಕೆಯನ್ನು ಹೋಲುತ್ತಿದ್ದವು. "ಕೊರವಾವಲೋಕನ" ಸಮಾಜದ ಏರುಪೇರು ಮೌಲ್ಯಗಳನ್ನು ಲೇವಡಿಮಾಡಿ ಬರೆದಂತಹ ಕಾಲಂ. ಇದರಲ್ಲಿ ಹೀರೋ ಕೊರವ. ಅವನು ತೀಕ್ಷ್ಣಮತಿ, ಮಾತುಗಾರ, ನಗುಸರಸಿ. ಸೆಂಚುರಿ ಕ್ಲಬ್ಬಿನಲ್ಲಿ ಇವ ಬಂದು ಕೂತರೆ ಇವನದ್ದೇ ದರ್ಬಾರು. ನಮ್ಮ

ತಂದೆ ಕೊರವನನ್ನು ತಮ್ಮ ತದ್ರೂಪಿನಲ್ಲಿ ಚಿತ್ರಿಸಿದ್ದರೆಂಬುದು ನಮಗೆಲ್ಲಾ ತಿಳಿದ ಮಾತು. ಅವರು ಸೆಂಚುರಿ ಕ್ಲಬ್ಬಿಗೆ ಟೆನ್ನಿಸ್ ಆಡಲು ಹೋಗುತ್ತಿದ್ದ ದಿನಗಳಲ್ಲಿ, ಸಂಜೆ ಆಟ ಮುಗಿದ ಮೇಲೆ ಸ್ನೇಹಿತರೊಂದಿಗೆ ಕುಳಿತು ಏಳು ಘಂಟೆಯವರೆಗೂ "High Voltage Talk Show" ನಡೆಸಿ ನಗೆಬುಗ್ಗೆಗಳನ್ನು ಚಿಮ್ಮಿಸುತ್ತಿದ್ದರು. ರಾ.ಶಿ.ಯವರ ಸಾಂದರ್ಭಿಕ ಜೋಕುಗಳನ್ನು ಕೇಳುವುದಕ್ಕಾಗಿಯೇ ಹಲವು ಮಿತ್ರರು ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಬರುತ್ತಿದ್ದರಂತೆ.

ರಾ.ಶಿ.ಯವರ ನಗೆಸಾಹಿತ್ಯವನ್ನು ಕುರಿತು ಮಾತನಾಡುವಾಗ "ನಗು" ಎಂದರೇನು? ಎಂಬ ಪ್ರಶ್ನೆ ಉದ್ಭವಿಸುವುದು ಸಹಜ. ನಗು ಒಂದು ರಿಫ್ಲೆಕ್ಸ್ ಕ್ರಿಯೆ. ಬೆಂಕಿ ತಾಗಿದರೆ ಹೇಗೆ ಕೈ ತಾನೇ ತಾನಾಗಿ ಹಿಂದಕ್ಕೆಳೆದುಕೊಳ್ಳುವುದೋ ಹಾಗೆಯೇ, ಕಚಗುಳಿ ಇಟ್ಟರೆ ಒಳ್ಳೆಯ ನಗೆಹನಿ ಓದಿದರೆ ವ್ಯಂಗ್ಯ ಚಿತ್ರವೊಂದನ್ನು ನೋಡಿದರೆ ತಾನೇ ತಾನಾಗಿ ಹೊರಹೊಮ್ಮುವ ಶಾರೀರಿಕ ಪ್ರತಿಕ್ರಿಯೆ ನಗು. ಮಾನವನ ವಿಕಾಸದ ಹಾದಿಯಲ್ಲಿ, ಇತರ ಜೈವಿಕ ಕ್ರಿಯೆಗಳಿಗಿರುವಂತೆ, ಈ "ನಗು"ವಿಗೆ ಶರೀರವನ್ನು ಕಾಪಾಡುವಂತಹ ಜೈವಿಕ ಉದ್ದೇಶವೇನೂ ಇದ್ದಂತೆ ಕಾಣುವುದಿಲ್ಲ. ಖ್ಯಾತ ದಾರ್ಶನಿಕ, ಲೇಖಕ, ಆರ್ಥರ್ ಕ್ಲೇಸ್ಲರ್, "ನಗು"ವಿನ ಬಗ್ಗೆ ಆಳವಾಗಿ ಅಧ್ಯಯನ ನಡೆಸಿದ್ದಾನೆ. ಅವನ ಪ್ರಕಾರ ಮನಸ್ಸಿನ ಕ್ರಿಯೆಗಳು ಅನೇಕ ಸ್ತರಗಳಲ್ಲಿ ನಡೆಯುತ್ತಿರುತ್ತವೆ. ಒಮ್ಮೊಮ್ಮೆ ಅತಿ ಅನಿರೀಕ್ಷಿತವಾಗಿ ಒಂದು ಸ್ತರದಲ್ಲಿನ ಚಿಂತನೆ ಇನ್ನೊಂದು ಸ್ತರಕ್ಕೆ ನೆಗೆದಾಗ ಥಟ್ಟನೆ ನಗು ಹೊರಹೊಮ್ಮುತ್ತದೆ. ರಾ.ಶಿ.ಯವರ ಕುಹಕಿಡಿಗಳು ಇದಕ್ಕೆ ಉತ್ತಮ ನಿದರ್ಶನ.

"ಆತ್ಮಹತ್ಯೆ ಮಾಡಿಕೊಳ್ಳುವುದಕ್ಕಾಗಿ ರೈಲು ಕಂಬಿಗಳ ಮೇಲೆ ತಲೆ ಇರಿಸಿಕೊಂಡು ಮಲಗಿದ್ದ ಬಡಪಾಯಿ ಪ್ರಾಣಿಯೊಬ್ಬ ರೈಲಿಗಾಗಿ ಕಾದು, ಕಾದು ಉಪವಾಸದಿಂದಲೇ ಪ್ರಾಣಬಿಟ್ಟನಂತೆ."

"ನಮ್ಮ ಮಗು ಏನೇನೋ ಮಾತನಾಡುತ್ತಿದೆ, ಒಂದೂ ಖಚಿತವಾಗಿ ಅರ್ಥವಾಗುಲ್ಲ" ಅಂತ ತಾಯಿ ಹೇಳಿದರೆ, "ಹೆದರಬೇಡಿ ತಾಯಿ, ಇವ ಮುಂದೆ ಮಂತ್ರಿ ಆಗ್ತಾನೆ" ಅಂತ ವೈದ್ಯರು ಭರವಸೆ ನೀಡಿದರಂತೆ.

ಜೀವನದಲ್ಲಿ ಜುಗುಪ್ಸೆ ಹೊಂದಿ, ಆತ್ಮಹತ್ಯೆಯ ಮೊರೆಹೋಗುವುದು ಒಂದು ತಾರ್ಕಿಕ ನೆಲೆ. ರೈಲು ಸಮಯಕ್ಕೆ ಸರಿಯಾಗಿ ಬರದೇ ಪ್ರಯಾಣಿಕರು ಕಾದು ಸುಸ್ತಾಗುವುದು ಇನ್ನೊಂದು ಸ್ತರ. ಇವೆರಡೂ ಆಕಸ್ಮಿಕವಾಗಿ ಒಂದುಗೂಡಿದಾಗ, ಆ ಬಡಪ್ರಾಣಿಯ ಇಷ್ಟಾರ್ಥ ಕೈಗೂಡಿ ನಗೆ ಚಿಮ್ಮುತ್ತದೆ.

ಅಂತೆಯೇ ಮಗು ಏನೇನೋ ಬಡಬಡಿಸಿದರೆ ತಾಯಿಗೆ ಸಹಜವಾಗಿಯೇ ಆತಂಕ. ಆದರೆ ಬೆಳೆದ ಮನುಷ್ಯನಾದ ಸಚಿವ ಸಹಾ ಹಾಗೆ ಅರ್ಥವಿಲ್ಲದೇ ಮಾತನಾಡುವುದನ್ನು ಕಂಡಿರುವ ವೈದ್ಯ, ಎರಡು ಸ್ತರಗಳ ಕೂಡುಬಿಂದುವಿನಲ್ಲಿ ನಗೆ ತರಿಸಿ, ತಾಯಿಯ ಮನಸ್ಸನ್ನು ಹಗುರ ಮಾಡುತ್ತಾನೆ.

ಮನುಷ್ಯನ ಸಮಗ್ರ ಆರೋಗ್ಯಕ್ಕೆ ಹಾಸ್ಯಪ್ರಜ್ಞೆ ಅತ್ಯಗತ್ಯ. ಒಮ್ಮೆ ರಾ.ಶಿ.ಯವರು, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳನ್ನು ಮಿತ್ರಷಡ್ವರ್ಗಗಳೆಂದು ಕರೆದಿದ್ದರು. ಮಗು ಸಣ್ಣವನಿದ್ದಾಗ ಒಂದು ವ್ಯಕ್ತಿತ್ವವನ್ನು ಪಡೆಯಲು, ಮುಂಬರುವ ಜೀವನದ ಹೋರಾಟದಲ್ಲಿ ಗೆಲ್ಲುವ ತಜ್ಞತೆಯನ್ನು ಸಂಪಾದಿಸಲು ಈ ಎಲ್ಲ ಗುಣಗಳು ಒಂದಲ್ಲ ಒಂದು ಬಾರಿ ಉಪಯೋಗಕ್ಕೆ

ಬರುತ್ತವೆ. ಆದರೆ ಮಗು ದೊಡ್ಡವನಾದ ಮೇಲೂ ಈ ಗುಣಗಳ ಪ್ರಭಾವ ಅವನ ಮೇಲೆ ಮುಂದುವರಿದರೆ ಅವು ಅರಿಷಡ್ವರ್ಗಳಾಗಿ ಬದಲಾಗುತ್ತವೆ. ಅರಿಷಡ್ವರ್ಗಗಳ ಕೈಬಿಟ್ಟು ಮನುಷ್ಯ ಪ್ರಬುದ್ಧನಾಗುವ ಹಾದಿಯಲ್ಲಿ ಹಾಸ್ಯಪ್ರಜ್ಞೆಯ ಪಾತ್ರ ಹಿರಿದು. ಒಂದು ರೀತಿಯಲ್ಲಿ ನೋಡಿದರೆ, ಒಬ್ಬ ವ್ಯಕ್ತಿಯ ಹಾಸ್ಯಪ್ರಜ್ಞೆ ಆತನ ಪ್ರಬುದ್ಧತೆಯ ಸಂಕೇತ ಎಂತಲೂ ಹೇಳಬಹುದು. ಬಹುಶಃ ತೀವ್ರವಾಗಿ ಬದಲಾಗುತ್ತಿರುವ ಈ ಆಧುನಿಕ ಯುಗದಲ್ಲಿ, ಮಾನವ ತನ್ನ ಮನಸ್ಸನ್ನು ಆತಂಕಗಳ ಆಘಾತದಿಂದ ರಕ್ಷಿಸಿಕೊಂಡು, ಮನಸ್ಸಿನ ಸಮತೋಲನವನ್ನು ಕಾಪಾಡಿಕೊಳ್ಳಲು ಪ್ರಕೃತಿ ಮುಂಗಡವಾಗಿಯೇ ಅವನಿಗೆ ನೀಡಿರುವ ಬಳುವಳಿ ಹಾಸ್ಯಪ್ರಜ್ಞೆ.

ಇನ್ನು ಈ ಸಂಕಲನದಲ್ಲಿ ಆರಿಸಿರುವ ಬರಹಗಳ ಕುರಿತು ಎರಡು ಮಾತು. ರಾ.ಶಿ.ಯವರ ನಗೆಸಾಹಿತ್ಯ ನಾಲ್ಕು ದಶಕಗಳ ಸಾಹಿತ್ಯಕೃಷಿಯ ಫಲಶೃತಿ. ಸಾವಿರದ ಐನೂರಕ್ಕೂ ಮಿಕ್ಕಿದ ಪುಟಗಳಿಂದ ಈ ಇನ್ನೂರು ಪುಟಗಳನ್ನು ಹೆಕ್ಕಿ ತೆಗೆಯುವ ಕೆಲಸ ಖುಷಿಕೊಡುವ ಕಾರ್ಯವಾದರೂ, ಉತ್ತಮ ಲೇಖನಗಳನ್ನು ಸ್ಥಳಾಭಾವದಿಂದ ಕೈಬಿಡಬೇಕಾದದ್ದು ಅನಿವಾರ್ಯವಾದಾಗ ಸಂದಿಗ್ಧ ಪರಿಸ್ಥಿತಿ ಒದಗಿದ್ದು ನಿಜ. ರಾ.ಶಿ.ಯವರ ಚೊಚ್ಚಲ ಕೃತಿಯಾದ "ತುಟಿ ಮೀರಿದುದು" ನಮ್ಮ ಈ ಸಂಕಲನಕ್ಕೆ ಎಂಟು ಲೇಖನಗಳನ್ನು ಒದಗಿಸಿದೆ. ಒಂದು ಹೊಸ ಪ್ರಕಾರವನ್ನು ಸೃಷ್ಟಿಸುವಾಗ ಕೂಡಾ ಲೇಖನಗಳಲ್ಲಿ ತಾಜಾತನ ಹೇಗೆ ಮೂಡಬಲ್ಲದು ಎಂಬುದಕ್ಕೆ ಈ ಕೃತಿಯ ಬರಹಗಳು ಒಳ್ಳೆಯ ನಿದರ್ಶನ. "ಕೆಣಕೋಣು ಬಾರ" ಎಂಬ ಶೀರ್ಷಿಕೆಯಡಿಯಲ್ಲಿ ತಮ್ಮ ಅಣಕವಾಡುಗಳನ್ನು ರಾ.ಶಿ.ಯವರು ಪ್ರಕಟಿಸುವುದಕ್ಕೆ ಮುಖ್ಯ ಪ್ರೇರಣೆ ಶ್ರೀ ಜಿ.ಪಿ. ರಾಜರತ್ನಂ. ೧೯೫೭ರಲ್ಲಿ ಪ್ರಕಟವಾದ ಈ ಕವನ ಸಂಗ್ರಹ ತನ್ನ ಪ್ರಕಾರದಲ್ಲಿ ಒಂದು ಹೊಸ ಪ್ರಯತ್ನ ಎಂದು ಹೇಳಬಹುದು. ಅಣಕವಾಡುಗಳು ಹಾಸ್ಯದ ಒಂದು ನವಿರಾದ ರೂಪ. ಇದನ್ನು ಆಸ್ವಾದಿಸಬೇಕಾದರೆ, ಮೂಲ ಕವಿಯ ಪದಪ್ರಯೋಗದ ಅರ್ಥ, ಅಂತರಾರ್ಥಗಳನ್ನು ಓದುಗನು ಚೆನ್ನಾಗಿ ತಿಳಿದಿದ್ದರೆ ಮಾತ್ರ ಸಾಧ್ಯ.

ರಾ.ಶಿ.ಯವರು ೧೯೬೦ರಲ್ಲಿ ಒಂದು ವೈದ್ಯರ ತಂಡದೊಂದಿಗೆ ಐರೋಪ್ಯದೇಶಗಳನ್ನು ಸುತ್ತಿ ಬಂದರು. ಸುತ್ತಿ ಬಂದದ್ದು ವೈದ್ಯ ಡಾ|| ಶಿವರಾಂ ಆದರೂ ಎಂಟು ವರ್ಷಗಳ ನಂತರ ಆ ಯಾತ್ರೆಯನ್ನು ದಾಖಲಿಸಿದ್ದು 'ಕೊರವಂಜಿ'ಯ ರಾ.ಶಿ. "ಕೊರವಂಜಿಯ ಪಡುವಣ ಯಾತ್ರೆ" ಎಂಬ ಹೆಸರಿನಲ್ಲಿ ರಾ.ಶಿ. ತಮ್ಮ ಐರೋಪ್ಯ ದೇಶಗಳ ಪ್ರವಾಸವನ್ನು ನಗೆಗಣ್ಣಿನಿಂದ ಬಣ್ಣಿಸಿದ್ದಾರೆ. ಎಲ್ಲರಿಗೂ ಕಾಣಸಿಗುವ ವಸ್ತುವನ್ನೇ ಕುಶಲತೆಯಿಂದ ಬಳಸಿ, ಓದುಗರಿಗೆ ಕಚಗುಳಿಯಿಡುವ ಯತ್ನದಲ್ಲಿ ಪಡುವಣ ಯಾತ್ರೆ ಯಶಸ್ವಿಯಾಗಿದೆ. ಗೆಳೆಯ ಜಿ.ಪಿ. ರಾಜರತ್ನಂಗೆ ಅವರ ಅರುವತ್ತನೆಯ ಹುಟ್ಟಿದ ಹಬ್ಬಕ್ಕೆ ರಾ.ಶಿ.ಯವರು ಕೊಟ್ಟ ಉಡುಗೊರೆ "ಇಂದಾನೊಂದು ಕಾಲದಲ್ಲಿ". ಎಲ್ಲರೂ ಚಿಕ್ಕಂದಿನಲ್ಲಿ ಕೇಳಿರುವ ಮಕ್ಕಳ ಕಥೆಗಳಲ್ಲಿನ ಕಾಗಕ್ಕ, ಗುಬ್ಬಕ್ಕ, ನರಿರಾಯ, ಹುಂಜಪ್ಪ, ಇವರುಗಳೆಲ್ಲಾ, ರಾ.ಶಿ.ಯವರ ಲೇಖಣಿಯಲ್ಲಿ, ಸೆರಗು ಹಾರಿಸಿ ವಾಲಾಡುವ ತರುಣಿಯರ, ಟೋಪಿ ಧರಿಸಿದ ಪುಡಾರಿಗಳ ರೂಪದಳೆಯುತ್ತವೆ. ಈ ಆಧುನಿಕ ಕಾಗಕ್ಕಗಳು ಸಮಾಜದ ಆಟಗಳನ್ನು ಆಡಿ, ಓದುಗರಿಗೆ ನಗೆಯನ್ನು ತರುವುದರ ಜೊತೆಗೆ ಸಮಾಜದ ಓರೆ ಕೋರೆಗಳ ಮೇಲೆ ಕ್ಷ-ಕಿರಣವನ್ನು ಬೀರುವುದರಲ್ಲಿ ಯಶಸ್ವಿಯಾಗುತ್ತವೆ.

ಪ್ರೇಮಸಲ್ಲಾಪ, ಪ್ರಣಯ ಪ್ರಸಂಗಗಳು, ಅನೈತಿಕ ಸಂಬಂಧಗಳು ಇವುಗಳನ್ನು ಅಶ್ಲೀಲತೆಯ ಸೋಂಕಿಲ್ಲದೇ ಅಪ್ಸರೆ, ಗಂಧರ್ವರ ಪರಿಸರದಲ್ಲಿ ವಿವರಿಸಿ ಹೇಳಿದ ಕಥೆಗಳು "ನಗು ಸರಸಿ ಅಪ್ಸರೆಯರು". ಅಪ್ಸರೆಯರು, ಗಂಧರ್ವರು ನಮ್ಮ ಪುರಾಣಗಳಲ್ಲಿ ಏಕೆ ಕಾಣಿಸಿಕೊಂಡರು? ಎಂಬ ಪ್ರಶ್ನೆಗೆ ರಾ.ಶಿ. ನೀಡುವ ಉತ್ತರ ನೋಡಿ.

"ವೇದ, ಬ್ರಹ್ಮಸೂತ್ರ, ಉಪನಿಷತ್ತುಗಳನ್ನು ಸ್ವಾನುಭವದಿಂದ ರಚಿಸಿದ ನಮ್ಮ ಹಿರಿಯರು, ಪ್ರಾಣಿಸಹಜವಾದ ಲೈಂಗಿಕ ಭಾವನೆಗಳನ್ನು ಯಾವ ವೈದ್ಯಕೀಯ ಮಾರ್ಗದಲ್ಲಿ ಪರಿಹರಿಸಿ ವೇದಾಧ್ಯಯನದಲ್ಲಿ ತೊಡಗುತ್ತಿದ್ದರು? ಮನೋಲೋಕದಲ್ಲಿ ಗಂಧರ್ವರು, ಅಪ್ಸರೆಯರು ಎಂಬ ಕೃತಿಗಳನ್ನು ರಚಿಸಿಕೊಂಡರು. ತಮ್ಮ ಮನಸ್ಸಿನ ಆಳದಲ್ಲಿ ಆಸೆ ಮೂಡಿದಂತೆ ಯಾವಯಾವುದನ್ನು ಮಾಡಬೇಕು ಎನಿಸಿತೋ ಅವುಗಳನ್ನೆಲ್ಲಾ ಅಪ್ಸರೆಯರ, ಗಂಧರ್ವರ ಮೂಲಕ ನಡೆಯಿತು ಎಂದು ಕತೆ ಕಟ್ಟಿ ಹೇಳಿದರು. ಇಂತಹ ಕತೆಗಳು ಕೇಳುವವರ ಆಸೆ ಆಕಾಂಕ್ಷೆಗಳನ್ನು ನೆರವೇರಿಸುತ್ತಿದ್ದುದರಿಂದ ಅವರಿಗೂ ಪ್ರಿಯವಾಯಿತು. ಹೀಗಾಗಿ ಪುರಾತನವಾದ ಈ ಹಗಲುಗನಸುಗಳು ಪುರಾಣ, ಪುಣ್ಯಕಥೆಗಳಾದವು."

ಕೊರವಂಜಿಯಲ್ಲಿ ರಾ.ಶಿ. ಸೃಷ್ಟಿಸಿದ ಅನೇಕ ಪಾತ್ರಗಳನ್ನು, ಘಟನೆಗಳನ್ನು "ಕೊರವಂಜಿ ಕಂಡ...." ಮಾಲಿಕೆಯಲ್ಲಿ ನೋಡಬಹುದು. ಈ ಮಾಲಿಕೆಯಲ್ಲಿನ ನಾಲ್ಕು ಪುಸ್ತಕಗಳಾದ, 'ನಗು ವ್ಯಕ್ತಿಗಳು', 'ನಗು ದರ್ಬಾರಿಗರು', 'ನಗು ಸಮಾಜ' ಹಾಗೂ 'ನಗು ಸಂಸಾರಗಳು' ಇವುಗಳಿಂದ ಒಟ್ಟು ಹನ್ನೆರಡು ಲೇಖನಗಳನ್ನು ಆರಿಸಿದ್ದೇನೆ. ನಾಲ್ಕು ದಶಕಗಳಷ್ಟು ಹರಹಿನ ನಾಡಿನ ವಿದ್ಯಮಾನಗಳನ್ನು ವಾರೆನೋಟದಿಂದ ನೋಡಿ ನಗುವ ಈ ಲೇಖನಗಳಿಗೆ ಚಾರಿತ್ರಿಕ ಮೌಲ್ಯವೂ ಇದೆ ಅನ್ನಿಸುತ್ತದೆ ನನಗೆ.

ರಾ.ಶಿ.ಯವರ ನಗೆ ಲೇಖನಗಳನ್ನು ಆಯ್ದು ಪ್ರಕಟಿಸುವ ನಿರ್ಧಾರವನ್ನು ಕೈಗೊಂಡ ಪ್ರಿಸಮ್ ಬುಕ್ಸ್‌ನ ಪ್ರಾಣೇಶ್ ಸಿರಿವರ ಹಾಗೂ ರಂಗನಾಥನ್ ಇವರಿಗೆ ನನ್ನ ಮೊದಲ ಕೃತಜ್ಞತೆಗಳು. ಲೇಖನಗಳನ್ನು ಆರಿಸುವ ಕೆಲಸದಲ್ಲಿ ನನ್ನ ನೆರವಿಗೆ ಬಂದ ತಮ್ಮ ಓಂಪ್ರಕಾಶ್ ಮತ್ತು ಅಣ್ಣ ಶೀನು ಇವರೀರ್ವರಿಗೆ ನಾನು ಆಭಾರಿ.

"ನಗುಸಾಹಿತ್ಯ ಚಿರಾಯುವಾಗಲಿ. ಅರಿವಿನ ಹಾದಿ ತೋರಲಿ."

೨೮ ನವೆಂಬರ್ ೧೯೯೯
ಮಲ್ಲೇಶ್ವರಂ, ಬೆಂಗಳೂರು

ಎಂ. ಶಿವಕುಮಾರ್

# ಒಳಪುಟಗಳಲ್ಲಿ

(ಒಂಬತ್ತು ಸಂಕಲನಗಳಿಂದ)


I ತುಟಿ ಮೀರಿದದು

೧. ಸ್ವತಂತ್ರ ಶೈಲಿ ೧
೨. ಕನ್ನಡಿ ಒಳಗಿನ ಗಂಟು ೬
೩. ಕುಪ್ಪಣ್ಣ ೧೦
೪. ಸೋಪಿನ ಶಾಮಿ ರಾವಬಹದ್ದೂರನಾದದ್ದು ೧೬
೫. ಅಮ್ಮಣ್ಣಿ ೨೦
೬. ಚೆಲುವನ ಚೆನ್ನ ೨೬

II ಕೊರವಂಜಿಯ ಪಡುವಣಯಾತ್ರೆ

೭. ಇಟಲಿ, ನಮ್ಮ ಕೇರೀನೇ! ೩೧
೮. ವಿಯನ್ನಾ ಬೈ ನೈಟ್ ೩೫
೯. ಮಾಸ್ಕೋದಲ್ಲಿ ನಟಾಷಾ! ೪೨
೧೦. ಸ್ವಕ್-ಹೋಂ ೪೭

III ಇಂದಾನೊಂದು ಕಾಲದಲ್ಲಿ

೧೧. ಕೂಗು ಮಾರಿ ಕತೆ ೫೩
೧೨. ತಿಗಣೆ ಸೊಸೆ ಕತೆ ೫೬
೧೩. ಗೆದ್ದು ಬಿದ್ದ ಹುಂಜದ ಕತೆ ೫೯
೧೪. ಗುಬ್ಬಚ್ಚಿ-ಪೋಟೋ ಕತೆ ೬೨
೧೫. ಕಪ್ಪೆ ಮತ್ತು ರಾಜಕುಮಾರಿ ಕತೆ ೬೭
೧೬. ಕಾಗಕ್ಕ ಗುಬ್ಬಣ್ಣನ ಕತೆ ೭೦

IV ಕೊರವಂಜಿ ಕಂಡ ನಗು ಸಮಾಜ

೧೭. ಗಣೇಶ ಉದ್ಭವಿಸಿದ ೭೩
೧೮. ಪ್ರಭಾವ ಬೀರಿದ ಪುಸ್ತಕಗಳು ೭೭
೧೯. ಬುಧರೇಖಾ ೮೩
೨೦. ಹೀಗೆ ಅವಮಾನ ಮಾಡಬಹುದೇ ೮೭
೨೧. ರೂಂ ಬಾಡಿಗೆಗಿದೆ ೯೦

V ನಗುಸರಸಿ ಅಪ್ಸರೆಯರು
೨೨. "ಎಡಗಡೆಯದೋ ಅಥವಾ" ೯೩
೨೩. "ಬಂದೆ ನಾನು" ಎಂಬ ಶುಕವಾಣಿ ೯೮
೨೪. ಹಂಸ-ಸಂದೇಶ ೧೧೧
೨೫. ಬದ್ದುದಳ ಬಹುಮಾನ ೧೧೯
೨೬. ಮೇನಕೆಯ ತಾಯ್ತನ ೧೨೯

VI ಕೊರವಂಜಿ ಕಂಡ ನಗು ವ್ಯಕ್ತಿಗಳು
೨೭. ಜೇಬುಗಳ್ಳ ಜಿಮ್ಮಿ ೧೩೯
೨೮. ಗುಂಡಯ್ಯ ೧೪೪
೨೯. ಕೊಠಡಿ ನಂಬ್ರ ೪೨೦ ೧೫೦
೩೦. "ಮನ್ಸೂರರ ರಜಾ ಪ್ರವಾಸ" ೧೫೬

VII ಕೊರವಂಜಿ ಕಂಡ ನಗು ದರ್ಬಾರಿಗರು
೩೧. ರಂಗತ್ತೆಯ ಪಂಚತಂತ್ರ ೧೬೪
೩೨. ಇಂದಾ-ಗೆ ಗುಮಾಸ್ತೆ ೧೬೮

VIII ಕೊರವಂಜಿ ಕಂಡ ನಗು ಸಂಸಾರಗಳು
೩೩. ಹೆಣ್ಣು ನೋಡುಕ್ಕೆ ಬಂದಾಗ ೧೭೨

ತುಟಿ ಮೀರಿದುದು
೩೪. ಹಾರ್ಮೊನಿಯ ಗಾನ ೧೭೭
೩೫. ಆಶಾ ಕಾಕೀ ೧೭೮

IX ಕೆಣಕೋಣು ಬಾರ
೩೬. ಹೌಸ್ ಸರ್ಜನನಿಂದ... ಟಕಟಕ—ಗೆ ೧೭೯
೩೭. ನೀ ಬರುವ ದಾರಿಯಲಿ ೧೮೨
೩೮. ಚುನಾವಣಾ! ೧೮೪
೩೯. ಶಿವು—ಮಾರ್ವಾಡಿ ೧೮೭
೪೦. ಅತ್ತೆ—ಅಳಿಯ ೧೮೯
೪೧. ನಡುರಾತ್ರಿ ೧೯೧
೪೨. ಲಂಚ ಕೈಗೆ ತಾ ೧೯೩
ರಾ.ಶಿ. ಕೃತಿಗಳ ಪಟ್ಟಿ ೧೯೫

# ಸ್ವತಂತ್ರ ಶೈಲಿ

"ಅಚ್ಚುಹಾಕಿದಾಕ್ಷಣವೇ ಪದ್ಯವಾಗಿ ಹೋಗೀತೆ"
-ಹೊಸ ಗಾದೆ.

**ಕೆ**ಲವು ದಿನಗಳ ಹಿಂದೆ 'ಯುವಕ-ಕವಿ-ಸಮ್ಮೇಳನ'ವೊಂದನ್ನು ಏರ್ಪಡಿಸಲಾಗಿತ್ತು. ಒಳ್ಳೇ ಸಂಗೀತ ಸಾಹಿತ್ಯದ ಸುಗ್ಗಿ ಇರಬಹುದೆಂದು ನಾನೂ ಸಮ್ಮೇಳನಕ್ಕೆ ಪ್ರೇಕ್ಷಕನಾಗಿ ಹೋಗಿದ್ದೆ. ಒಬ್ಬೊಬ್ಬರೂ ಅವರವರು ಬರೆದ ಪದ್ಯಗಳನ್ನು ಆವೇಶಯುತವಾಗಿ ಓದಿದರು. ನನಗೇಕೊ ಅವೆಲ್ಲಾ ನಾವಾಡುವ ಮಾತಿನಂತೆ ಕಾಣುತ್ತಿತ್ತೇ ವಿನಹಾ ಪದ್ಯಗಳಂತೆ ಕೇಳಿಸಲಿಲ್ಲ. ಅರಿತವನೆಂಬೊಬ್ಬ ಸದಸ್ಯ—ಅವನಿಗೆ ಯಾವಾಗಲೋ ಐದು ರೂಪಾಯಿ ಸಾಲವನ್ನು ಕೊಟ್ಟಿದ್ದೆ—ಅವನನ್ನು ಕೇಳಿದೆ "ಅಯ್ಯಾ ಇದೇನು ಪದ್ಯಗಳು ಇವು! ಅಚ್ಚಾಗಿದ್ದರೆ ನನಗೆ ತೋರಿಸುವೆಯಾ?" ಎಂದು. ಅಲ್ಲೇ ಏರ್ಪಡಿಸಲ್ಪಟ್ಟಿದ್ದ ಪುಸ್ತಕ ಪ್ರದರ್ಶನಾಲಯಕ್ಕೆ ಅವನು ನನ್ನನ್ನು ಕರೆದುಕೊಂಡು ಹೋದ. ಅಲ್ಲಿದ್ದ ಪದ್ಯದ ಪುಸ್ತಕಗಳನ್ನೂ ತೋರಿಸಿದ. ಪದ್ಯಗಳಂತೆಯೇ ಅಚ್ಚಾಗಿದ್ದುವು. ಓದುವುದಕ್ಕೆ ಹೋದರೆ ವಿಪರೀತವಾಗಿ ಕೇಳಬರುತ್ತಿದ್ದುವು. ಹಾಗೆಂದು ಅವನಿಗೆ ಹೇಳಿದೆ. ಬಹಳ ಜಂಭದಿಂದ ಅವನು ನನ್ನನ್ನು ನೋಡಿ ತಿರಸ್ಕಾರ ಧ್ವನಿಯಿಂದ ಪಲುಕಹತ್ತಿದ. "ನೋಡಯ್ಯಾ ನಿನಗೇಕೆ ಇದರ ವಿಚಾರ? ಇದನ್ನು ಕವಿಗಳಿಗೆ ಪ್ರತಿಭಾಶಾಲಿಗಳಿಗೆ, ಬಿಟ್ಟುಬಿಡು. ಮೊದಲಿನಂತೆ ಕಟ್ಟು ನಿಯಮಗಳಿಗೆ ಹೆಚ್ಚು ಪ್ರಾಧಾನ್ಯ ಕೊಡದೆ, ಹೇಳಲಿರುವ ವಿಷಯವನ್ನು ಕವನಾಶಕ್ತಿಯಿಂದ ಬೆಳಗಿಸಿ ಬರೆಯುವುದು ಈಗಿನ ನೂತನ ಪದ್ಧತಿ." ಹಾಗೆ ಅವನು ಹೇಳುವಾಗ ನಾನೇನೊ ಶುದ್ಧ ಪಾಮರನೆಂದೂ ಇವನೂ ಇವನ ಗೆಳೆಯರೂ ಕವನಾದ್ರಿಯ ಮೇಲೇ ಹಾರಾಡುವ ದೇವಾಂಶಸಂಭೂತರೆಂದೂ ತೋರ್ಪಡಿಸಿದ. ನನಗೆ ಬಹಳ ಕೋಪವುಂಟಾಯಿತು. ಅವನಿಗೆ ಹೇಳಿದೆ "ನೋಡೋ, ನಾಳೆ ಸಾಯಂಕಾಲದ ಒಳಗೆ ನಿನಗೆ ಪದ್ಯಗಳ ಗೊಂಚಲನ್ನೇ ಬರೆದುಕೊಡುತ್ತೇನೆ. ಆಗ ನಿನಗೆ ಗೊತ್ತಾಗುತ್ತೆ ನನ್ನ ಪ್ರತಿಭಾಶಕ್ತಿ; ಅಥವಾ ನಿಮ್ಮ ಪದ್ಯಗಳ, ಮಂಕು ಕವನಗಳ, ಪ್ರಭಾವ!" ನಸುನಗುತ್ತಾ ಅವನು ಹೇಳಿದ "ನೀನು ಒಂದು ಪದ್ಯ ಬರೆದುಕೊಟ್ಟರೆ ಸಾಕೊ. ನಿನ್ನ ಸಾಲವನ್ನು ತೀರಿಸುತ್ತೇನೆ" ಎಂದು. ನಾನೂ ಮನೆಗೆ ಹಿಂತಿರುಗಿದೆ.

ಆ ರಾತ್ರಿ ಪದ್ಯಗಳನ್ನು ಬರೆಯಲು ಮೊದಲುಮಾಡಿದೆ. ಯಾವ ವಿಷಯವಾಗಿ ಪದ್ಯ ಬರೆಯಲಿ, ಎಂಬ ಯೋಚನೆಯು ಬಂತು. ಈಗಿನ ಪದ್ಯಗಳಿಗೇನು? ಬೆಳಗಿನಿಂದ ಸಾಯಂಕಾಲದ ವರೆವಿಗೆ ನಮಗಾದುದನ್ನು ನಾವು ಕಂಡುದನ್ನು ಹಾಗೆ ಹಾಗೇ ಬರೆದರೆ ಸಾಕು. ಹಾಗಾಗಿ ಬೆಳಿಗ್ಗೆ

ನಾನು ನೋಡಿದ್ದನ್ನು ಜ್ಞಾಪಿಸಿಕೊಂಡೆ. ಒಂದು ನಾಯಿಯ ಮೇಲೆ ಒಂದು ಮೋಟಾರು ಹೋಯಿತು. ಉತ್ತರ; ನಾಯಿ ಸತ್ತಿತು. ಸರಿ, ಬರೆದೆ ನಾಯಿಪದ್ಯವನ್ನು.

ಬಿದಿ-ನಾಯಿ (ಬೀದಿ ಅಲ್ಲ)

ಮೇರಿ ಎಂಬುದೊಂದು ನಾಯಿ ।
ಜಾನಿ ಎಂಬುದೊಂದು ನಾಯಿ ॥
ತಾರಾಚಂದ್ರರಂತೆ ನಲಿದು ಬೊಗಳುತ್ತಿದ್ದುವು ॥ ೧ ॥

ಅಕಟಕಟಾ! ಒಂದು ದಿನ ।
ಮೇರಿ ಎಂಬ ನಾಯಿಯದು ॥
ಮೋಟಾರ್ ಗಾಡಿ ಕೆಳಗೆ ಸಿಕ್ಕಿ
............ ಬಿಟ್ಟಿತು ॥ ೨ ॥

ಮುಂದೆ ಪೋದ ಮೊಟಾರ್ ನೋಡಿ ।
ಜಾನಿ ಎಂಬ ನಾಯಿ ಓಡೆ ॥
ದೂರಲಿದ್ದ ಕವಿಯು ಇದನು ಬರೆಯುತ್ತಿದ್ದನು ॥ ೩ ॥

ಅಹಹಾ! ಅದೆಂತಹ ನಾಯಿಗಳ ಪ್ರೇಮ! ವಿಧಿಯು—ಕನ್ನಡದಲ್ಲಿ ವಿಧಿಯೆಲ್ಲಿಯದು!—ಬಿದಿಯು ಹೇಗೆ ಪ್ರೇಮಕಂಟಕನಾಗುತ್ತಾನೆ! ಇವೆಲ್ಲಕ್ಕಿಂತ ವಿಷಾದಕರವಾದುದು—ಕವಿಯು ಪದ್ಯ ಬರೆದುದು—ಅದೂ ಆಗಿಯೇ ಹೋಯಿತು. ಬಿದಿಯಣಕಿಪುದು—ಆರೇನು ಮಾಳ್ಪರು.

ಆ ಮೇಲೆ ಆ ದಿನ ಆಗಿದ್ದನ್ನು ಜ್ಞಾಪಿಸಿಕೊಂಡೆ. ಕೆಲಸಕ್ಕೆ ಹೋಗಹತ್ತಿದಾಗ ಮಳೆಯು ಪ್ರಾರಂಭವಾಯಿತು. ನನ್ನ ಛತ್ರಿಯನ್ನು ಯಾರೋ ಕದ್ದು ಒಯ್ದಿದ್ದರು. ಸರಿ, ಒಂದು ಛತ್ರಿಪದ್ಯ ಬರೆದೆ. ಹಳೆ ಸಂಸ್ಕೃತದ ಯಾರಿಗೂ ಅರ್ಥವಾಗದ ನಾಮಕರಣ ಮಾಡಿದೆ.



ನೋಡಿ ಛತ್ರಿಪದ್ಯ ಎಂದರೆ ದಿಟವಾಗಿಯೂ ಛತ್ರಿಪದ್ಯ, ನೋಡುವುದಕ್ಕೆ ಮಾತ್ರ.

ಆಮೇಲೆ ಆ ದಿನ ನಾನು ಶಾಲೆಯ ಎದುರಿಗೆ ಹೋಗಿದ್ದೆ. ಸರಿ, ಶಾಲೆ ಪದ್ಯ ಒಂದು ಬರೆಯತೊಡಗಿದೆ. ಶಾಲೆಯ ಪದ್ಯ ಹುಡುಗರೆಲ್ಲರೂ ಹೇಳಬೇಕಾದುದು. ಅಂದಮೇಲೆ ಸಾಮೂಹಿಕ ಸಂಗೀತಕ್ಕೆ ಸರಿಯಾಗಿರಬೇಕು. ಅದಕ್ಕೇನು ಮುಟ್ಟಿಸಬೇಕು? ಕಾಗದಾನ—ಸರಿ—

ಏಳಿರಿ! ಏಳಿರಿ! ಶಾಲೆಯ ಬಾಲಕರೇ ।
ಮುಂಜಾನೆಯೇ ಏಳಿರಿ! ನೀವುಗಳು ಎಲ್ಲಾ ।
ತಾಸು ಏಳಾಯಿತು, ಶಾಲೆಗೆ ಹೊತ್ತಾಯ್ತು ।
ಬೇಗಲೇಳಿ ನಿಮ್ಮ ಮಾತೃಭೂಮಿಯ ಸೇವೆಗೆ ॥ ೧ ॥

ವೀರ ಗಾಂಧೀ, ಶಾಂತ ಜವಹರರು ಎದ್ದಿಹರು ।
ಲೋಕಮಾನ್ಯ ಪಂಜಾಬ ಕೇಸರಿಗಳು ನೋಡುತಿಹರು ।
ನೀವು ಎದ್ದು ಓದಿ, ಪಠಿಸಿ, ಮಾತೃಭೂಮಿಯ ।
ಸಂಕೋಲಗಳ ಹರಿಸಿ, ಅವರ ಹರಕೆಯನು ಪಡೆಯಿರಿ ॥ ೨ ॥

ಶಾಲೆ ಹುಡುಗರ ಪದ್ಯದಲ್ಲಿ ಈ ರಾಜಕೀಯ ವಿಷಯಗಳನ್ನು ಸ್ವಲ್ಪ ತಗುಲಿಸಿದರೆ ಚೆನ್ನು. ತಪ್ಪೊ ನೆಪ್ಪೊ, ಓದುವವರು ಲೇಖಕನು ದೇಶಪ್ರೇಮಿ ಆದಕಾರಣ ಉತ್ಸಾಹದಿಂದ ಪದ್ಯನಿಯಮಗಳಿಗೆ ಗಮನಕೊಡಲಿಲ್ಲ ಎಂದುಕೊಳ್ಳುವರು. ಅಂತೂ ನೀವು ಕವಿಗಳಾಗುವಿರಿ.

ಆಮುಂದೆ ಆ ಬೆಳಿಗ್ಗೆ ಸಂತೆಯ ಬೀದೀಲಿ ಹೋಗಿದ್ದೆ. ಸರಿ, ಸಂತೆ ಪದ್ಯ ಒಂದು ಡೊಂಕು ಡೊಂಕಾಗಿ ಬರೆದೆ.

"ಊರೂರ ಸಂತೆ"
ಹತ್ತು ಗಂಟೆ ಹೊಡೆಯಿತಾಗಲೇ।
ಬೇಗ ಬೇಗ ಹೋಗ ಹತ್ತಿರೆ॥
ಜಟ್ಕಾಮೇಲ್ಬ ಟ್ಕಾಹೀಗ್ಬ ತಾಇದ್ರೆ।
ರಸ್ತೆಯಿಂದ್ರ ಸ್ತೆ ಗ್ನಾಪ್ಹೀಗ್ಹೋಗ್ಹೋದು॥
ಹಾದಿಯಲ್ಲಿ ಜನ್ರನ ಪುವೆ ನಾವ್ಹೀಗೆ ಹೋಗಬ್ಬೇಕು।
ಹೋಗುತ ಹೋಗುತ ಜನರನು ನೋಡುತ ನಗುತಲಿರಬೇಕು॥

ಆ ದಿನ ಸಂತೆ ಹಾಡುಕೊಂಡು ವಿಶ್ರಮಿಸಿಕೊಳ್ಳಲು ದಾರಿಯ ತುದಿಯಲ್ಲಿದ್ದ ಆಲದ ಮರದ ತೋಪಿಗೆ ಹೋದೆ. ಅಲ್ಲಿ ಹಾಗೆಯೇ ಹುಲ್ಲಿನ ಮೇಲೆ ಮಲಗಿಕೊಂಡಿದ್ದೆ. ಮರದ ನೆಳಲು, ಬೀಳಲು. ಮರದ ಮೇಲೆ ಹಕ್ಕಿಗಳು ಹಾರಾಡುತ್ತಿದ್ದುವು. ಪ್ರಕೃತಿಯ ಹಾಡಿಗೆ ಸರಿಯಾದ ಸನ್ನಿವೇಶ. ಸರಿ, ಪ್ರಕೃತಿ ಪದ್ಯ ಒಂದನ್ನು ಚಿತ್ರಿಸಿದೆ.

"ಆಲದ ಮರದಡಿಯಲ್ಲಿ"



ಇವೆಲ್ಲವನ್ನೂ ಶಾಲೆಯ ಹುಡುಗರು ಕಾಪಿ ಬರೆಯುವಂತೆ, ನಾಲಿಗೆ ಬಾಯಿ ಹೊರಗೆ ಹಾಕಿಕೊಂಡು, ಬೇರೆ ಪುಸ್ತಕದಲ್ಲಿ ಬರೆದೆ. ಮರುದಿನ ಸಮ್ಮೇಳನಕ್ಕೆ ಹೋದೆ. ನನ್ನ ಸ್ನೇಹಿತ ಪುಸ್ತಕ ಪ್ರದರ್ಶನಾಲಯದಲ್ಲಿದ್ದಾನೆಂದು ತಿಳಿಯಬಂತು. ಅಲ್ಲಿಗೆ ಹೋದೆ. ಅಲ್ಲಿ ಅವನಿರಲಿಲ್ಲ. ಆದರೆ ದೂರದಲ್ಲಿ ನನ್ನ ಕನ್ನಡ ಗುರುಗಳು ಬರುತ್ತಿದ್ದರು. ಅವರೂ ಸ್ವತಂತ್ರಶೈಲಿಯೋಪಾಸಕರು. ನನ್ನ ಪುಸ್ತಕವನ್ನು ನೋಡಿದರೆ ಎಲ್ಲಿಯಾದರೂ ನನ್ನನ್ನೇ ತಿಂದು ಬಿಡುವರೊ ಎಂಬ ಹೆದರಿಕೆ. ಯಾರಿಗೂ ಕಾಣದಂತೆ ಅಲ್ಲಿದ್ದ ಪುಸ್ತಕಗಳ ಜತೆಯಲ್ಲಿ ಇದನ್ನೂ ಇಟ್ಟುಬಿಟ್ಟೆ. ಅಷ್ಟು ಹೊತ್ತಿಗೆ ನಮ್ಮ ಗುರುಗಳೂ ಬಂದರು. ಬಂದವರು ನನ್ನನ್ನು ಎಷ್ಟೋ ವಿಶ್ವಾಸದಿಂದ ಮಾತನಾಡಿಸಲಾರಂಭಿಸಿದರು. "ನೋಡಯ್ಯಾ ರಾ.ಶಿ., ನಿನ್ನ ಹಾಗೆ ಎಲ್ಲರೂ ಕನ್ನಡಾಭಿಮಾನಿಗಳಾದರೆ ಇಂದೇ ಜಯಪತಾಕೆಯನ್ನು ಹಾರಿಸಬಹುದು. ನೀವೆಲ್ಲರೂ ಜೀವನದ ವಿವಿಧ ಪಥಗಳಲ್ಲಿ ತೊಡಗಿ ತುಡುಗುತ್ತಿರುವಿರಿ. ಆದರೂ ಮಾತೃಭಾಷೆಯ ಮೇಲಿನ ಪ್ರೇಮದಿಂದ ಇದ್ದ ಕೆಲಸವನ್ನೂ ಒತ್ತಡ ಇಟ್ಟು ನಮ್ಮ ಸಮ್ಮೇಳನಗಳಿಗೆ ಬರುತ್ತೀರಿ. ದೇವರು ನಿಮಗೆ ಒಳ್ಳೆಯದನ್ನು ಮಾಡಲಿ." ಎಂದು ಹೇಳಿ, ನಂತರ ಕ್ಷೇಮಸಮಾಚಾರಗಳನ್ನು ಕೇಳುತ್ತಾ ಸಭೆಯಿದ್ದಲ್ಲಿಗೆ ಕರೆದುಕೊಂಡು ಹೋದರು. ಸಭೆಯಲ್ಲಿ ಹತ್ತಿರವೇ ಕುಳ್ಳಿರಿಸಿಕೊಂಡರು.

ಸಭೆಯು ಮುಗಿಯುವ ಮುನ್ನ ಅಧ್ಯಕ್ಷರೆದ್ದುನಿಂತು, ನಾಲ್ಕು ಜನ ದೊಡ್ಡ ಮನುಷ್ಯರ ಹೆಸರು ಹೇಳಿ ಇವರೆಲ್ಲರೂ ಈಗ ಪುಸ್ತಕ ಪ್ರದರ್ಶನಾಲಯಕ್ಕೆ ಹೋಗಿ, ಹಸ್ತಪ್ರತಿಗಳನ್ನು ನೋಡಿ, ಬಹಳ ಪ್ರತಿಭಾಶಾಲಿಯಾದ ಲೇಖಕನಿಗೆ ಅರಸನ ಪಾರಿತೋಷಕವನ್ನು ಕೊಡುವರು, ಎಂದು ಹೇಳಿದರು. ಅಯ್ಯೋ! ನನ್ನ ಪ್ರತಿಯೂ ಅಲ್ಲೇ ಇದೆಯಲ್ಲಪ್ಪಾ. ಅದರಲ್ಲಿನ ಆಲದ ಮರದಡಿಯಲ್ಲಿ ನನ್ನ ಹೆಸರೂ ಬರೆದಿರುವೆನಲ್ಲಾ. ಇವರದನ್ನು ನೋಡುತ್ತಾರಲ್ಲಪ್ಪಾ. ಹೀಗೆಲ್ಲಾ ವ್ಯಂಗ್ಯವಾಗಿ ಆಭಾಸವಾಗಿ ಬರೆದಿದ್ದೇನಲ್ಲಾ. ಸ್ನೇಹಿತನೊಂದಿಗೆ ಹಠಕ್ಕಾಗಿ ಹಾಸ್ಯಕ್ಕಾಗಿ ಮಾಡಿದುದು ಹೀಗೆ ವಿಪರೀತವಾಯಿತಲ್ಲ, ಎಂದು ಕೊರಗಹತ್ತಿದೆ. ಇದೊಂದು ಸಾರಿ ಪಾರಾದರೆ ಖಂಡಿತ ಪದ್ಯ ಬರೆಯಲು ಯತ್ನಿಸುವುದಿಲ್ಲವೆಂದು

ಶಪಥ ಮಾಡಿದೆ. ಮುಡುಪು ಕಟ್ಟುವೆನೆಂದು ಮಾದೇವನಿಗೆ ಮನಸ್ಸಿನಲ್ಲಿಯೇ ಮಣಿದು ಬೇಡಿದೆ. ಅವರ ಎದುರಿಗ ಹೋಗಿ ಹೇಗ ಪ್ರತಿಯನ್ನು ಹಿಂತಿರುಗಿ ತರಲಿ? ದೂರ ಹೋಗಿ ಒಂದು ಮರದ ಕೆಳಗ ಕುಳಿತುಕೊಂಡೆ.

ಸ್ವಲ್ಪ ಹೊತ್ತಿನಲ್ಲೇ ಪಂದ್ಯ ಕಟ್ಟಿದ್ದ ಸ್ನೇಹಿತನು ನನ್ನ ಹೆಸರನ್ನು ಕೂಗುತ್ತಾ ಓಡಿ ಬಂದ. ಗುಟ್ಟು ರಟ್ಟಾಯಿತೆಂದು ನನಗಾಗಲೇ ಗಾಬರಿ. ಬಂದವನೇ ನನ್ನನ್ನು ಬಾಚಿ ತಬ್ಬಿಕೊಂಡ. ಕೈಯಲ್ಲಿ ಐದು ರೂಪಾಯಿ ಇಟ್ಟ. ಇನ್ನೇನಾಗಿರಬಹುದು ಎಂದು ಹೇಳಬೇಕೆ?

ಹೌದು. ನೀವು ಎಣಿಸಿದಂತೆ ನನ್ನ ಹಸ್ತಪ್ರತಿಗೆ ಅರಸನ ಪಾರಿತೋಷಕ ದೊರೆತಿತ್ತು, ಸ್ವತಂತ್ರ ಶೈಲಿಯಲ್ಲಿ ಕೂಡ ನವೀನ ಮಾರ್ಗವನ್ನು ಕಲ್ಪಿಸಿಕೊಟ್ಟೆನೆಂದು. ಹೆಸರೂ ಬಂದಿತು.

ಆದರೆ ಅಂದು ಮಾಡಿದ ಶಪಥವನ್ನು ಇಂದಿನವರೆವಿಗೂ ಸಾಧಿಸಿದ್ದೇನೆ. ಅದಕ್ಕಾಗಿಯೇ ನೀವುಗಳು ನನ್ನ ಪದ್ಯಗಳನ್ನು ಕಂಡಿಲ್ಲ.



# ಕನ್ನಡಿ ಒಳಗಿನ ಗಂಟು

"ಬೆಳ್ಳಗಿರುವುದೆಲ್ಲಾ ಹಾಲಲ್ಲ,
ತೆಳ್ಳಗಿರುವುದೆಲ್ಲಾ ಚೆನ್ನಲ್ಲ"

ಕಾರ್ತಿಕ ಮಾಸ. ಶುದ್ಧ ಚತುರ್ದಶಿ ದಿವಸ. ಅಂದು ಕಛೇರಿಗೆ ರಜಾ ತೆಗೆದುಕೊಂಡಿದ್ದೆ. ಮಧ್ಯಾಹ್ನದ ಊಟವಾದ ಮೇಲೆ ಎಲೆಯಡಿಕೆ ಜಗಿಯುತ್ತಾ ವಠಾರದಲ್ಲಿ ಕುಳಿತಿದ್ದೆ. ಆ ಹೊತ್ತಿಗೆ ದೂರದ ನೆಂಟರೊಬ್ಬರು ಬಂದು, "ರಾಶಿಯವರೇ, ಈ ಊರ ಹುಚ್ಚಾಸ್ಪತ್ರೆಯ ವೈದ್ಯರು ನಿಮ್ಮ ಹಳೆಯ ಸ್ನೇಹಿತರಂತೆ. ಪ್ರಕೃತದಲ್ಲಿ ನಮ್ಮ ಎರಡನೆಯ ಹುಡುಗನನ್ನು ಅವರಾಸ್ಪತ್ರೆಗೆ ಸೇರಿಸಿದ್ದೇನೆ. ಈಗ ಎರಡು ತಿಂಗಳಿಂದಲೂ ನಮ್ಮ ರಾಮುವಿಗೆ ಬುದ್ಧಿ ಚಾಪಲ್ಯವಿತ್ತು. ಪಂಡಿತರು ಪಾಮರರು ತಮಗೆ ತೋರಿದುದೆಲ್ಲವನ್ನೂ ಮಾಡಿದ್ದಾಯಿತು. ಯಂತ್ರ-ತಂತ್ರಗಳನ್ನು ಕಟ್ಟಿಸಿದ್ದಾಯಿತು. ತಿರುಪತಿ ಮೇಲುಕೋಟೆ ದೇವರುಗಳಿಗೆ ಹರಕೆ ಒಪ್ಪಿಸಿದ್ದಾಯಿತು. ಏನಾದರೂ ಪ್ರಯೋಜನವಾಗಲಿಲ್ಲ. ಏರುತ ಏರುತ ಹೋಯಿತು ಅವನ ಹುಚ್ಚು. ಕಡೆಗೆ ವಿಧಿಯಿಲ್ಲದೆ, ಮನೆಯಲ್ಲಿ ಅವನ ಹಾವಳಿಯನ್ನು ತಡೆಯಲಾಗದೆ ವೈದ್ಯಶಾಲೆಗೆ ಕರೆದು ತಂದು ಬಿಟ್ಟೆವು. ನೀವು ದಯವಿಟ್ಟು ನನ್ನೊಡನೆ ಬಂದು, ವೈದ್ಯರನ್ನು ನೋಡಿ ಅವನ ಖಾಯಿಲೆಯ ವಾಶಿಯಾಗುವುದೇ, ವಾಶಿಯಾಗುವುದಾದರೆ ಎಷ್ಟು ದಿನಗಳಲ್ಲಿ ವಾಶಿಯಾಗುವುದು, ಇವುಗಳನ್ನು ಕೇಳಿ ನನಗೆ ಹೇಳಿದರೆ ಬಹಳ ಉಪಕಾರ ಮಾಡಿದಂತಾಗುವುದು" ಎಂದು ಹೇಳಿದರು.

ಕಾರ್ತಿಕ ಮಾಸ ಶ್ವೇತಪಕ್ಷದ ಚತುರ್ದಶಿ ದಿವಸ ನನ್ನ ಹುಟ್ಟಿದ ಹಬ್ಬ. ಆ ನಿಮಿತ್ತವೇ ರಜೆಯನ್ನು ಪಡೆದು ಆರಾಮವಾಗಿ ಉಂಡು ಕುಳಿತಿದ್ದೆ. ಹುಟ್ಟಿದ ದಿನ ಯಾರೊಬ್ಬರು ಏನು ಸಹಾಯವನ್ನು ಕೇಳಿದರೂ, ಕೈಲಾಗುವುದಾದರೆ, ಕಾಸು ಖರ್ಚಿಲ್ಲದಿದ್ದರೆ, ಇಲ್ಲವೆನ್ನಲು ಆಗುವುದಿಲ್ಲ. ಈ ಹಬ್ಬದ ದಿನವಾದರೂ ಬರಿ ವಾಕ್ಸಹಾಯ ಬೇಡುತ್ತಿದ್ದರು. 'ಹಾಗೆಯೇ ಆಗಲಿ' ಎಂದು ಅವರಿಗೆ ಹೇಳಿ 'ಸಾಯಂಕಾಲ ನಾಲ್ಕು ಗಂಟೆಯ ವೇಳೆಗೆ ಬನ್ನಿ, ಇಬ್ಬರೂ ಹೋಗೋಣ' ಎಂದು ಹೇಳಿದೆ.

ವೈದ್ಯನು ನನಗೇನೋ ಹಳೆಯ ಸ್ನೇಹಿತನೇ ಹೌದು. ಆದರೆ ಕಳೆದ ಎರಡು ವರ್ಷಗಳಿಂದ ಅವನನ್ನು ನೋಡಿಯೇ ಇರಲಿಲ್ಲ. ಇಬ್ಬರೂ ಒಂದೇ ಊರಿನಲ್ಲಿ ಇದ್ದರೂ ಪ್ರಮೇಯವೇನೂ ಒದಗದ ಅಲ್ಲಿಗೆ ಹೋಗಿರಲಿಲ್ಲ. ಹುಚ್ಚಾಸ್ಪತ್ರೆಯಲ್ಲಿ ಕಾಲವನ್ನೆಲ್ಲಾ ಕಳೆಯುವವನ ನಡವಳಿಕೆಯು ಸ್ವಲ್ಪ ಹುಚ್ಚಿನಂತಾದರೂ ವಿಪರೀತವಾಗಿರಬಹುದೇ ಎಂಬ ಶಂಕೆಯೇನೋ ಉಂಟಾಯಿತು. ಅದರ

ನೀರಿನಲ್ಲಿನ ಕಮಲದಂತೆ ಇದ್ದಿರಬಹುದೆಂದು ಧೈರ್ಯವೂ ಬಂದಿತು. ಹಾಗಾಗಿ, ಹೋಗುವ ಮುನ್ನ ಏನೇನು ಮಾತನಾಡಬೇಕು ಎಂಬುದನ್ನೆಲ್ಲಾ ನಿರ್ಧರಿಸಿಕೊಂಡು ಹೊರಡಲು ಸಿದ್ಧನಾದೆ.

ನಾಲ್ಕು ಗಂಟೆಗೆ ನೆಂಟರೂ ಬಂದರು; ನಾನೂ ಹೊರಟೆ. ಅಹಹಾ! ಹುಚ್ಚಾಸ್ಪತ್ರೆಯನ್ನು ನೋಡಿದರೆ ದಿಟವಾಗಿಯೂ ಹುಚ್ಚುಹಿಡಿದರೇ ಒಳಿತೆನ್ನುವಂತಿದೆ. ಆವರಣ, ಸನ್ನಿವೇಶ, ಸದನ ಸುತ್ತಲೂ ಪ್ರಕೃತಿಯ ಸೊಬಗು, ಸತ್ಯವಾಗಿಯೂ ಅಂತಹ ಸ್ಥಳಗಳಲ್ಲಿ, ಓದುಗರ ಪುಸ್ತಕ ಭಂಡಾರವಿರಬೇಕೆ ವಿನಹಾ ಹುಚ್ಚರ ನಿವೇಶನವಾಗಿರಕೂಡದೆಂದೆನ್ನಿಸಿತು. ಈ ಯೋಚನೆಯೆಲ್ಲಾ ಅಪ್ರಕೃತವೆಂದು ವೈದ್ಯಶಾಲೆಗೆ ಹೋಗಿ ವೈದ್ಯರನ್ನು ಎದುರ್ಗೊಂಡೆ. ನಾನು ಸತ್ಯವನ್ನು ಹೇಳಿದರೂ ನಂಬುತ್ತೀರಿ; ಸುಳ್ಳು ಹೇಳಿದರೂ ನೆಚ್ಚುತ್ತೀರಿ. ನಿಮಗೆ ಸುಳ್ಳನ್ನೇಕೆ ಹೇಳಲಿ. ಆ ವೈದ್ಯ ಮಹಾಶಯಾ ನೋಡಿದ, ಹತ್ತುನಿಮಿಷ ನೆಟ್ಟಕಣ್ಣಲ್ಲಿ ಎವೆಯಿಕ್ಕದೆ ನನ್ನನ್ನೇ ನೋಡಲಾರಂಭಿಸಿದ. ನನಗೇಕೊ ಮೊದಲು ತೋರಿದ ಅನುಮಾನ ದೃಢವಾಗಹತ್ತಿತು. ಸಂಗದೋಷದಿಂದ ಅವನೂ ವಿಪರೀತವಾಗಿದ್ದನೇ ಎಂದೆನ್ನಿಸಿತು. ಅಥವಾ ನನ್ನನ್ನು ನೋಡಿ ನಾನೇ ರೋಗಿಯಾಗಿ ಬಂದಿದ್ದೇನೆಂದು ಅನುಮಾನಪಡುತ್ತಿದ್ದನೊ ಎಂಬ ಎರಡನೆ ಯೋಚನೆಯೂ ಹೊಳೆಯಿತು. ಎರಡು ಮಾತಾಡಿದರೆ ಇದೆಲ್ಲವೂ ತಿಳಿದುಹೋಗುತ್ತದೆ ಎಂದು “ಏನಯ್ಯಾ, ನನ್ನ ಜ್ಞಾಪಕವಿಲ್ಲವೇ, ನಾವಿಬ್ಬರೂ ಶಾಲೆಯಲ್ಲಿ ಒಟ್ಟಿಗೆ ಬೆಂಚಿನ ಮೇಲೆ ನಿಂತುಕೊಂಡಿರಲಿಲ್ಲವೇ?” ಈ ರೀತಿಯಾಗಿ ಮಾತಿಗೆ ಆರಂಭಿಸಿದೆ. ನಿರುತ್ತರ. ಸ್ವಲ್ಪ ಮರ್ಯಾದೆ ಹೆಚ್ಚುಮಾಡಿ ಮುಂದುವರಿದೆ, “ಅಲ್ರೀ, ನಾವಿಬ್ಬರೂ ಒಟ್ಟಿಗೆ ವ್ಯಾಸಂಗ ಮಾಡಿ ಒಂದೇ ಸಾರಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಲಿಲ್ಲವೇ?” ಅಲ್ಲಿಗೂ ಮರುಮಾತಿಲ್ಲ. ಮೇಲೆ ಪಂಕವಾಡುತ್ತಿದ್ದರೂ ನನಗೇಕೊ ಮೈಯೆಲ್ಲಾ ಬೆವರುವಷ್ಟು ಶಕೆಯಾಯಿತು. ಇನ್ನೂ ಒಂದು ಯುಗವು ಕಳೆಯಿತು. ಆಗ ವೈದ್ಯನು ಬಾಯಿಬಿಟ್ಟ. “ಅಲ್ಲವೊ ರ್‍ಯಾಸ್ಕಲ್, ಇದೇ ಊರಿನಲ್ಲಿದ್ದುಕೊಂಡು ಎರಡು ವರ್ಷದಿಂದ ಈ ಕಡೆ ತಲೆಹಾಕಲಿಲ್ಲವಲ್ಲಾ. ಈಗ ಏನೋ ಕೆಲಸ ಇರುವುದರಿಂದ ಬಂದು, ಜ್ಞಾಪಕ ಇದೆಯೇ ಎನ್ನುತ್ತೀಯೆ! ಆ ಮಾತು ಹೇಳಿದ ನಿನ್ನ ಕೊಬ್ಬಿದ ಕೆನ್ನೆಯನ್ನೇ ನೋಡುತ್ತಿದ್ದೆ” ಎಂದ.

ಧಾರಾಳವಾಗಿ ಉಸಿರು ಬಿಟ್ಟೆ. ಅದೇ ಹಳೆಯ ಸ್ನೇಹಿತನೇ. ಅದೇ ತೆರನಾದ ಒರಟು ಕುಚೋದ್ಯ. ಇನ್ನೂ ಅವನ ಮನಸ್ಸು ಅವನ ಹಿಡಿತದಲ್ಲಿಯೇ ಇದೆ ಎನ್ನುವುದು ದೃಢವಾಯಿತು. ನಾನೂ ಆ ಪ್ರಾಸದಲ್ಲೇ ಉತ್ತರ ಕೊಟ್ಟೆ. “ಅಲ್ಲಾಮ್ಮಾ, ನನ್ನನ್ನು ಕೇಳುತ್ತೀಯಲ್ಲಾ; ನೀನು ನನ್ನನ್ನೇಕೆ ಎರಡು ವರುಷದಿಂದ ಬಂದು ನೋಡಲಿಲ್ಲ? ನಾನು ಮಾಡಿದ ಲೋಪಕ್ಕೆ ನೀನೂ ಬಾಧ್ಯನಲ್ಲವೇ? ಈಗೇನೊ ಕಾರ್ಯಾರ್ಥಿಯಾಗಿ ಬಂದಿರುವುದು ನಿಜ. ಅದಕ್ಕಾಗಿಯೇ ನಿನ್ನ ಕಾಲು ಕಟ್ಟಲು ಬಂದಿದ್ದೇನೆ. ನಮ್ಮವರ ಹುಡುಗನೊಬ್ಬನು ಇಲ್ಲಿಗೆ ದಾಖಲಾಗಿರುವನಂತೆ. ಅವನ ಯೋಗಕ್ಷೇಮ ನಿನ್ನಿಂದ ವಿಚಾರಿಸಿಕೊಂಡು ಹೋಗಲು ಬಂದೆ. ಹಾಗೆಯೇ ನಿನ್ನನ್ನೂ ನೋಡಿದಂತಾಗುವುದು ಎಂದು ನಾನೇ ಬಂದೆ, ಪತ್ರ ಬರೆಯಲಿಲ್ಲ.”

ರೋಗಿಯ ಹೆಸರು, ಅವನ ವಯಸ್ಸು, ಬಂದ ಊರು ಇತ್ಯಾದಿ ಎಲ್ಲಾ ಹೇಳಿದ ಮೇಲೆ ‘ಬಾ ನೋಡಿಕೊಂಡು ಬರೋಣ’ ಎಂದು ನನ್ನನ್ನೂ ಕರೆದುಕೊಂಡು ದೂರದ ರೋಗಿಯ ಕೋಣೆಗೆ ಹೊರಟ.

ನಾವು ಕೊಠಡಿಯ ಹತ್ತಿರ ಹೋಗುವ ವೇಳೆಗೆ ರೋಗಿಯು ಬಹಳ ಗಲಾಟೆ ಮಾಡುತ್ತಿದ್ದ. ಶಬ್ದಮಾಡದೆ ನಾವೀರ್ವರೂ ಅವನ ಅವಾಂತರವನ್ನು ಕಿಟಕಿಯಿಂದಲೇ ನೋಡಹತ್ತಿದೆವು. ಒಳಗಡೆ ರೋಗಿಯು ಎದುರಿಗಿದ್ದ ಕನ್ನಡಿಯೊಡನೆ ರೋಷಾವೇಶದಿಂದ ಜಗಳವಾಡುತ್ತಿದ್ದನು. ಒಮ್ಮೆ ಅದನ್ನು ನೋಡಿ ಅಣಕಿಸುವನು; ಒಮ್ಮೆ ಅದನ್ನು ಒದೆಯಹೋಗುವವನು; ಇದ್ದಕ್ಕಿದ್ದಂತೆ ಬಾಯಿತುಂಬಾ ಉಗುಳುವನು. ಮುಖ್ಯವಾಗಿ ನಮಗೆ ಬೇಡದವರನ್ನು ಕಂಡರೆ ನಮಗೆ ಏನೇನು ಮಾಡಬೇಕೆಂದು ಅನ್ನಿಸುತ್ತದೊ ಅದೆಲ್ಲವನ್ನೂ ಅವನು ಮಾಡುತ್ತಿದ್ದನು.

ವೈದ್ಯನನ್ನು ನೋಡಿದೆ. ಆತನಂದನು, "ನೋಡು ರಾಶಿ, ಇವನು ಕನ್ನಡಿಯಲ್ಲಿ ನೋಡುವವರೆವಿಗೂ ಸರಿಯಾಗಿ ನಿನ್ನಂತೆ ನನ್ನಂತೆ ಇರುತ್ತಾನೆ. ಕನ್ನಡಿಯಲ್ಲಿ, ನೀರಿನಲ್ಲಿ, ಕಡೆಗೆ ಎದುರಿನವರ ಕಣ್ಣುಪಾಪದಲ್ಲಿ ತನ್ನ ಪ್ರತಿಬಿಂಬವನ್ನು ಕಂಡರೆ ಉದ್ರೇಕಗೊಳ್ಳುತ್ತಾನೆ. ಈ ಖಾಯಿಲೆಯು ವಾಸಿಯಾಗಲು ತುಂಬಾ ಕಾಲವು ಬೇಕಾಗುತ್ತದೆ. ಆದರೂ ವಾಸಿಯಾಗುವುದು ಖಂಡಿತ."

ನನ್ನ ಧನ್ಯವಾದಗಳನ್ನವನಿರ್ಗಪಿಸಿದೆ. ಅವನು ಅರ್ಪಿಸಿದ ಕಾಫಿ ಸಿಗರೇಟನ್ನು ಸ್ವೀಕರಿಸಿ ಹಿಂತಿರುಗಿದೆ. ದೂರದಲ್ಲಿ ಮರದ ಬಳಿಯಲ್ಲಿ ನಿಂತಿದ್ದ ರೋಗಿಯ ತಂದೆಯೊಂದಿಗೆ ಈ ವಿಚಾರವನ್ನೆಲ್ಲಾ ಹೇಳಿ, ಧೈರ್ಯದ ಮಾತುಗಳನ್ನಾಡಿ, ಮನೆಗ ಬಂದೆ. ಈ ರೀತಿ ನಾನು ಧೈರ್ಯ ಹೇಳಿದವರಿಗೆಲ್ಲಾ ದೇವರು ಸಹಾಯ ಮಾಡಲು ಆರಂಭಿಸಿದರೆ ದೇವರ ಮನೆಯು ಮೂರೇ ತಿಂಗಳಲ್ಲಿ ಹಾಳಾಗಿ ಹೋಗುತ್ತದೆ, ಅಷ್ಟೆ.

ಮನೆಗೆ ಬಂದವನು ಆಸ್ಪತ್ರೆಯನ್ನು ಮರೆಯಲಾಗಲಿಲ್ಲ. ಕನ್ನಡಿಯಲ್ಲಿ ಮುಖವನ್ನು ನೋಡಿದರೆ ಏಕೆ ರೇಗಿದನವನು ಎಂಬ ಸಂಶಯವು ಪರಿಹಾರವಾಗಲಿಲ್ಲ. ಇರಲಿ, ಕನ್ನಡಿಯಲ್ಲಿ ಅದೇನು ಮಹತ್ವವಿದೆ? ನಾನೂ ದಿಟ್ಟಿಸಿ ಐದು ನಿಮಿಷ ನೋಡುತ್ತೇನೆ. ಎಂದು ನಿಲುಗನ್ನಡಿಯ ಬಳಿಗೆ ಹೋಗಿ ನೋಡಲಾರಂಭಿಸಿದೆ, ದೃಷ್ಟಿಸಲಾರಂಭಿಸಿದೆ. ಕನ್ನಡಿಯಲ್ಲಿ ಕಂಡದ್ದನ್ನು ವಿವರಿಸುತ್ತೇನೆ, ಕೇಳಿ:

ಪಾಪಾಸಿನಂತಹ ಮುಖ, ಮುಖಕ್ಕಿಂತಲೂ ಅಸಹ್ಯವಾದ ಅಗಲವಾದ ಹಣೆ. ವಿದ್ಯುಚ್ಛಕ್ತಿಯ ದೀಪದ ಊರಿನಲ್ಲಿ ಸೀಮೆಯೆಣ್ಣೆ ಲಾಂದ್ರದಂತೆ ಪ್ರಕಾಶಮಾನವಾದ ಕಣ್ಣುಗಳು. ದೊಡ್ಡದಾದ ಸುಟ್ಟ ಬದನೆಕಾಯಿಯಂತೆ ಇರುವ ಮೂಗು. ಊರಗಲ ಬಾಯಿ. ಬಾಯಿಂದ ಹೊರಬೀಳುತ್ತಿರುವ, ಹೊರಬಿದ್ದಿರುವ ದಂತಮಾಲೆ. ನೋಡುತ್ತಾ ಕಾಲಿನಲ್ಲಿನ ಪಾಪಾಸನ್ನು ಕಳಚಿಕೊಂಡು, ಒಂದೆರಡನ್ನು ಕೊಡೋಣವೇ ಎನ್ನಿಸಿತು. ಅರೆ, ಆದರೆ ಅದು ನನ್ನದೇ ಮುಖ! ಆಗ ತಿಳಿಯಿತು ನನಗೆ, ಮಕ್ಕಳು ನನ್ನನ್ನು ಕಂಡಾಗ ಕಿರಿಚಿಕೊಳ್ಳುವುದರ ಕಾರಣ. ಆ ಕಾರಣದಿಂದಲೇ ಇರಬೇಕು, ನನಗೆ ನನ್ನಲ್ಲಿರುವಷ್ಟು ರೂಪವು ಸಮಾಜಕ್ಕೆಗಿಲ್ಲದಿರುವುದು. ಈಗ ಎಲ್ಲಾ ತಿಳಿಯುತ್ತ ಬಂತು. ಕನ್ನಡಿಯಲ್ಲಿ ಎಷ್ಟೋ ಬಾರಿ ಮುಖವನ್ನು ನೋಡಿಕೊಂಡಿದ್ದರೂ ಈ ರೀತಿಯಲ್ಲಿ ವ್ಯಾಸಂಗ ಮಾಡಿದ್ದಿಲ್ಲ. ಈಗಲಾದರೂ ಏಕೆ ಹೀಗ ನೋಡಬೇಕೆನಿಸ್ತು ಎನ್ನಿಸಿತು.

ನಾನಂತೂ ಸುಮ್ಮಾಗಿ ಕೂತುಬಿಟ್ಟೆ. ಕೂತು ಯೋಚಿಸತೊಡಗಿದೆ, ಈ ಕನ್ನಡಿಯ ವ್ಯಾಸಂಗದ ಮಹಶ್ಶಕ್ತಿಯನ್ನು. ನನಗೇ ಹೀಗಾದ ಮೇಲೆ ಮಿಕ್ಕವರಿಗೆ ಇನ್ನೂ ಹೆಚ್ಚಾಗಿ ಇದರ ಹಾವಳಿ

ಉಂಟಾಗಬಹುದಲ್ಲವೇ? ತಾನೇ ತಾನೆಂದು ಕೋಳಿಯ ಹುಂಜದಂತೆ ಕೂಗಹತ್ತುವವರಿಗೆ ಕನ್ನಡಿ ಎದುರಿಗಿಟ್ಟರೆ ಸ್ವಲ್ಪ ಬುದ್ಧಿಯುಂಟಾಗಬಹುದೆನ್ನಿಸಿತು. ಉದಾಹರಣೆಗೆ—ಶಾಸನಸಭೆಗಳಲ್ಲಿ ಪ್ರತಿಯೊಬ್ಬ ಸದಸ್ಯನ ಎದುರಿಗೂ ಒಂದೊಂದು ಕನ್ನಡಿಯನ್ನಿಡುತ್ತಾರೆ ಎನ್ನಿ; ಅಧ್ಯಕ್ಷನ ಮೇಜಿನ ಮೇಲೆ, ತಕ್ಕಮಟ್ಟಿಗೆ ದೊಡ್ಡದೊಂದು ಕನ್ನಡಿ ಇಡುತ್ತಾರೆ ಎನ್ನಿ; ಯಾವನಾದರೂ ಸದಸ್ಯನೊಬ್ಬನು ಸರಕಾರದ ಪರವಾಗಿ, ಎಂದರೆ ತಲೆಯೆಲ್ಲಾ ಮಾತನಾಡುತ್ತಾನೆ ಎನ್ನಿ; ಆಗ ಅಧ್ಯಕ್ಷರು ನಸುನಗುತ್ತಾ ತಲೆದೂಗುತ್ತಾರೆ ಎನ್ನಿ. ಇನ್ನೊಬ್ಬ ಸಾರ್ವಜನಿಕ ಸದಸ್ಯನು 'ಅಧ್ಯಕ್ಷರೇ, ಕನ್ನಡಿ ನೋಡಿ' ಎಂದು ಹೇಳಿದರೆ, ಅಧ್ಯಕ್ಷರು ಒಂದು ನಿಮಿಷ ಕನ್ನಡಿಯನ್ನು ದಿಟ್ಟಿಸಿದರೆ, ಮೊದಲಿನ ಮಂದಹಾಸವು ಮಂಕಾಗುವುದಿಲ್ಲವೇ—ಅಥವಾ ಸದಸ್ಯನೊಬ್ಬನನ್ನು ಸ್ತಿಮಿತಕ್ಕೆ ತರಬೇಕಾದರೆ ಅಧ್ಯಕ್ಷರು 'ಕನ್ನಡಿ ನೋಡಿ' ಎಂದು ಅಪ್ಪಣೆ ಮಾಡಿದರೆ ಸಾಲದೆ? ಈ ರೀತಿಯಾಗಿ 'ಕನ್ನಡಿ-ಶಿಕ್ಷೆ' ಕೊಟ್ಟರೆ ಸಾಕು ಅಲ್ಲವೆ? ಹಾಗೆಯೇ ಯೋಚಿಸಿದರೆ, ಸ್ಕೂಲು ಮೇಷ್ಟರುಗಳು, ಸ್ತುತಿಪಾಠಕರು, ಪರೀಕ್ಷಕರು, ಮುಖ್ಯವಾಗಿ ಸಂಗೀತಗಾರರು ಇವರುಗಳೆಲ್ಲರಿಗೂ ಕನ್ನಡಿ-ಶಿಕ್ಷೆಯನ್ನು ವಿಧಾಯಕ ಮಾಡುವುದು ಒಳಿತಲ್ಲವೇ? ಹೀಗೆ ಕನ್ನಡಿ-ಶಿಕ್ಷೆ ವಿಧಿಸಿದರೆ ಮಿಕ್ಕ ಕಷ್ಟಗಳಾವುವೂ ಬಾರವು. ವಾಕ್ ಸ್ವಾತಂತ್ರ್ಯಕ್ಕೆ ತಡೆಗಟ್ಟಿದಂತಾಗುವುದಿಲ್ಲ. ಜನರಾರೂ ಹದ್ದುಮೀರಿ ಮಾತನಾಡುವುದಿಲ್ಲ. ಹೀಗಾಗಿ ಈಗಿನ ಕಾಲಕ್ಕೆ ಅಹಿಂಸಾ-ಶಿಕ್ಷಾ-ನಿಯಮಗಳಲ್ಲಿ ಇದೇ ಮೊದಲನೆಯದಾಗುತ್ತೆ.

ಆದರೆ ನಾನು ಕನ್ನಡಿ ಎದುರಿಗಿಟ್ಟುಕೊಂಡು ಬರೆಯಹೋಗಿದ್ದರೆ ಇದೆಲ್ಲವನ್ನೂ ಬರೆಯಲಾಗುತ್ತಿತ್ತೆ? ಖಂಡಿತವಾಗಿಯೂ ಇಲ್ಲ. ಮಸಿ ಕುಡಿಕೆ ಮೊದಲು ಆಮೇಲೆ ಲೇಖನಿಗಳನ್ನು ಕನ್ನಡಿಯ ಮೇಲೆಸೆದು, ನಂತರ ನಾನೂ ಮೇಲೆ ಬೀಳುತ್ತಿದ್ದೆ.

ಅಷ್ಟಲ್ಲದೆ ಪ್ರಾಜ್ಞರು, ಪ್ರಾಚೀನರು ಗಾದೆ ಮಾಡಿದಾರೆ 'ಕನ್ನಡಿ ಒಳಗಿನ ಗಂಟು' ಎಂದು. ಅವರರ್ಥ ಏನು ಇತ್ತೋ! ಅಂತೂ ವೇದಾಂತಕ್ಕೆ ಕನ್ನಡಿ ಮುಖ್ಯ ಸಹಕಾರಿ. ರಾಜಕೀಯಕ್ಕೆ ಕನ್ನಡಿ ಇದ್ದೇ ಇರಬೇಕು ಎನ್ನುವುದು ಖಂಡಿತ.

ನೀವೇನನ್ನುತ್ತೀರಿ? ಕನ್ನಡಿ ನೋಡಿಕೊಂಡು ಹೇಳಿ ಬರೆಯಿಸಿ.

# ಕುಪ್ಪಣ್ಣ

"**ಕು**ಪ್ಪಣ್ಣನ ವಿಚಾರ ಕಟ್ಟಿಕೊಂಡು ನಮಗೇನಪ್ಪಾ; ಅವನು ಯಾರಾದರೆ ನಮಗೇನು?" ಎನ್ನಿಸಬಹುದು ನಿಮಗೆ. ಆದರೆ ಅವನ ವಿಚಾರ ಸ್ವಲ್ಪ ಓದಿನೋಡಿ; ಅದರಿಂದಾಗುವ ಪ್ರಯೋಜನವು ನಿಮಗೆ ತಿಳಿಯುವುದು. ನಿಮ್ಮ ಸ್ನೇಹಿತರ ಮಂಡಳಿಯಲ್ಲಿ, ಪರಿಚಯಸ್ಥರಲ್ಲಿ ಒಬ್ಬೊಬ್ಬ ಕುಪ್ಪಣ್ಣ ಇದ್ದೇ ಇರುವನು. ಹಾಗೆ ನಿಮ್ಮ ಅರಿವಿಗೆ ಯಾರೂ ಸಿಗದಿದ್ದರೆ ಕನ್ನಡಿಯಲ್ಲಿ ನಿಮ್ಮ ಮುಖವನ್ನು ಒಮ್ಮೆ ನೋಡಿಕೊಳ್ಳಿ, ನೀವೇ ಕುಪ್ಪಣ್ಣ ಆಗಿರಬಹುದು. ನಿಮ್ಮ ಸ್ನೇಹಿತ ಕುಪ್ಪಣ್ಣನು ಯಾವಾಗಲಾದರೂ ನಿಮ್ಮ ಮನಸ್ಸನ್ನು ಬೇಸರ ಮಾಡಬಹುದು. ಆಗ ನಮ್ಮ ಕುಪ್ಪಣ್ಣನನ್ನು ಜ್ಞಾಪಕಕ್ಕೆ ತಂದುಕೊಂಡು ಶಾಂತರಾಗಿ, ಅವನ ಮನಸ್ಸನ್ನು ನೋಯಿಸದೆ ಇರಬಹುದು.

ಕುಪ್ಪಣ್ಣ ಹತ್ತು ಹದಿನಾರು ವರ್ಷದ ಪ್ರಾಯ ತುಳುಕುತ್ತಿರುವ ನವಯುವಕ. ಸುಮಾರು ಆರೇಳು ಅಡಿ ಎತ್ತರ. ಇದೇನಿದು? ಒಂದು ಅಡಿ ಎತ್ತರ ಹೆಚ್ಚು ಕಡಿಮೆ ಆಗಬಹುದೇ, ಎನ್ನಬೇಡಿ. ತಲೆ ತಗ್ಗಿಸಿ ವಿನಯದಿಂದ ನಡೆಯುವಾಗ ಅವನು ಆರಡಿ ಎತ್ತರ. ಸ್ವಲ್ಪ ಜಂಭ ಬಂದಾಗ ಸಾಹಸಿಕ ಕಾರ್ಯಮಾಡಿದ್ದೇನೆಂದು ತಿಳಿದಾಗ ಏಳಡಿ ಎತ್ತರ ಆಗುತ್ತಿದ್ದ. ಬಣ್ಣ ಮಾಸಲು ಕಪ್ಪು. ಆದುದರಿಂದಲೇ ಅದೆಂದಿಗೂ ವಿವರ್ಣವಾಗುತ್ತಿದ್ದಿಲ್ಲ. ಕಣ್ಣು ಮುಕ್ಕಾಲು ಕುರುಡು. ಕುರುಡನ್ನು ಹೋಗಲಾಡಿಸಲು ಸೋಡಾವಾಟರ್ ಬಾಟಲಿನ ತಳವನ್ನು ದುಂಡಗೆ ಕತ್ತರಿಸಿ, ಅವನ್ನು ಬೆಳ್ಳಿಯ ಸುಲೋಚನದ ಕಟ್ಟಡದಲ್ಲಿ ಕಟ್ಟಿಸಿ ಧರಿಸುತ್ತಿದ್ದ. ತಲೆಯನ್ನು ಕ್ರಾಪು ಮಾಡಿಸಿದ್ದ. ಅವನು ಬಹು ವೈದಿಕ ಸಂಪ್ರದಾಯಸ್ಥರ ಮನೆಯಲ್ಲಿ ಹುಟ್ಟಿದವನು. ಅವನು ಕ್ರಾಪು ಮಾಡಿಸಿದ್ದುದು ಬಲು ಆಶ್ಚರ್ಯಕರವಾದ ಸಂಗತಿ. ಅದಕ್ಕೆ ಬಲವತ್ತರವಾದ ಕಾರಣವೊಂದಿತ್ತು. ಒಂದು ದಿನ ಮನೆಯಲ್ಲಿ ಅವನು ಜೇನುತುಪ್ಪವನ್ನು ಕದಿಯುತ್ತಿದ್ದಾಗ ಅವರ ಅಜ್ಜಿಯು ಬರಲು ಕದಿಯುತ್ತಿದ್ದ ಕೈಯನ್ನು ಹಾಗೆಯೇ ತಲೆಗೆ ಒರಸಿಕೊಂಡನಂತೆ. ಅಂದಿನಿಂದ ಅವನಿಗೆ ನರೆಗೂದಲಾಯ್ತಂತೆ. ನರೆಗೂದಲು ಕೂಡ ಪಟ್ಟೆ ಪಟ್ಟೆಯಾಗಿ ಆಗಿತ್ತಂತೆ. ಅಂಥಹ ಕೂದಲನ್ನು ಯಥೇಚ್ಛವಾಗಿ ಬೆಳೆಸಿ ಗಂಟುಹಾಕಿಕೊಳ್ಳುವುದು ಅಂದವಲ್ಲವೆಂದು ತಿಳಿದು ತಂದೆ ತಾಯಿಗಳ ಕ್ರೋಧವನ್ನೂ ಲಕ್ಷಿಸದೆ ಕ್ರಾಪು ಮಾಡಿಸಿಬಿಟ್ಟಿದ್ದ. ಮೂಗು ಸ್ವಲ್ಪ ಮುಂದು. ಅರ್ಧ ಬಾಯನ್ನು ಮುಚ್ಚಿಕೊಂಡುಬಿಟ್ಟಿತ್ತು. ಬಾಯಿ ಅಷ್ಟೇನೂ ದೊಡ್ಡದಲ್ಲ. ಆ ಕಾರಣದಿಂದಲೇ ಮೂಗು ಅದನ್ನು ಮರೆಸಲು ಅನುಕೂಲವಾಗಿತ್ತು.

ಈ ಚಿಕ್ಕ ಅಂಗಗಳ ಗಲಾಟೆಯಲ್ಲಿ ಕಿವಿಯ ಪಾಡೇ ಇಲ್ಲ. ಆ ಜತೆ ಕಿವಿಗಳು ತಲೆಯ ಹಿಂಭಾಗದಲ್ಲಿ ಎಲ್ಲೋ ಟೋಪಿಯನ್ನು ಹೊತ್ತುಕೊಳ್ಳಲು ಮತ್ತು ಸುಲೋಚನದ ಸುರುಳಿಯನ್ನು ಸುತ್ತುಕೊಳ್ಳಲು ಸಿದ್ಧವಾಗಿರುತ್ತಿತ್ತು.

ಮನುಷ್ಯನಿಗೆ ಮುಖ್ಯ ಇರುವುದು ಅಥವಾ ಇಲ್ಲದಿರುವುದು ಮುಖ. ಆದಾದ ಮೇಲೆ ಕೈ ಕೈಲುಗಳು ಹೇಗಿದ್ದರೂ ಪರವಾಗಿಲ್ಲ. ಕುಪ್ಪಣ್ಣನ ಕೈಗಳು ಕಾಲನ್ನು ಮುಟ್ಟುತ್ತಿದ್ದುವು. ಕಾಲು ಸಮುದ್ರದ ಆಳವನ್ನು ನೋಡಲು ಸಹಕಾರಿಯಾಗಿರುತ್ತಿದ್ದುವು. ಮೈ ಇವೆರಡರಷ್ಟು ಗಾತ್ರವಾಗಿತ್ತು. ದೇವರು ಇನ್ನೆರಡು ಕೈಕಾಲು ಕೊಟ್ಟಿದ್ದರೆ ಇವನು ಮನೆ ಮೂಲೆಯಲ್ಲಿ ಹೋಗಿ ಒಂದು ಪರೆಯನ್ನು ಕಟ್ಟಿಕೊಂಡು ಹಾರಾಡುವ ಜೀವಜಂತುಗಳನ್ನು ಹಿಡಿದು ಜೀವಿಸುತ್ತಿದ್ದನೊ, ಏನೋ, ಎನ್ನಿಸುತ್ತಿತ್ತು.

ಇದೆಲ್ಲಾ ಓದಿದ ಮೇಲೆ ನಿಮಗೆ—ಈ ಬರೆದ ಮಹಾರಾಯಾ ಏಕೆ ಇಷ್ಟು ಕಷ್ಟಪಟ್ಟುಕೊಂಡು ಬರೆದನೊ? ಸುಮ್ಮನೆ ಒಂದು ಬೊಂಬೆಯನ್ನು ಬರೆಯಬಾರದಾಗಿತ್ತೇ—ಎನ್ನಿಸಬಹುದು. ನನಗೆ ಬೊಂಬೆ ಬರೆಯಲು ಬರುವುದಿಲ್ಲ. ಒಂದೆರಡು ಸಾರಿ ಬರೆದ ಬೊಂಬೆಗಳು ಫಾಲ್ಗುಣ ಶುದ್ಧ ಪೌರ್ಣಮಿಯ ದಿನಕ್ಕೆ ಪ್ರಯೋಜನಕಾರಿಯಾದುವು. ಆ ಭಯದಿಂದ ಚಿತ್ರಿಸಲಿಲ್ಲ. ಅಲ್ಲದೆ ಬರೆಯುವ ಹುಚ್ಚನ್ನು ಹೇಗೆ ಬಿಡಿಸಿಕೊಳ್ಳುವುದು? ನೀವು ಬೈದು, ಹಾಸ್ಯ ಮಾಡಿ ನಿಲ್ಲಿಸಪ್ಪಾ ಎಂದರಲ್ಲವೇ?

ಈ ಕುಪ್ಪಣ್ಣನ ಬೊಂಬೆ ನೀವು ಓದಿದ್ದಾಯಿತು. ಇವನ ಗುಣವನ್ನು ಇನ್ನು ಸ್ವಲ್ಪ ತಿಳಿಯುವುದು ಒಳಿತು. ಅದೇ ರಸವತ್ತಾದ ಜೀವನದ ಮುಖ್ಯಾಂಶ. ಅವನು ಒಳ್ಳೆಯವನು, ಕೆಟ್ಟವನು, ಐಯ್ಯಂಗಾರಿ, ಅನಾಚಾರಿ ಎಂದರೆ ಅಷ್ಟು ಅರ್ಥವಾಗುವುದಿಲ್ಲ. ಅದಕ್ಕೆ ಬದಲು ಅವನು ನನ್ನೊಡನೆ ಇದ್ದ ಒಂದು ದಿನದ ಜೀವನವನ್ನು ಚಿತ್ರಿಸಿದರೆ ನಿಮಗೆ ಹೆಚ್ಚು ಪ್ರಯೋಜನಕಾರಿಯಾಗುವುದೆಂದು ನನ್ನ ಅಭಿಪ್ರಾಯ.

*　*　*　*　*

ಒಂದು ದಿನ ಬೆಳಿಗ್ಗೆ—ಎಲ್ಲಾ ದಿನಗಳಂತೆಯೇ—ಎಂಟು ಗಂಟೆಯ ವೇಳೆಗೆ ನಾನು ಜನಾಂಗದ ಸೇವೆ ಮತ್ತು ಉದರ ಪೋಷಣೆ ಎರಡೂ ಮಾಡಿಕೊಳ್ಳುವ ಭಾವಡಿಗೆ ಹೋಗುತ್ತಿದ್ದೆ. ದಾರಿಯಲ್ಲಿ ಸಿಕ್ಕಿದ ಕುಪ್ಪಣ್ಣ.

'ಏನಯ್ಯಾ ಕೊರವಂಜಿ, ಎಲ್ಲಿಗೆ ಹೊರಟೆ?'

ನಾನೆಲ್ಲಿಗೆ ಆ ವೇಳೆಯಲ್ಲಿ ಹೋಗುತ್ತೇನೆಂಬುದು ಅವನಿಗೆ ಚೆನ್ನಾಗಿ ಗೊತ್ತು. ಮಾತು ಹೂಡಲು ಅದೊಂದು ಝೋಕು.

'ಕೆಲಸಕ್ಕಯ್ಯಾ ರಾಜ'

ಅವನನ್ನು ನಾನು ಕುಪ್ಪಣ್ಣ ಎಂಬ ಹೆಸರೊಂದಲ್ಲದೆ ಅಮರಕೋಶದ ರೀತಿಯಾಗಿ ಅರಸನ ಹೆಸರುಗಳಿಂದಲೂ ಪ್ರೀತಿಗಾಗಿ ಕರೆಯುತ್ತಿದ್ದೆ.

'ಅಲ್ಲಾ ಕೊರವಂಜಿ, ಮೊನ್ನೆ ಕೇಳಿದೆಯೇನು?'

'ಏನು ದೊರೆ ಅದು?'

'ನೋಡು, ಕನ್ನಂಬಾಡಿ ಕಟ್ಟೆಗೆ ನಮ್ಮನೆ ಮೂರನೆಯ ಮನೆಯಲ್ಲಿ ಇರುವ ರಾಜೈಂಗಾರಿ ಹೋಗಿದ್ದನಂತೆ. ಅಲ್ಲಿ ಒಂದು ಜೀವದಿಂದಿರುವ ಮೊಸಳೆ ನೆಲದ ಮೇಲೆ ಮಲಗಿದ್ದುದನ್ನು ನೋಡಿದನಂತೆ. ಆಮೇಲೆ ಊರಿಗೆ ಬಂದ. ಬರುತ್ತಲೂನೂ ನಮ್ಮನೆಗೆ ಓಡಿ ಬಂದು 'ಕುಪ್ಪಣ್ಣಾ,

ನೀನು ಹೇಳಿದ್ದು ದಿಟವಯ್ಯಾ. ಕನ್ನಂಬಾಡೀಲಿ ಮೊಸಳೆ ಇದೆ' ಎಂದು ಒಪ್ಪಿಕೊಂಡ. ನೋಡು, ಮೊದಲು ನಾನು ಹಾಗೆ ಹೇಳಿದಾಗ 'ಅಲ್ಲ' ಎಂದು ಜೋರು ಮಾಡಿದ; ಆಮೇಲೆ ನೋಡು ಸುಸ್ತಾಗಿಬಿಟ್ಟ.'

ಇವನ ಮನೆ ಮೂರನೆ ಮನೆಯಲ್ಲಿರುವ ಗಂಡಸರ ಗೊಡವೆ ನನಗೇಕೆ? ಅವನು ಕನ್ನಂಬಾಡೀಲಿ ಮೊಸಳೆ ಕಂಡರೆ ನನಗೇನು ಸುಖ? ಇವೆಲ್ಲಾ ಕುಪ್ಪಣ್ಣನಿಗೆ ರುಚಿಸದ ವಿಷಯ. ಅವನಿಗೆ ಬೇಕಾದುದು ಒಂದೇ. ನನ್ನೊಡನೆ ಏನಾದರೂ ಒಂದು ಮಾತನಾಡಬೇಕು. ಆ ಮಾತು ಅವನ ವಿಚಾರವಾಗಿರಬೇಕು. ಆ ವಿಚಾರದಲ್ಲಿ ಅವನು ಜಯಿಸಿರಬೇಕು. ಅಷ್ಟೇ—ಅದು ನನಗೆ ಪ್ರಕೃತವಾದುದಾಗಿರಲಿ ಸಂಬಂಧವಿಲ್ಲದಿರಲಿ—ಅದು ಅವನಿಗೆ ಬೇಡದ ವಿಷಯ.

'ಸರಿ ನನ್ನೊಡೆಯಾ, ಕೆಲಸಕ್ಕೆ ಹೊತ್ತಾಯಿತು' ಎಂದು ಹೇಳಿ ಮುಂದಕ್ಕೆ ಹೊರಟೆ.

ಹತ್ತು ಹೆಜ್ಜೆ ಮುಂದೆ ಹೋದೆ. ಹೊಟೇಲು ಹತ್ತಿರ ಬಂತು. ಅಲ್ಲಿ ಕಾಫೀ ಕುಡಿದು ಎರಡಾಣೆ ಕಂದಾಯ ಕಟ್ಟಿ ಮುಂದೆ ಹೋಗುವ ವಾಡಿಕೆ. ಆದರೂ ಸುತ್ತುಮುತ್ತಲೂ ನೋಡಿ ಅಪಾಯವಿಲ್ಲವೆಂದು ತಿಳಿದ ಮೇಲೆ ಹೊಟೇಲಿಗೆ ನುಗ್ಗುವ ಜಾಗರೂಕತೆ ಸ್ವಾಭಾವಿಕ. ಹಿಂತಿರುಗಿ ನೋಡಿದೆ. ಅಪಾಯ ಹಿಂದಿತ್ತು. ಹಿಂತಿರುಗಿದರೆ ಕುಪ್ಪಣ್ಣ!

'ಏನು ನನ್ರಾಜ, ನನ್ನ ಹಿಂದೆಯೇ ಬರುತ್ತಿದ್ದೆಯಾ? ಎತ್ತಲಾಗಿ ಹೊರಟೆ?' ಎಂದೆ.

'ಹೌದು ಕೊರವಂಜಿ. ನಿನ್ನ ಜತೆಯಲ್ಲೇ ಹಿಂದೆ ಬರುತ್ತಿದ್ದೆ. ಏನೂ ಕೆಲಸವಿದ್ದಿಲ್ಲ. ಹಾಗೇ ಅಡ್ಡಾಡಿಕೊಂಡು ಮನೆಗೆ ಹೋಗೋಣವೆಂದು ಬಂದೆ' ಎಂದ.

ಹೊಟೇಲಿಗೆ ಕರೆದುಕೊಂಡು ಹೋಗುತ್ತೇನೇನೊ ಎಂಬ ಆಶೆಯಿದ್ದಿರಬಹುದು. ಆದರೆ ಆ ಸಂತೋಷವೂ ಆಶೆಯೂ ಮುಖದಲ್ಲಿ ಕಾಣಬರಲಿಲ್ಲ—ಇವನನ್ನು ಕಂಡಕೂಡಲೇ ನಾನೇನೊ ನಿರ್ಧಾರಮಾಡಿಕೊಂಡೆ—ಅವನಿಂದ ನನಗೆ ಎರಡಾಣೆ ಉಳಿತಾಯ. ಹಾಗೆಯೇ ಮಾತನಾಡಿಸುತ್ತಾ ನಮ್ಮ ಛಾವಡಿಯವರೆಗೂ ಅವನನ್ನು ಕರೆದುಕೊಂಡು ಹೋದೆ. ಅಲ್ಲಿ 'ಇನ್ನು ಹೋಗಿಬರಲೆ?' ಎಂದು ಕೇಳಿ ಅಪ್ಪಣೆಯನ್ನು ತೆಗೆದುಕೊಂಡು ನನ್ನ ಕೆಲಸಕ್ಕೆ ಹೋದೆ.

* * * * *

ಮಧ್ಯಾಹ್ನ ಮನೆಗೆ ಬಂದು ಊಟ ಮಾಡಿದ ಮೇಲೆ ಸ್ವಲ್ಪಹೊತ್ತು ಹಾಗೆಯೇ ಮಲಗಿದ್ದೆ. ಯಾರೊ ಬಂದು ಎಬ್ಬಿಸಿದ ಹಾಗಾಯಿತು.

ಕಣ್ಣು ಬಿಟ್ಟರೆ ಕುಪ್ಪಣ್ಣ!

"ಸ್ವಲ್ಪ ಇರು ಕುಪ್ಪಣ್ಣಾ, ಮುಖ ತೊಳೆದುಕೊಂಡು ಬರುತ್ತೇನೆ" ಎಂದು ಹೇಳಿ ಒಳಕ್ಕೆ ಹೋಗಿ ಮುಖ ತೊಳೆದುಕೊಂಡೆ. ಅರ್ಧ ನಿದ್ರೆಯಲ್ಲಿ ಎಬ್ಬಿಸಿದನೆಂಬ ಕೋಪಕ್ಕಾಗಿ ಒಳಗೇ ಕಾಫಿಯನ್ನು ಕುಡಿದು ಕೊಠಡಿಗೆ ಬಂದೆ. ಬಂದು "ಏನಯ್ಯಾ ಕುಪ್ಪಣ್ಣ ಇಷ್ಟು ಅವಸರದಲ್ಲಿ ಬಂದು ಎಬ್ಬಿಸಿದೆಯಲ್ಲಾ?" ಎಂದು ಕೇಳಿದೆ.

'ಯಾಕೋ ಕೊರವಂಜಿ, ನಾನು ಎಬ್ಬಿಸಲೇ ಇಲ್ಲ. ನಾನು ಬಂದಾಗ ನೀನು ಕಣ್ಣು ಬಿಡುತ್ತಿದ್ದೆ' ಎಂದ.

‘ನೀನು ಎಬ್ಬಿಸಲಿಲ್ಲವೇ ಹಾಗಾದರೆ!’

‘ಇಲ್ಲಾ ಕಣೋ; ಹಾಗಾದರೆ ನಿದ್ರೆ ನಿನಗೆ ಸರಿಯಾಗಿ ಆಗಲಿಲ್ಲ ಎಂದು ಕಾಣುತ್ತೆ.’

‘ಇಲ್ಲಾ ಇಲ್ಲಾ ಸೊಗಸಾದ ನಿದ್ರೆ—ಒಳ್ಳೆಯ ಕನಸು ಕೂಡಾ’

‘ಹಾಗಾದರೆ ಕನಸಿನಲ್ಲಿ ನಾನು ಬಂದಿದ್ದೆನೇ?’

ಕುಪ್ಪಣ್ಣನಿಗೂ ಒಂದೊಂದು ವೇಳೆ ಬಲು ಚಾಲೂಕಾದ ಆಲೋಚನೆಗಳು ಬರುವುದುಂಟು—ಸುಂಕದವನು ತಪ್ಪಿ ಹೆಚ್ಚು ಚಿಲ್ಲರೆ ಕೊಟ್ಟಂತೆ—ನನಗೆ ಹಾಗೆ ಯಾರಾದರೂ ಅಂದರೆ ಕುಹಕವಾಡುವಂತಾಗುತ್ತದೆ.

‘ಹೌದು ಭೂಪತಿ, ನೀನು ಕನಸಿನಲ್ಲಿ ಬಂದಿದ್ದೆ. ದುರ್ಗಾಷ್ಟಮಿ ದಿನ. ನಿನ್ನನ್ನು ಕಾಳೀಗೆ ಬಲಿಕೊಟ್ಟು ಪೂಜಿಸುತ್ತಿದ್ದರು.’

“ಅದು ಸೊಗಸಾದ ಕನಸೇನೋ?” ಎಂದು ಮೂಗನ್ನು ಗಲ್ಲದವರೆಗೂ ಇಳಿಬಿಟ್ಟುಕೊಂಡ.

ಅನ್ಯಾಯವಾಗಿ ಈ ಅರಿಯದವನ ಮನಸ್ಸನ್ನು ನೋಯಿಸಿದೆನಲ್ಲಾ ಎಂದು ನಾನು ನೊಂದುಕೊಂಡೆ.

‘ಇಲ್ಲಾ ನಾಯಕಾ, ಈ ಕುಹಕ ಬುದ್ಧಿ, ಏನೋ ಹೇಳಿದೆ; ಅದನ್ನು ಮನಸ್ಸಿಗೆ ತಂದುಕೊಳ್ಳುವುದೇ’ ಎಂದೆ.

ಆ ವೇಳೆಗೆ ಅವನು ನಾನು ಹೇಳಿದುದನ್ನು ಮನ್ನಿಸಿದ್ದ; ಮರೆತೂ ಬಿಟ್ಟಿದ್ದ. ಜ್ಞಾಪಕ ಇಟ್ಟುಕೊಳ್ಳಲೂ ಆಗುತ್ತಿದ್ದಿಲ್ಲ.

‘ನೀನು ಅನ್ನದೆ ಇನ್ನ್ಯಾರು ಅನ್ನುತ್ತಾರೆಯೋ!’ ಎಂದು ಹೇಳಿದ.

‘ಅದಿರಲಿ. ಇದೇನು, ಇಷ್ಟು ಹೊತ್ತಿನಲ್ಲಿ ಬಂದೆಯಲ್ಲಾ?’

‘ನೋಡು, ಇವತ್ತು ಬೆಳಿಗ್ಗೆ ಆಸ್ಪತ್ರೆಗೆ ಹೋಗಿದ್ದೆ. ನನ್ನ ತಂಗಿಯ ಮಗುವನ್ನು ಎತ್ತಿಕೊಂಡು ಡಾಕ್ಟರಿಗೆ ತೋರಿಸಲು ಕರೆದುಕೊಂಡು ಹೋಗುತ್ತಿದ್ದೆ. ನೋಡಿದವರೆಲ್ಲರೂ ‘ನಿನ್ನದೇನೊ ಮಗು? ಇಷ್ಟು ಚೆನ್ನಾಗಿದೆ’ ಎಂದರು. ಒಳ್ಳೇ ಪೀಕಲಾಟಕ್ಕೆ ಸಿಕ್ಕಿಹಾಕಿಕೊಂಡೆ’ ಎಂದ.

ಇವನು ಇವನ ತಂಗಿಯ ಮಗುವನ್ನು ಎತ್ತಿಕೊಂಡು ಹೋಗುತ್ತಿದ್ದರೆ, ನೋಡಿದವರೆಲ್ಲರೂ ಇವನನ್ನು ಯಾಕೆ ಕೇಳಬೇಕು? ಇವನೇನು ಕಳುವು ಮಾಡಿಕೊಂಡು ಹೋಗುತ್ತಿದ್ದನೇ? ಹಾಗೆ ಕೇಳಿದರೆ ಇವನಿಗೇನು ಪೀಕಲಾಟವೋ ಕಾಣೆ! ಅದು ಅಷ್ಟು ಹೆಚ್ಚಿನ ಸಂಗತಿಯೇ ನನ್ನನ್ನು ಎಬ್ಬಿಸಿ ಹೇಳುವುದಕ್ಕೆ? ಇದೊಂದೂ ಅವನಿಗೆ ಬೇಕಾಗಿದ್ದಿಲ್ಲ. ಆ ದಿನ ನಡೆದ ಒಂದು ವಿಚಾರದಲ್ಲಿ ಅವನು ಮುಖ್ಯಪಾತ್ರ ವಹಿಸಿದವನು. ಅದನ್ನು ನನಗೆ ತಿಳಿಸಬೇಕೆಂಬುದೇ ಅವನ ಆಶೆ. ಅದರಲ್ಲಿ ಅಸಂಬದ್ಧ ವಿಷಯಗಳಿರಲಿ, ಆಗಲಾರದುದಿರಲಿ, ಅಪ್ರಕೃತವಿರಲಿ, ಅವೆಲ್ಲವೂ ಅವನನ್ನು ಬಾಧಿಸುತ್ತಿರಲಿಲ್ಲ. ಈ ವಿಚಾರದಲ್ಲಿ ಅವನ ಮನಸ್ಸು ಕನಸಿನಂತೆ. ಕನಸಿನಲ್ಲಿ ನೋಡಿ, ನಾವೇ ಮುಖ್ಯ ಪಾತ್ರಧಾರಿಗಳು. ದೇವರು ಮೊದಲುಗೊಂಡು ಎಲ್ಲರೂ ನಮ್ಮ ಅನುಸಾಯಿಗಳು. ಅಂತೆಯೇ ಕುಪ್ಪಣ್ಣ.

‘ಇದು ಹೇಳುವುದಕ್ಕೋಸ್ಕರ ಇಲ್ಲಿಗೆ ಬಂದೆಯಾ?’ ಎಂದು ಬಟ್ಟೆ ಹಾಕಿಕೊಳ್ಳಲು ಆರಂಭಿಸಿದೆ. ಬಟ್ಟೆ ಹಾಕಿಕೊಂಡು ಹೊರಗಡೆಗೆ ಅವನನ್ನೂ ಕರೆದುಕೊಂಡು ಬಂದೆ. ಅಲ್ಲಿದ್ದ ಸೈಕಲ್ ತೆಗೆದುಕೊಂಡು ‘ಇನ್ನು ಬರುತ್ತೇನೆ ಕುಪ್ಪಣ್ಣಾ, ನನಗೆ ಕೆಲಸವಿದೆ’ ಎಂದು ಹೇಳಿ ಹೊರಟೆ.

ಸೈಕಲ್ ಹತ್ತಿಕೊಂಡು ಛಾವಡಿಯ ಕಡೆಗೆ ಹೋಗಿ ಅಲ್ಲಿ ಸ್ವಲ್ಪ ಹೊತ್ತಿದ್ದು ನಂತರ ಹಾಗೆಯೇ ಹೊರಟೆ. ಸಾಯಂಕಾಲ—ಆ ದಿನ ನಿದ್ರೆ ಬೇರೆ ಮಾಡಿದ್ದೆ—ಯಾವುದಾದರೂ ಒಂದು ಸಿನೀಮಾಕ್ಕೆ ಹೋಗೋಣವೆಂದು ಯೋಚಿಸಿ ಹತ್ತಿರಿದ್ದ ಸಿನೀಮಾ ಮಂದಿರದ ಕಡೆಗೆ ಹೊರಟೆ. ಅಲ್ಲಿ ಬೈಸಿಕಲ್ಲುಗಳನ್ನು ಇಡುವ ಕಡೆಗೆ ಬೈಸಿಕಲ್ಲನ್ನು ಇಡಲು ಹೋಗುವಾಗ್ಗೇ ಯಾರೋ ನನ್ನನ್ನು ಕೂಗಿದರು.

ದನಿ ಬಂದ ಕಡೆ ನೋಡಿದರೆ ಕುಪ್ಪಣ್ಣ!

ಇವತ್ತು ಕುಪ್ಪಣ್ಣ ಸಿನೀಮಾದ ಒಂಭತ್ತಾಣೆ ಮಿಗಿಸಿದ ಎಂದುಕೊಂಡು 'ಇದೇನೊ, ಇಲ್ಲಿಗೆ ಬಂದಿದ್ದೀಯೆ?' ಎಂದೆ.

'ಸುಮ್ಮಗೆ ಹಾಗೇ ವಾಕಿಂಗ್ ಬಂದಿದ್ದೆ. ಸಿನೀಮಾಕ್ಕೆ ಹೋಗುತ್ತಿದ್ದಿಯೇನೋ? ಹೋಗು' ಎಂದ.

'ನೀನೂ ಬರುತ್ತೀಯೇನು' ಎಂದೆ. ಹಾಗೆನ್ನುವಾಗ ಅವನೂ ಸಿನೀಮಾಗಾಗಿಯೇ ಬಂದಿದ್ದಾನೆ, ನಾನೂ ಕೂಡ ಬಂದಿದ್ದೇನೆ, ಇಬ್ಬರೂ ಒಟ್ಟಿಗೆ ಅವರವರ ಖರ್ಚಿನಲ್ಲಿ ಒಳಗೆ ಹೋಗೋಣವೆಂದು ನನ್ನ ಯೋಚನೆ. ಆದರೆ ಅದು ಕುಪ್ಪಣ್ಣನ ಮುಂದಿನ ಮಾತಿನಿಂದ ಭಂಗವಾಯಿತು.

'ಇಲ್ಲಾ ಕಣೊ, ನನ್ನ ಹತ್ತಿರ ದುಡ್ಡೇ ಇಲ್ಲ. ನೀನು ಬಾ ಅಂದರೆ ಬರುತ್ತೇನೆ' ಎಂದ.

ನಾನು ಆಡಿದ ಮಾತು ಈ ರೀತಿಯಲ್ಲಿ ಪರ್ಯವಸಾನವಾಯಿತು. ಇವನ ಮನಸ್ಸನ್ನು ಮಧ್ಯಾಹ್ನವೆಲ್ಲಾ ನೋಯಿಸಿದ್ದೇನೆ. ಈಗಲಾದರೂ ತಂಪು ಮಾಡೋಣವೆಂಬ ಆಸೆ ತಲೆದೋರಿತು. ಪಾಪ, ಸರಳ ಹೃದಯಿ, ಇವನನ್ನು ಸಂತೋಷಪಡಿಸೋಣವೆಂದೆನ್ನಿಸಿತು.

ಅಂತೂ ಆ ದಿನ 'ಬಾ ನನ್ರಾಜ' ಎಂದು ಸಿನೀಮಾಕ್ಕೆ ಕರೆದುಕೊಂಡು ಹೋದೆ.

ಸಿನೀಮಾದಲ್ಲಿ ಒಂದು ಸಿಗರೇಟ್ ಸೇದೋಣ ಎನ್ನಿಸಿತು. ನನ್ನ ಸ್ನೇಹಿತರ ಕೈಲಿ ಹಣವನ್ನು ಕೊಟ್ಟು ಸಿಗರೇಟು ತಾರೆಂದರೆ, ಚಿಲ್ಲರೆಯನ್ನು ಮಾಮೂಲಾಗಿ ಅವರೇ ಇಟ್ಟುಕೊಂಡು ಮರೆತಂತೆ ನಟಿಸಿ, ಸಿಗರೇಟ್ ಪೆಟ್ಟಿಗೆಯನ್ನೂ ತಾವೇ ಇಟ್ಟುಕೊಂಡು ನನಗೊಂದನ್ನು ಕೊಡುವುದು ವಾಡಿಕೆ. ಆದಷ್ಟು ಸಿಗರೇಟನ್ನು ಗಿಟ್ಟಿಸೋಣ ಎಂದು ಐದೈದು ನಿಮಿಷಕ್ಕೂ ಒಂದೊಂದನ್ನು ತೆಗೆದುಕೊಂಡು ಸೇದಿ ಸೇದಿ ಗಂಟಲನ್ನೆಲ್ಲಾ ಗಾರುಮಾಡಿಕೊಳ್ಳುತ್ತಿದ್ದೆ. ಚಿಲ್ಲರೆಯನ್ನೇನಾದರೂ ಕೇಳಿದೆನೊ, ಅದು ವಿರಾಮಕಾಲದಲ್ಲಿ ತಿಂಡಿಯ ಪಾಲಾಗುತ್ತಿತ್ತು. ಇದೆಲ್ಲದರ ಅನುಭವವೂ ಸಾಕಷ್ಟು ಆಗಿತ್ತು. ಕುಪ್ಪಣ್ಣನನ್ನು ಸಿಗರೇಟ್ ತಾರೆನ್ನಲು ಭಯ. ನನಗೆ ಹೋಗಿ ತರಲು ಬೇಜಾರು. ಸ್ವಲ್ಪಹೊತ್ತು ಆಸೆಯನ್ನು ನಿಗ್ರಹಿಸಿದೆ. ಆದರೆ ಧೂಮ್ರಪಾನದ ಆತುರವು ಹೆಚ್ಚಾಯಿತು. ಕಡೆಗೆ 'ಕುಪ್ಪಣ್ಣಾ, ಸಿಗರೇಟು ಇಲ್ಲವಲ್ಲೊ? ಹೋಗಲು ಬೇಜಾರು' ಎಂದೆ.

'ಅದಕ್ಕೇನೊ, ನಾನು ಹೋಗಿ ತರುತ್ತೇನೆ. ಆದರೆ ನನ್ನಲ್ಲಿ ಹಣವಿಲ್ಲವಲ್ಲಾ!' ಎಂದ.

ಅದನ್ನು ಕೇಳಿಯೇ ನನಗೆ ಸಂತೋಷವಾಯಿತು. ಹಣವನ್ನು ಕೊಟ್ಟೆ. ಸಿಗರೇಟನ್ನು ಕೊಂಡು ತಂದು ಚಿಲ್ಲರೆಯಷ್ಟನ್ನೂ ಸಿಗರೇಟು ಪೆಟ್ಟಿಗೆಯನ್ನೂ ನನ್ನ ಕೈಲಿ ಕೊಟ್ಟ. ನಾನು ತೆಗೆದುಕೊಟ್ಟ ಒಂದು ಸಿಗರೇಟನ್ನೇ ಸೇದಿದ. ಮರಳಿ ನಾನು ಕೊಡುವ ತನಕ ಇನ್ನೊಂದನ್ನೂ ಕೇಳಲಿಲ್ಲ.

ಸಿನೀಮಾ ಆದ ನಂತರ ಅವನನ್ನು ಮನೆಯಲ್ಲಿ ಬಿಟ್ಟು, ನಂತರ ಮನೆಗೆ ಹೋಗೋಣವೆನ್ನಿಸಿತು. ಸೈಕಲನ್ನು ಕೈಯಲ್ಲಿ ನೂಕಿಕೊಂಡು ಅವನೊಡನೆ ಆ ಮಾತು ಈ ಮಾತು ಆಡುತ್ತಾ, ಅವನ ಮನೆಯ ಕಡೆಗೆ ಹೊರಟೆ. ಅವನ ಮನೆಯೂ ಸಿಕ್ಕಿತು.

'ಹೊರಡ್ತೀಯಾ ಕುಪ್ಪಣ್ಣ?' ಎಂದು ದೀಪವನ್ನು ಹಚ್ಚಿಕೊಂಡು ಹೊರಡಲೆತ್ನಿಸುವಾಗ ಆ ಹಾಳು ಸರಪಣಿಯು ಕಳಚಿಕೊಂಡಿತು. ಸರಪಣಿಯನ್ನು ಪೋಣಿಸಹೋದರೆ ಕೈಯೆಲ್ಲಾ ಕೀಲೆಣ್ಣೆ ಆಗುವುದು. ಹಾಗೆಯೆ ನಡೆದೇ ಮನೆಗೆ ಹೋಗಲೇ ಎಂದನ್ನುತ್ತಿತ್ತು ಮನಸ್ಸು.

ಆ ವೇಳೆಗೆ ಕುಪ್ಪಣ್ಣ ಇನ್ನೂ ಮನೆಯೊಳಕ್ಕೆ ಹೋಗಿದ್ದಿಲ್ಲ. ಸರಪಳಿಯು ಬಿದ್ದಿದ್ದನ್ನು ಕಂಡು ಹಿಂತಿರುಗಿದ. ತಾನೇ ಬಂದು ಅದನ್ನು ಸರಿ ಮಾಡಿದ. ನಂತರ 'ಹೋಗಿಬರುತ್ತೇನೆ' ಎಂದು ಹೇಳಿ ಮಶಿಯ ಕೈಯಿಂದ ಸಲಾಮು ಹಾಕಿ ಮನೆಗೆ ಹೋದ.

ಅವನು ಮನೆಯ ಒಳಕ್ಕೆ ಹೋಗುವವರೆಗೂ ಅವನನ್ನೇ ನೋಡುತ್ತಾ ನಿಂತೆ. ನಂತರ ಅವನ ಸರಳ ಮನಸ್ಸನ್ನೂ, ನಿಷ್ಕಪಟ ವಿಶ್ವಾಸವನ್ನೂ ನೆನೆಸಿಕೊಳ್ಳುತ್ತಾ ನಡೆದು ಮನೆಗೆ ಹೋದೆ.

ಆಗನ್ನಿಸಿತು—ನಮ್ಮ ಸಹಪಾಠಿಗಳಲ್ಲಿ, ಸ್ನೇಹಿತರಲ್ಲಿ, ವಿದ್ಯಾವಂತರಿಲ್ಲದಿದ್ದರೆ ಬೇಡ, ಶಕ್ತಿಯುತರಿಲ್ಲದಿದ್ದರೂ ಪರವಾಗಿಲ್ಲ—ಈ ತೆರನಾದ ನಿಷ್ಕಪಟಿಗಳು ಇದ್ದರೆ ನಾವು ಪುಣ್ಯಶಾಲಿಗಳು ಎಂದು. ಅಂತಹ ಸ್ನೇಹ ವಿಶ್ವಾಸಗಳಿಗೆ ನಾವು ಮಾತ್ರ ಅರ್ಹರೇ? ಎಂಬ ಅನುಮಾನವೂ ತಲೆದೋರಿತು.

■

# ಸೋಪಿನ ಶಾಮಿ ರಾವಬಹದ್ದೂರನಾದದ್ದು

"ದುಡ್ಡಿದ್ದವನೇ ದೊಡ್ಡಪ್ಪ
ಬಾಯಿದ್ದವನೇ ಬಲ್ಲಿದ"
-ಹೊಸಗಾದೆ

ಶಾಮಿ ನನ್ನ ಜತೆಯಲ್ಲೇ ಬೆಳೆದ ಹುಡುಗ. ಬಲು ಪ್ರಚಂಡ. ಕ್ಷೀರ ಸಾಗರದಲ್ಲಿ ಶ್ರೀಮನ್ಮಹಾವಿಷ್ಣುವಿನ ಜತೆಯಲ್ಲಿ ಮೆರೆಯುವ ಆ ಸಾಕ್ಷಾತ್ ಲಕ್ಷ್ಮಿಯು ಇವನಲ್ಲಿ ಅದೇನು ಕಂಡಳೋ ಏನೊ! ಇವನ ಮನೆ ಹಿತ್ತಲ ಕಡೆ ಬಾಗಿಲಿಂದ ಮನೆಹೊಕ್ಕು ಏನು ಮಾಡಿದರೂ ಹೊರಗೆ ಹೋಗದೆ ಇವನನ್ನೇ ಅವಲಂಬಿಸಲಾರಂಭಿಸಿದ್ದಳು. ಇವನು ಮಾಡಿದ ಕಾರ್ಯಗಳನ್ನು ಇನ್ನಾರಾದರೂ ಮಾಡಿದರೆ ಸೆರೆಮನೆಗೆ ತುತ್ತಾಗುತ್ತಿದ್ದರು. ಇವನಾದರೊ ಅವುಗಳಿಂದಲೇ ಉನ್ನತಸ್ಥಿತಿಗೆ ಬಂದು ಲಕ್ಷ್ಮೀಶನಾದುದು. ಅವನ ಪರಿಚಯವನ್ನು ಸ್ವಲ್ಪ ಹೇಳುತ್ತೇನೆ; ಓದಿನೋಡಿ.

ಇವನು ತಾಯಿಯ ಗರ್ಭದಲ್ಲಿದ್ದಾಗಲೇ ತಾಯ್ತಂದೆಗಳಿಬ್ಬರಿಗೂ ಬಹಳ ಯೋಚನೆಗಿಟ್ಟು ಕೊಂಡಿತು. ತಂದೆಯು ಕಡಿಮೆ ಬ್ಯಾಂಕಿನ ನೌಕರ. ತಾಯಿಯು ಜಾಕೀಟು ವಗೈರೆ ಬಟ್ಟೆ ಹೊಲಿಯುವ ಅಂಗಡಿ ಇಟ್ಟುಕೊಂಡಿದ್ದಳು. ಇಬ್ಬರೂ ಈ ರೀತಿ ಮೇಲ್ಸಂಪಾದನೆಯಲ್ಲಿ ಅಂದರೆ ಕದ್ದು ಹಣ ಗಳಿಸುವುದರಲ್ಲಿ ನಿಸ್ಸೀಮರಾಗಿದ್ದರು. ಮಗನೂ ಹೀಗೆ ಕಳ್ಳನಾಗುತ್ತಾನೇನೋ! ಎಂದು ಬಹಳವಾಗಿ ಹೆದರಿದ್ದರು. ಆದರೇನು ಮಾಡಲಾಗುವುದು! ಆಗುವುದನ್ನೆಲ್ಲಾ ಅನುಭವಿಸಲೇಬೇಕು. ಮಗುವು ಹುಟ್ಟಿತು. ಹುಟ್ಟಿದ ಕ್ಷಣದಿಂದ ನಾಲ್ಕು ದಿನಗಳವರೆವಿಗೂ ಹಿಡಿದ ಮುಷ್ಟಿಯನ್ನು ಬಿಡಲೇ ಇಲ್ಲ. ಏನೇನು ಮಾಡಿದರೂ ಸಾರ್ಥಕವಾಗಲಿಲ್ಲ. ಯಂತ್ರ, ತಂತ್ರ, ಮುಡುಪು, ಬೇಡಿಕೆಗಳೆಲ್ಲವೂ ನಿರರ್ಥಕವಾದುವು. ಕಡೆಗೆ ಕಂಡವರು ಹೇಳಿದ ಉಪದೇಶದ ಮೇಲೆ ಮಾನಸಿಕ ಶಾಸ್ತ್ರಾಧ್ಯಾಪಕನಲ್ಲಿಗೆ ಮಗುವನ್ನು ಕರೆದುಕೊಂಡು ಹೋದರು. ಅವನು ತಂದೆತಾಯಿಗಳಿಬ್ಬರನ್ನೂ ಕೂಲಂಕಷವಾಗಿ ಪ್ರಥಮತಃ ಪರೀಕ್ಷಿಸಿದನು, ಮತ್ತು ಪ್ರಶ್ನಿಸಿದನು. ತಾಯಿಯು ತಾನು ಹೊಲಿಯುವ ಬಟ್ಟೆಯಲ್ಲಿ ಕಾಲುಭಾಗವನ್ನು ಕದಿಯುವ ರೂಢಿಯೆಂದಳು. ತಂದೆಯು ಯಾರಿಗೂ ತಿಳಿಯದಂತೆ ಬ್ಯಾಂಕಿನ ಲೆಕ್ಕದಲ್ಲಿ ಆರಾಣೆ ಭಾಗವನ್ನು ಗಳಿಸಿದ್ದನೆಂದು ಒಪ್ಪಿಕೊಂಡನು. ಮಾನಸಿಕ ವೈದ್ಯನು ಸ್ವಲ್ಪ ಯೋಚನೆ ಮಾಡಿ ಮಗುವಿನ ಹತ್ತರ ಹೋದನು. ಅದರ ಕಣ್ಣೆದುರಿಗೆ ರೂಪಾಯಿ ಒಂದನ್ನು ಆಡಿಸಿದನು. ರೂಪಾಯಿಯನ್ನು ಕಿತ್ತುಕೊಳ್ಳಲು ಮಗು ಕೈಚಾಚಿತಂತೆ. ಹಾಗೆ ಕೈಚಾಚುವಾಗ ಬೆರಳುಗಳನ್ನು ಸಡಿಲಿಸಿತಂತೆ. ಬಿಟ್ಟ ಕೈಯಿಂದ ಉಂಗುರವೊಂದು ಕೆಳಗೆ ಬಿದ್ದಿತಂತೆ. ಅದು ಸೂಲಗಿತ್ತಿಯ

ಉಂಗುರವಾಗಿತ್ತಂತೆ. ಇದನ್ನು ಕಂಡ ತಾಯಿತಂದೆಗಳು ಬೇರೆ ಮಾರ್ಗವಿಲ್ಲವೆಂದು ಒಡನೆಯೇ ವಿಷ ತೆಗೆದುಕೊಂಡು ಪ್ರಾಣಬಿಟ್ಟರಂತೆ. ಹೀಗಾಗಿ ಶಾಮಿಯು ಅನಾಥವಾಗಿ ಬೆಳೆದ ಅನಾಥಾಲಯದಲ್ಲಿ, ಅಂದರೆ ಚಿಕ್ಕಪ್ಪನ ಮನೆಯಲ್ಲಿ.

ಆ ಚಿಕ್ಕಪ್ಪನ ಮನೆಯಲ್ಲಿ ನಾಲ್ಕಾರು ಜನ ಮಕ್ಕಳಿದ್ದರು. ಅವರೊಡನೆ ಇವನು ಬೆಳೆಯುತ್ತಿದ್ದನು. ಇವನಿಗೆ ಎಂಟು ವರ್ಷವಾಗಿದ್ದಾಗ ಶಾಲೆಯಲ್ಲಿ 'ಲಾಟರಿ ಟಿಕೆಟ್ಟು'ಗಳ ಪುಸ್ತಕವೊಂದು ಸಿಕ್ಕಿತಂತೆ. ಅದನ್ನು ಮನೆಗೆ ತೆಗೆದುಕೊಂಡು ಹೋಗಿ ಒಬ್ಬೊಬ್ಬ ಹುಡುಗನಿಗೂ ಸ್ವಲ್ಪ ಉಪ್ಪಿಟ್ಟು, ಒಂದು ಬಳಪ, ಒಂದು ಸೀಸದಕಡ್ಡಿ ಇತ್ಯಾದಿಗಳಿಗೆ ಒಂದೊಂದು ಟಿಕೆಟ್ಟನ್ನು ಮಾರಿದನಂತೆ. ಹದಿನೈದು ದಿನಗಳಾದ ಮೇಲೆ ನಿಮಗಾರಿಗೂ 'ಪ್ರೈಸ್' ಬರಲಿಲ್ಲವೆಂದು ಸುದ್ದಿ ಹೇಳಿದನಂತೆ. ಈ ರೀತಿಯಲ್ಲಿ ತನ್ನ ಉಪಚಾರಗಳನ್ನು ತಾನೇ ಮಾಡಿಕೊಳ್ಳುತ್ತಿದ್ದನು.

ವಯಸ್ಸಾದ ಮೇಲೆ ಏನೇನೊ ಕೆಲಸಗಳಲ್ಲಿ ಕೈ ಹಾಕಿದ. ಯಾವುದೂ ಇವನಿಗೆ ಹೆಚ್ಚು ಪ್ರಯೋಜನಕಾರಿಯಾಗಲಿಲ್ಲ. ಬೊಂಬಾಯಿನಲ್ಲಿ ಕೆಲಸ ಸಿಗುವುದೆಂದು ಅಲ್ಲಿಗೆ ಹೋದ. ಅಲ್ಲಿ ಸೋಪ್ ಕಾರ್ಖಾನೆಯವರೊಬ್ಬರು 'ನಮ್ಮ ಸೋಪನ್ನು ನಿಮ್ಮೂರಿನಲ್ಲಿ ಮಾರು. ನಿನಗೆ ಧಾರಾಳವಾದ ಕಮೀಷನ್ ಕೊಡುತ್ತೇವೆ. ಅಲ್ಲದೆ ಮೊದಲ ಸರಕನ್ನು ನಮ್ಮ ಜವಾಬ್ದಾರಿಯ ಮೇಲೆ ನಿನಗೆ ಕೊಡುತ್ತೇವೆ' ಎಂದರು. ಆಗಲೆಂದು ಒಪ್ಪಿಕೊಂಡು ನಮ್ಮೂರಿಗೆ ಹೊರಟು ಬಂದು ವ್ಯಾಪಾರಕ್ಕೆ ಶುರುಮಾಡಿದ. ಬೊಂಬಾಯಿನಿಂದ ಸೋಪು ತರಿಸುವುದು; ತನ್ನ ಹೆಸರನ್ನು ಅದಕ್ಕೆ ಒತ್ತಿ ತಾನೇ ತಯಾರಿಸುವೆನೆಂದು ಹೇಳಿಕೊಳ್ಳುವುದು. ನಂತರ ಎಲ್ಲರ ಹತ್ತಿರಲೂ ಹೋಗಿ ಮಾರಲಾರಂಭಿಸುವುದು. ಹೀಗೆ ಮಾರಲೆತ್ನಿಸಿದಾಗ ಅವನು ಕಟ್ಟಿದ ಆಟವನ್ನು ನಿಮಗೆ ಹೇಳಲೇಬೇಕು. ಉದಾಹರಣೆಗೆ ಅವನ ಜಾಹೀರಾತುಗಳನ್ನು ಓದುತ್ತೇನೆ ಕೇಳಿ.

'ನಿಮ್ಮೂರಿನ ಅನಾಥಬಾಲಕನ ಉದ್ಯಮ! ಸಮಾಜದಿಂದ ಬೆಳೆಸಲ್ಪಟ್ಟವನು ಸಮಾಜದ ಋಣವನ್ನು ತೀರಿಸಲು ಮಾಡಿರುವ ಪ್ರಯತ್ನ! ಪ್ರೋತ್ಸಾಹಿಸಿರಿ!!'

'ಶುಚಿಯಾದ ಮನಸ್ಸಿನಿಂದ ಮಾಡಿದ ಸಾಬೂನನ್ನೆ ಶುಚಿಮಾಡಲು ಉಪಯೋಗಿಸಿರಿ.'

ಒಮ್ಮೆ ಚೀನೀಯ ವರ್ತಕನೊಬ್ಬನು ಎರಡು ಪೆಟ್ಟಿಗೆ ಸಾಬೂನನ್ನು ತೆಗೆದುಕೊಂಡು ಹೋದವನು ಹಣವನ್ನೂ ಕಳಿಸಲಿಲ್ಲ. ಪತ್ತೆಯನ್ನೂ ಕೊಡಲಿಲ್ಲ. ಆದರೆ ಶಾಮಿಯು ಸುಮ್ಮನಿರುವನೇ? ಅದನ್ನೇ ಜಾಹೀರಾತಿಗೆ ಉಪಯೋಗಿಸಿಕೊಂಡ.

'ಚೀನೀಯರೂ ಸಾಬೂನನ್ನು ಉಪಯೋಗಿಸುತ್ತಾರೆ. ಆದರೆ ಅದು ಶಾಮಿಯ ಸಾಬೂನಾಗಿರಬೇಕು!'

'ಕೊಳಕು ಚೀನೀಯರಿಗೆ ಶಾಮಿಯ ಸಾಬೂನೇ ಸರ್ವೌಷಧ!'

ನಮ್ಮೂರಿನ ಸ್ವದೇಶಿ ಉದ್ಯಮವೆಂದು ಕೆಲವರು, ಅನಾಥಬಾಲಕನ ಪ್ರಯತ್ನವೆಂದು ಕೆಲವರು, ಸಾಬೂನು ಅಷ್ಟು ಒಳ್ಳೆಯದಲ್ಲದಿದ್ದರೂ ಬೆಲೆಯು ಸುಲಭವೆಂದು ಹಲವರು, ಸರಕಾರಕ್ಕೆ ಒದಗಿಸಲು ಇದೇ ಸಾಕೆಂದು ಕೆಲವು ವರ್ತಕರು, ಹೀಗಾಗಿ ಇವನು ಸಾಬೂನಿನ ವ್ಯಾಪಾರದಲ್ಲಿ ಅದ್ವಿತೀಯನಾದನು.

ಕೆಲವೇ ವರ್ಷಗಳಲ್ಲೇ ಬೊಂಬಾಯಿನ ಕಾರ್ಖಾನೆಯೊಂದಿಗೆ ಒಪ್ಪಂದವನ್ನು ಮಾಡಿಕೊಂಡನು.

ತಿಂಗಳಿಗೆ ಅವರು ಇವನಿಗೆ ಹತ್ತುಸಾವಿರ ರೂಪಾಯಿ ಸಾಬೂನನ್ನು ಮಾರಬೇಕೆಂದು. ಹಾಗಿಲ್ಲದಿದ್ದರೆ ಅವರು ದಂಡ ಕೊಡಬೇಕೆಂದು. ಕಾರ್ಖಾನೆಯವರಿಗೆ ಮಾರುವುದೇ ಕಷ್ಟವಾಗಿದ್ದಾಗ ಈ ಒಪ್ಪಂದಕ್ಕೆ ಬಲು ಹರ್ಷದಿಂದ ಒಪ್ಪಿಕೊಂಡರು. ಆದರೆ ನೋಡಿ, ಇದಾದ ಎರಡು ತಿಂಗಳಲ್ಲಿಯೇ ಕೂಲಿಕಾರರ ಮುಷ್ಕರವಾರಂಭವಾಯಿತು. ಕಾರಖಾನೆಯವರಿಗೆ ಷರತ್ತುಗಳನ್ನು ನಡೆಯಿಸಿಕೊಳ್ಳಲು ಆಗಲಿಲ್ಲ. ಸರಿ, ಕಾರ್ಖಾನೆಯವರ ಮೇಲೆ ಅರ್ಧಲಕ್ಷ ರೂಪಾಯಿ ದಂಡಕ್ಕೆ ದಾವಾಹಾಕಿದ ಶಾಮೀ. ಇದೆಲ್ಲಿಯ ತಾಪತ್ರಯವೆಂದು ಕಾರ್ಖಾನೆಯವರು ಮೂವತ್ತು ಸಾವಿರ ರೂಪಾಯಿಗೆ ಇವನೊಂದಿಗೆ ರಾಜಿಮಾಡಿಕೊಂಡರು. ಆ ಹಣದಲ್ಲೇ ಇವನು ಬೇರೊಂದು ಕಾರ್ಖಾನೆಯನ್ನು ನಮ್ಮೂರಿನಲ್ಲಿ ಹಾಕಿದ. ಕುರುಡುಲಕ್ಷ್ಮಿ ಒದೆಯಲಾರಂಭಿಸಿದರೆ ಕೊನೆಯೆಲ್ಲಿ? ಮೊದಲೆಲ್ಲಿ? ಕೇವಲ ಐದಾರು ವರ್ಷಗಳಲ್ಲಿ ಇಡೀ ಭಾರತದಲ್ಲೆಲ್ಲಾ ಇವನ ಸಾಬೂನೇ ಬೇರೆ ಬೇರೆ ಕಾರ್ಖಾನೆಗಳ ಹೆಸರಿನಲ್ಲಿ ಮಾರಲ್ಪಡಲಾರಂಭಿಸಿತು. ಶಾಮಿಯು ಸೋಪಿನಲ್ಲೇ ಲಕ್ಷಾಧೀಶ್ವರನಾದ. ಕಡೆಗೆ ಕೋಟ್ಯಾಧೀಶ್ವರನಾದ. ಅಂದಿನಿಂದಲೇ ಅವನಿಗೆ ಸೋಪಿನ ಶ್ಯಾಮಿ ಎಂಬ ಅಡ್ಡ ಹೆಸರು ಸ್ಥಿರವಾಯಿತು.

ಶಾಮಿಗೆ ಈಗ್ಗೆ ಒಂದು ಆತಂಕವುಂಟಾಯಿತು. ಎಲ್ಲರಿಗೂ ರಾವಬಹದ್ದೂರ, ದಿವಾನ್‌ಬಹದ್ದೂರ ಇತ್ಯಾದಿಯಾದ ಬಿರುದುಗಳಿದ್ದರೆ ಇವನಿಗೆ ಸೋಪಿನ ಶಾಮಿ ಎಂಬ ಬಿರುದಾಯಿತಲ್ಲ, ಎಂದು. ಈ ಆತಂಕಕ್ಕೆ ಇವನು ಈಡಾಗುವನೇ? ಸ್ವಲ್ಪ ಹೊತ್ತು ಯೋಚಿಸಿ, ಬ್ಯಾಂಕಿನ ಚಕ್ ಬುಕ್ಕನ್ನು ಕೈಲಿ ತೆಗೆದುಕೊಂಡು ನೇರನೆ ರಾಜಾಸ್ಥಾನಕ್ಕೆ ಹೊರಟ. ಅಲ್ಲಿ ದರಬಾರ್ ಭಕ್ಷಿಯನ್ನು ನೋಡಿದ. ನೋಡಿದವನೇ ಅವರಿಗೆ ಹೇಳಿದ. 'ನೋಡ್ರೀ, ಈ ರಾಜಾಸ್ಥಾನದಲ್ಲಿ ಬಿರುದು-ಬಾವಲಿಗಳನ್ನು ನೀವೇ ಹಂಚುವ ಕೆಲಸವಂತೆ. ನನಗೆ ರಾಮುಬಹದ್ದೂರ ಎಂಬ ಬಿರುದು ಬೇಕು. ಅದಕ್ಕೇನು ಖರ್ಚಾಗುವುದೋ ಕೊಟ್ಟುಬಿಡುತ್ತೇನೆ. ನನಗೊಂದನ್ನು ಬೇಗ ಕೊಡಿ. ನೀವು ಕಷ್ಟ ತೆಗೆದುಕೊಂಡುದಕ್ಕೆ ನಿಮಗೆ ಐದು ಸಾವಿರ ರೂಪಾಯಿಯನ್ನು ಬಹುಮಾನ ಕೊಡುತ್ತೇನೆ.'

ಭಕ್ಷಿಯವರು ಬಿರುಸಾಗಿ ಇವನನ್ನು ನೋಡುತ್ತಾ 'ಬಿರುದುಗಳು ಬೆಲೆಗೆ ಇಲ್ಲಿ ಸಿಗುವುದಿಲ್ಲ. ನೀವು ತಪ್ಪು ತಿಳಿವಳಿಕೆಯಿಂದ ಬಂದಂತಿದೆ. ಮುಂದೆ ಹೋಗಿ' ಎಂದರು.

'ಇದೆಲ್ಲಾ ನನಗೂ ಗೊತ್ತಿದೇರಿ. ನಿಮಗೆ ಹತ್ತು ಸಾವಿರ ಕೊಡುತ್ತೇನೆ. ಬೇಗ ಬರೆಸಿಕೊಡಿರಿ' ಎಂದ ಶಾಮಿ.

'ಅಯ್ಯಾ, ಪ್ರಜಾಸೇವೆ ರಾಜಸೇವೆ ಇವುಗಳನ್ನು ಬಹಳ ಕಾಲ ಮಾಡಿದ ಮಹನೀಯರಿಗೆ ಮಾತ್ರ ಈ ಬಿರುದುಗಳು ಸಿಗುವುವು. ಇವುಗಳನ್ನು ಸರಕಿನಂತೆ ಮಾರುವುದಿಲ್ಲ. ನನಗೆ ವೇಳೆಯಾಗಿದೆ, ಹೋಗಿರಿ' ಎಂದರು ದರಬಾರ ಭಕ್ಷಿಯವರು.

'ಓಹೋ, ಏನ್ರೀ ಹೆದರಿಸುತ್ತೀರಿ. ನಾನೇನೂ ಇಲ್ಲಿ ನಿಮ್ಮ ಬುಡ್ಡು ಬೆದರಿಕೆಗೆ ಹೆದರಿ ಹೋಗಲು ಬಂದಿಲ್ಲ. ನೀವೇನಾದರೂ ಹಾಗೆ ಬಿರುದನ್ನು ಕೊಡದಿದ್ದರೆ ನಿಮಗೆ ತಕ್ಕ ಶಾಸ್ತಿ ಮಾಡಲು ಎಲ್ಲಾ ಸಿದ್ಧತೆಗಳನ್ನೂ ಮಾಡಿಕೊಂಡೇ ಬಂದಿದ್ದೇನೆ. ಇಲ್ಲಿ ನೋಡಿ,' ಎಂದು ಜೇಬಿನಿಂದ ಕಾಗದದ ಕಡತವೊಂದನ್ನು ಬಿಚ್ಚುತ್ತಾ, "ನೋಡಿ, ಇಲ್ಲಿ ಐವತ್ತು ಲಕ್ಷ ರೂಪಾಯಿಗಳ ನಿಧಿಯೊಂದನ್ನು ಹೊರಡಿಸುತ್ತೇನೆ. ಇಂದಿನಿಂದ ಹುಟ್ಟಿದ ಮಕ್ಕಳಿಗೆ ಯಾರು ಯಾರು ರಾವಬಹದ್ದೂರ, ದಿವಾನಬಹದ್ದೂರ, ಖಾನಬಹದ್ದೂರ, ಪ್ರಜಾಸೇವಾನಿಪುಣ, ಪ್ರಜಾಮಂತ್ರಪ್ರವೀಣ ಇತ್ಯಾದಿಯಾಗಿ

ಹೆಸರಿಡುವರೊ ಅವರಿಗೆಲ್ಲಾ ತಿಂಗಳಿಗೆ ಹತ್ತು ರೂಪಾಯಿಯಂತೆ ಮಾಸಾಶನವನ್ನು ಕೊಡುತ್ತೇನೆ. ಆ ಮಕ್ಕಳುಗಳೂ ಇದೇ ಹೆಸರನ್ನು ಉಪಯೋಗಿಸುವವರೆಗೂ ಅವರಿಗೆ ತಿಂಗಳಿಗೆ ಐದುರೂಪಾಯಿ ಮಾಸಾಶನವನ್ನು ಕೊಡುತ್ತೇನೆ. ಅಲ್ಲದೆ ನಮ್ಮ ಸಂಸ್ಥೆಯಲ್ಲೇ ಅವರಿಗೆ ನೌಕರಿಗಳನ್ನು ಕೊಡುತ್ತೇನೆ. ಇನ್ನು ೧೦-೧೫ ವರುಷಗಳಲ್ಲೇ ನಮ್ಮ ಊರೆಲ್ಲಾ ನಮ್ಮ ಬಿರುದುಗಾರರಿಂದ ತುಂಬಿ ಹೋಗುತ್ತಾರೆ. ನಿಮ್ಮ ಬಿರುದುಗಾರರು ನಮ್ಮವರ ಮುಂದೆ ನಾಚಿಕೆಗೆ ಈಡಾಗುತ್ತಾರೆ ಮತ್ತು ಅವರವರ ಬಿರುದುಗಳನ್ನು ವಾಪಸು ಮಾಡಹೋಗುತ್ತಾರೆ. ಆಗ ನಿಮ್ಮ ಪಾಡನ್ನು ಯಾರೂ ನೋಡಲಾರರು. ಈ ಹವ್ಯಾಸಕ್ಕೆಲ್ಲಾ ಸರಿಯಾದ ಏರ್ಪಾಡು ಹೂಡಿದ್ದೇನೆ."

ಭಕ್ಷಿಯು ಬಕಪಕ್ಷಿಯ ಹಾಗಾಗಿ ಹೋದ. ಮೂಗಿನ ಮೇಲೆ ಬೆರಳಿಟ್ಟುಕೊಂಡು ನಿರಸ್ತನಾಗಿ ಕೂತುಕೊಂಡ. ಸ್ವಲ್ಪ ಹೊತ್ತು ಹಾಗೇ ಯೋಚಿಸಿಕೊಂಡು ಬಹಳ ನಮ್ರತೆಯಿಂದ ಹೇಳಿದ.

"ಸ್ವಾಮೀ, ನೀವು ಈಗ ಹೇಳಿದ ಆಲೋಚನೆಯನ್ನು ಜಾರಿಗೆ ತಾರದೇ ಇದ್ದರೆ, ನೀವು ರಾಜಸೇವೆಯನ್ನು ಸ್ತುತ್ಯರೀತಿಯಲ್ಲಿ ಮಾಡಿದಂತೆ ಆಗುವುದು. ಅಂದಮೇಲೆ ಬಿರುದನ್ನು ಪಡೆಯಲು ನಿಮಗಿಂತಲೂ ಅರ್ಹರು ಯಾರೂ ಇಲ್ಲ. ಅಂದ ಮೇಲೆ ನಿಮಗೆ ಬಿರುದನ್ನು ಕೊಡಿಸುವುದು ನಮಗೆಲ್ಲಾ ಬಹಳ ಸಂತೋಷವಾದ ಕೆಲಸ. ಆದರೆ ನೀವು ಯಾವುವಾದರೂ ಒಂದು ಮಹತ್ತರವಾದ ಕಾರ್ಯವನ್ನು ಮಾಡಿದ್ದೀರೆಂದು ನಾವು ಕೇಳಿದವರಿಗೆ ಹೇಳುವಂತಿರಬೇಕು. ಅದಕ್ಕಾಗಿ ಸಾಬೂನನ್ನು 'ಅರಸನ ಸಾಬೂನು' ಎಂದು ನಾಮಕರಣ ಮಾಡಿ. ನೀವೂ ಆಗ ರಾಜಭಕ್ತಿಪ್ರದರ್ಶನ ಮಾಡಿದಂತಾಗುತ್ತದೆ. ನಾವು ಹಾಗೆ ಹೇಳುವಂತಾಗುತ್ತದೆ. ಇನ್ನೆರಡು ತಿಂಗಳಲ್ಲಿಯೇ ನಿಮಗೆ ಬಿರುದು ದೊರಕುವಂತೆ ಮಾಡುತ್ತೇನೆ."

ಸರಿ, ಮಿಕ್ಕ ವಿಚಾರವೆಲ್ಲಾ ಚರಿತ್ರಾಂಶವಾದುದು. ನವವರ್ಷದ ಆರಂಭದ ಬಿರುದುಪಟ್ಟಿಯಲ್ಲಿ, ರಾಜಸೇವೆಯಲ್ಲಿ ಆಸಕ್ತಾಗ್ರೇಸರನಾದ ಶಾಮಿಗೆ ರಾವಬಹದ್ದೂರ ಬಿರುದು ಬಂದಿದ್ದಿತು. ಅದಕ್ಕಾಗಿ ಅವನಿಗೆ ಎಲ್ಲೆಲ್ಲೂ ಪ್ರಜಾಸಮ್ಮೇಳನಗಳನ್ನು ಮಾಡಿ ಗೌರವಾರ್ಥವಾಗಿ ಸತ್ಕಾರ ಕೂಟಗಳನ್ನು ಏರ್ಪಡಿಸಿದರು. ಎಲ್ಲೆಲ್ಲೂ ರಾವಬಹದ್ದೂರರ ಶ್ಲಾಘನೆಯೇ! ಆದರೆ ಹಾಗೆ ಮಾಡಿದವರೆಲ್ಲರೂ, ರಾವಬಹದ್ದೂರ ಸೋಪಿನ ಶಾಮಿ ಎಂದು ಹೇಳುತ್ತಿದ್ದರೇ ವಿನಹಾ ರಾವಬಹದ್ದೂರ ಶಾಮಿಯವರು ಎಂದು ಹೇಳುತ್ತಿರಲಿಲ್ಲ.

ಇದನ್ನಲ್ಲವೇ ಅದೃಷ್ಟದ ಕೊಂಕು ಎನ್ನುವುದು?

■

# ಅಮ್ಮಣ್ಣಿ

**ಕ**ನ್ನಡದಲ್ಲಿ ಎಷ್ಟೊ ಹೆಸರುಗಳನ್ನು ಕೇಳಿದೊಡನೆಯೇ ಅದು ಸ್ತ್ರೀ ಅಥವಾ ಪುಲ್ಲಿಂಗ ಅಥವಾ ನಪುಂಸಕಲಿಂಗ ಎಂದು ಹೇಳಬಹುದು. ಉದಾ: ಮುನಿಸಾಮಿ ಎಂದರೆ ಪುಲ್ಲಿಂಗ; ಸೀತೆ ಎಂದರೆ ಸ್ತ್ರೀಲಿಂಗ; ಕಂಟ್ರೋಲರ ಆಫೀಸ್ ನೌಕರ ಕೃಷ್ಣರಾಯ ಎಂದರೆ ನಪುಂಸಕ. ಆದರೆ ಈ 'ಅಮ್ಮಣ್ಣಿ' ಎಂಬ ಶಬ್ದವು ಮಾಯಾರೂಪಿನದು. ಶಾಮಣ್ಣ, ರಾಮಣ್ಣ, ಕಾಮಣ್ಣ ಎಂಬಂತೆ ಪುಲ್ಲಿಂಗವನ್ನು ಸೂಚಿಸುವುದು. ಆಸಾಮಿಯನ್ನು ನೋಡಿದರೆ ಸ್ತ್ರೀಯಂತೆ ತೋರುವುದು. ಈ ಮಾಯಾ ನಾಮಧೇಯವುಳ್ಳ, ಮಲಶೀಮೆಯಲ್ಲಿ ಹುಟ್ಟಿ ಬೆಳೆದ, ನನ್ನ ಪರಿಚಯಕ್ಕೆ ಬಂದ ಕನ್ಯಾರತ್ನ ಒಂದರ ಸೂಕ್ಷ್ಮ ಪರಿಚಯವಿದು.

ಅಮ್ಮಣ್ಣಿನ ಮುಖ ಅವಳೇ ಹೇಳುವಂತೆ, ಕಾವಲಿ ಮೇಲೆ ದೋಸೆ ಬಿಟ್ಟ ಹಾಗೆ ದುಂಡಗಿತ್ತು. ಅಲ್ಲಲ್ಲೆ ಕಲ್ಲುಮುಳ್ಳು ಹುಯ್ದ ಕಳೆ. ಅಮ್ಮಣ್ಣಿ ಹುಡುಗಿ ಆಗಿದ್ದಾಗ, ಸ್ಕೂಲು ಇನ್ಸ್‌ಪೆಕ್ಟರು 'ನಿನ್ನ ಮೂಗು ಬಲ್ಚೆನ್ನು' ಎಂದಿದ್ದರಂತೆ. ಅಂದಿನಿಂದ ಮೂಗನ್ನೇ ನೋಡಿ ನೋಡಿ ಅವಳಿಗೆ ಮೆಳ್ಳಗಣ್ಣಾಗಿತ್ತು.

ಮುಖದಲ್ಲಿ ಮುಖ್ಯವಾದ ಮತ್ತಿತರ ಅಂಗಗಳೆಲ್ಲವೂ ಇದ್ದುವು. ಉದಾ: ಬಾಯಿ, ಕಿವಿ, ಕೆನ್ನೆ, ಇತ್ಯಾದಿ. ಆದರೆ ಅವೆಲ್ಲವೂ ಮನುಷ್ಯರಿಗೆಲ್ಲಾ ಇದ್ದಂತೆಯೇ ಇದ್ದುವು.

ಆದರೆ ತಲೆಯ ವಿಚಾರದಲ್ಲಿ ಸ್ವಲ್ಪ ಹೇಳಬೇಕಾಗಿದೆ. ಬೈತಲೆಯು ಮುಗಿದ ಸ್ಥಳದಿಂದ ಹಿಂದುಗಡೆ ಕತ್ತಿನ ತನಕ ಎಲ್ಲರಿಗೂ ಸಾಮಾನ್ಯವಾಗಿ ವರ್ತುಳಾಕಾರವಾದ ತಲೆಯಿರುತ್ತದೆ. ಆದರೆ ಅಮ್ಮಣ್ಣಿನಿಗೆ ಒಂದೇ ಸಮನಾದ ಅಮುಕಿದಂತಹ ತಲೆಯಿದ್ದಿತು. ಒಂದು ಪಾರ್ಶ್ವದಿಂದ ಆಕೆಯನ್ನು ನೋಡಿದರೆ ಈ ಚಿತ್ರದಂತೆ ಕಾಣುತ್ತಿದ್ದಿತು.



ಮಿಕ್ಕ ದೇಹರಚನೆಯನ್ನು ಹೆಚ್ಚು ವರ್ಣಿಸುವ ಪ್ರಮೇಯವೇನೂ ಇಲ್ಲ. ತೋಳುಗಳಲ್ಲಿ ಒಂದು ಮೂಳೆಯಿತ್ತು; ಹಸ್ತದಲ್ಲಿ ಎರಡಿದ್ದುವು. ತೊಡೆ ಕಾಲುಗಳಲ್ಲಿಯೂ ಹಾಗೆಯೇ. ಮುಟ್ಟಿ ನೋಡಿದವನನ್ನು ಕೇಳಿದರೆ ಅಷ್ಟೇ, ಮತ್ತಾವ ಮಾಂಸಾದಿಗಳಾವುವೂ ಇಲ್ಲ ಎಂದು ಹೇಳುತ್ತಿದ್ದನು. ಅಮ್ಮಣ್ಣಿನ ಎತ್ತರದ ವಿಚಾರ ಹೇಳಲು ಅಸಾಧ್ಯ. ತಂದೆಯ ಮನೆಯ ಹಿತ್ತಲಿನಲ್ಲಿ ತುಂಬಾ ಅಗಸೇಮರಗಳಿದ್ದುವಂತೆ. ದ್ವಾದಶಿಗೆ ಅಗಸೇ ಸೊಪ್ಪನ್ನು ದೋಟಿ ಏಣಿಗಳ ಸಹಾಯವಿಲ್ಲದೆ ನೆಲದ ಮೇಲೆ ನಿಂತೇ ಕೊಯ್ಯುತ್ತಿದ್ದಳಂತೆ. ಇದನ್ನು ನಾನೇನೊ ನಂಬುವುದಿಲ್ಲ. ಆದರೆ ಅವಳನ್ನು ನೋಡಿದ ಮೇಲೆ ಹಾಗೆ ಅನುಮಾನ ಬರದೆ ಇರುವುದಿಲ್ಲ.

ಮೂರು ಲೋಕಗಳಲ್ಲಿಯೂ ಕುರುಡನೆಂದು ಪ್ರಸಿದ್ಧನಾಗಿರುವ ವಿಧಿಯು ಅಮ್ಮಣ್ಣಿನನ್ನು ನನಗೆ ನಾಲ್ಕು ಬಾರಿ ಭೇಟಿ ಮಾಡಿಸಿದನು. ಆ ಸಂದರ್ಭಗಳನ್ನು ಸೂಕ್ಷ್ಮವಾಗಿ ಹೇಳುತ್ತೇನೆ.

ಮೊದಲ ಸಾರಿ ಕಂಡಿದ್ದು ಅವಳ ಮದುವೆಯಲ್ಲಿ. ಅಮ್ಮಣ್ಣಿ ನಮ್ಮ ಜಾತಿ ಹುಡುಗಿ. ಅವಳನ್ನು ನನಗೆ ಧಾರೆ ಎರೆಯಬೇಕೆಂದು ಅವಳ ಅಪ್ಪನ ಅಭಿಲಾಷೆ. ನನ್ನ ನಕ್ಷತ್ರ ಅಷ್ಟು ಕೆಟ್ಟದ್ದಲ್ಲ. ನಾನು ತಪ್ಪಿಸಿಕೊಂಡು ಬದುಕಿಕೊಂಡೆ. ಆ ಮದುವೆ ಮಾತಾಡಿದ ಮೂರು ದಿನಗಳಲ್ಲಿಯೇ ನನ್ನ ಚಿಕ್ಕಮ್ಮ ಐದು ಜನ ಅನಾಥ ಹೆಣ್ಣುಮಕ್ಕಳನ್ನೂ ಮೂವತ್ತೈದು ವರ್ಷದ ಯುವಕ ಗಂಡನನ್ನೂ ಬಿಟ್ಟು ಕಣ್ಣು ಮುಚ್ಚಿಕೊಂಡಳು. ಆ ಸಾವಿನಿಂದ ನನಗೇನೊ ಬಹಳ ಅನುಕೂಲವೇ ಆಯಿತು. ಹತ್ತು ದಿನ ಸೂತಕವಿದ್ದರೂ ಪರವಾಗಿಲ್ಲ, ಅಪಶಕುನದ ನೆಪ ಹೇಳಿ ಈ ಅಮ್ಮಣ್ಣಿನ ಸಂಸಾರದಲ್ಲಿ ಸೂತ್ರ ಹಿಡಿಯುವುದನ್ನು ತಪ್ಪಿಸಿಕೊಂಡುದಾಯಿತು. 'ನೀನು ಮಾಡಿಕೊಳ್ಳದಿದ್ದರೆ ನಿಮ್ಮಪ್ಪ ಮಾಡಿಕೊಳ್ಳುತ್ತಾನೆ' ಎಂದು ಅಮ್ಮಣ್ಣಿನ ಅಪ್ಪ ಹಂಗಿಸಿ ಹೊರಟು ಹೋಗಿದ್ದರು.

ಅವಳ ಮದುವೆಯ ನಿಷ್ಕರ್ಷೆಯಾದಾಗ ಮತ್ತು ಮದುವೆಯಾದಾಗ, ನನ್ನನ್ನೂ ನಮ್ಮನೆಯವರನ್ನೂ ಬಲವಂತ ಮಾಡಿ ಮದುವೆಯ ಮನೆಗೆ ಕರೆದುಕೊಂಡು ಹೋದರು. ಅಮ್ಮಣ್ಣಿನ ತಂದೆಗೆ ನನ್ನ ಮೇಲೆ ಸೇಡು ತೀರಿಸಿಕೊಳ್ಳಲು ಇದೊಂದು ನೆಪ ಮತ್ತು ಮಾರ್ಗವಾಗಿತ್ತು.

ಮದುವೆಯ ಮನೆಯಲ್ಲಿ ಗಂಡನ್ನು ನೋಡಿದೆವು. ನಮ್ಮ ಹತ್ತಿರ ಜಂಭ ಮಾಡಿ ಹೇಳಿದ್ದ ಮಾತು ದಿಟವಾಗಿಯೂ ನಡೆದುಹೋಗಿತ್ತು. ವರನಿಗೆ ಎಲ್ಲಾ ಸಲಕರಣಗಳೂ ಸಕಾಲದಲ್ಲಿ ದೊರೆತಿದ್ದರೆ ನನ್ನ ವಯಸ್ಸಿನ ಮಗನು ಇರುವುದರಲ್ಲಿ ಏನೂ ಸಂದೇಹವಿರಲಿಲ್ಲ. ಆದರೆ ವರನ ಮೊದಲನೆಯ ಹೆಂಡತಿಯು ನಾಲ್ಕು ವರ್ಷ ಮನೆಗೆ ಬರಲಿಲ್ಲವಂತೆ. ನಂತರ ಎರಡು ಸಾರಿ ಮಗುವು ಆರು ತಿಂಗಳ ಗರ್ಭದಲ್ಲಿಯೇ ಮರಣಹೊಂದಿತಂತೆ. ಆಮೇಲೆ ಎರಡು ವರ್ಷ ಕಾಯಿಲೆಯಿಂದ ನರಳಿದಳಂತೆ. ಕಡೆಗೆ ಒಂದು ವರ್ಷ ಕ್ಷಯದಾಸ್ಪತ್ರೆಯಲ್ಲಿದ್ದಳಂತೆ. ಏನೊ ಎಂತೊ, ಅಂತೂ ವರನಿಗೆ ೩೭ ವರ್ಷ ಆಗಿದ್ದಾಗಲೂ ಆತನು ಪಿತೃತ್ವವನ್ನು ಪಡೆದಿರಲಿಲ್ಲ. ಈಗ ಅವನು ಅಮ್ಮಣ್ಣಿನಿಗೆ ಬಲಿಯಾಗಿದ್ದನು. ಆದರೆ ಯಾರು ಯಾರಿಗೆ ಬಲಿ ಎಂದು ಧೈರ್ಯವಾಗಿ ಹೇಳಲು ನನಗಾಗುವುದಿಲ್ಲ.

ಧಾರೆಯ ಹೊತ್ತಿಗೆ ವಧು-ವರರು ಇಬ್ಬರೂ ಒಬ್ಬರನ್ನೊಬ್ಬರು ನೋಡಿದರು; ಹತ್ತು ನಿಮಿಷದ ಮೇಲೆ ಹಸೆಯ ಮೇಲೆ ಕುಳಿತುಕೊಂಡರು. ವಧುವು ಸಂಪಿಗೆಹೂವನ್ನು ಮುಡಿದಿದ್ದಳಂತೆ. ಆ ಹೂವು ವರನಿಗೆ ಆಗದಂತೆ. ಅಂದರೆ, ಸಂಪಿಗೆಹೂವಿನ ವಾಸನೆ ಕಂಡರೆ ಒಂದು ಸಾವಿರಪ್ಪಾ

ಒಂದು ಲಕ್ಷವೊ ಸೀನು ಬರುತ್ತಿದ್ದಿತಂತೆ. ಅಂತೂ ಕುಳಿತ ಮೂರು ನಿಮಿಷದೊಳಗೆ ಕಣ್ಣು ಮೂಗುಗಳೆಲ್ಲಾ ನೀರು ತುಂಬಿಕೊಂಡುಬಿಟ್ಟುವು. ಆ ವೇಳೆಗೆ ವಧುವು 'ಹೊಗೆಯು ನನಗೆ ಪಿತ್ತ ಬರಿಸುತ್ತದೆ' ಎಂದು ಹೇಳಿ, ಎದುರಿಗಿದ್ದ ಅರಿಶಿನ ಕುಂಕುಮದ ತಟ್ಟೆಯ ತುಂಬಾ ವಾಂತಿಮಾಡಿಕೊಂಡಳು. ವಾಂತಿಯಲ್ಲೆಲ್ಲಾ ಬರಿಯ ಬಾಳೆಹಣ್ಣು! ವಧುವು ಧಾರೆಯಾಗುವ ತನಕ ಉಪವಾಸ ಇರಬೇಕಂತೆ. ಚಿಕ್ಕ ಹುಡುಗಿ; ಅವಳಿದ್ದ ಕೊಠಡಿಯಲ್ಲಿ ಬಾಳೆಗೊನೆಯು ಇತ್ತು. ಹೊಟ್ಟೆಮೀರಿ ತಿಂದಿದ್ದಳು. ಬಾಯಿಮೀರಿ ನುಂಗಿದ್ದಳು. ಆ ಹೊಗೆಯ ಕಾಟ, ಗಂಡನ ನೋಟ ತಡೆಯಲಾರದೆ ವಾಂತಿ ಮಾಡಿಕೊಂಡಳು.

ನನಗೇನೊ ಹಿಡಿಸದಷ್ಟು ಸಂತೋಷ. ನನಗೆ ಈ ತಾಪತ್ರಯವೆಲ್ಲಾ ತಪ್ಪಿದುವಲ್ಲಾ ಎಂದು.

* * * * *

ಎರಡನೆಯ ಸಾರಿ ಅಮ್ಮಣ್ಣನನ್ನು ಕಂಡಾಗ ಅವಳು ಮೂರು ಮಕ್ಕಳ ತಾಯಿಯಾಗಿದ್ದಳು. ಬೇಜಾರಾಗಿದ್ದಾಗ ಒಂದು ಸಾಯಂಕಾಲ ಸ್ಟೇಷನ್ನಿಗೆ ಒಂದು ಪತ್ರಿಕೆಯನ್ನು ತರೋಣವೆಂದು ಹೋಗಿದ್ದೆ. ಆಗ ಮದ್ರಾಸ್ ರೈಲು ಹೋಗುವ ಗಲಭೆ. ಯಾರೊ ಒಬ್ಬ ಹೆಂಗಸು ಒಂದು ಮಗುವನ್ನು ಸೊಂಟದಲ್ಲಿ ಎತ್ತಿಕೊಂಡು ಅದೇ ಕೈಯಲ್ಲಿ ಒಂದು ಮಗುವನ್ನು ನಡೆಸಿಕೊಂಡು ಬಲಗಡೆ ಬರುತ್ತಿದ್ದ ಮಗುವನ್ನು 'ಲೇ ಲಕ್ಕೂ ಎಲ್ಲೋ ಹಾಳಾಗಿ ಹೋಗ್ತೀಯಲ್ಲೇ! ಇಲ್ಲೇ ಬಾರೆ' ಎಂದು ಪ್ರೀತಿಯಿಂದ ಬೈಯುತ್ತ ಬರುತ್ತಿದ್ದಳು. ನನ್ನ ಪಕ್ಕದಲ್ಲಿಯೆ ಸಾರಿ ಹೋಗಿ ರೈಲಿನಲ್ಲಿ ಕುಳಿತುಕೊಂಡಳು. ಅಕ್ಕಪಕ್ಕದವರೆಲ್ಲಾ ಹೆದರಿಕೊಂಡು ಸರಿದು ಕುಳಿತುಕೊಂಡರು. ಮಕ್ಕಳು ಕಿಟ್ಟೆಂದು ಕಿರಿಚಿ ಅಳಲಾರಂಭಿಸಿದುವು. ನನಗೆ ಆಕೆಯನ್ನು ಎಲ್ಲೋ ನೋಡಿದ ಜ್ಞಾಪಕ. ನೆನಪು ಮಾಡಿಕೊಳ್ಳಹತ್ತಿದೆ. ಅಷ್ಟರಲ್ಲಿ ಆ ದೊಡ್ಡಮಗನು 'ಅಮ್ಮಾ ಅಮ್ಮಾ ರೈಲು ಯಾವಾಗ ಹೊರಡುತ್ತೆ?' ಎಂದು ಕೂಗಿದ. ಆಗ ಜ್ಞಾಪಕ ಬಂತು—'ಅಮ್ಮಣ್ಣಾ!'

ಹಾಗೆಯೇ ಯೋಚಿಸಿದೆ. ಇನ್ನೂ ಮದುವೆಯಾಗಿ ನಾಲ್ಕು ವರ್ಷ ಆಗಿರಲಿಲ್ಲ. ಅವಳ ಗಂಡನಿಗೆ ಕೋಲಾರದ ಗಣಿಯ ಹತ್ತಿರ ಕೆಲಸವೆಂದು ಹೇಳುತ್ತಿದ್ದರು. ಅಷ್ಟೋನೂ ಅನುಕೂಲಸ್ಥನಾಗಿರಲಿಲ್ಲವೆಂದು ಕೇಳಿದ್ದೆ. ಅಂತೂ ಅವನೂ ಹೆಂಡಿರು ಮಕ್ಕಳೊಡನೆ ಹೇಗೋ ಸಂಸಾರ ನಡೆಸುತ್ತಿದ್ದನು. ಆ ಮೂರು ಮಕ್ಕಳನ್ನೂ ನೋಡಿದಾಗ ನನ್ನ ಸಂತೋಷಕ್ಕೆ ಎಲ್ಲೆಯಿಲ್ಲದಂತಾಯಿತು. ಏಕೆಂದರೆ ಅವುಗಳ ಸಾಕುವಿಕೆಯೂ ತಂದೆತನವೂ ನನಗೆ ದೇವರ ದಯೆಯೆಂದು ತಪ್ಪಿದ್ದುವು. ಆ ಸ್ವತಂತ್ರದ ಹಿಗ್ಗುವಿಕೆಯು ಹೇಳಲಸಾಧ್ಯ!

* * * * *

ಮೂರನೆಯ ಸಾರಿ ಅಮ್ಮಣ್ಣನನ್ನು ಕಂಡದ್ದು ನನಗೆ ಮದುವೆಯಾಗಿ ಮಕ್ಕಳಾಗಿ ಮೊದಲ ಮಗಳ ಮದುವೆಗೆಂದು ಓಡಾಡುತ್ತಿದ್ದಾಗ. ಒಂದು ಮಧ್ಯಾಹ್ನ ಸ್ನೇಹಿತನೊಬ್ಬರು ಕಛೇರಿಗೆ ಬಂದು "ಗಣಿಯ ಹತ್ತಿರ ನನ್ನ ಸ್ನೇಹಿತರೊಬ್ಬರಿದ್ದಾರೆ. ಅವರ ಮಗನಿಗೆ ಇಪ್ಪತ್ತು ವರ್ಷ. ಬಿ.ಎ. ಕ್ಲಾಸಿನಲ್ಲಿ ಓದುತ್ತಿದ್ದಾನೆ. ತಕ್ಕಮಟ್ಟಿಗೆ ಉಣ್ಣಲಿಕ್ಕೆ ತಿನ್ನಲಿಕ್ಕೆ ಇದೆ. ನೀವು ಹೋಗಿ ನೋಡಿಕೊಂಡು ಬನ್ನಿ" ಎಂದು

ಹೇಳಿದರು. ಶುಭಸ್ಯ ಶೀಘ್ರಂ ಎಂದು ಮರುದಿನವೇ ಎಲ್ಲಾ ಸಲಕರಣೆಗಳನ್ನು ಒದಗಿಸಿಕೊಂಡು ಗಣಿಗೆ ಹೊರಟೆ. ರಾತ್ರಿಯ ಹೊತ್ತಿಗೆ ರೈಲು ಗಣಿಯ ಹತ್ತಿರಕ್ಕೆ ಹೋಯಿತು. ಅಲ್ಲೇ ರಾತ್ರಿ ಮಲಗಿದ್ದು, ಬೆಳಗಿನ ಝಾವ ನಾನು ಹೋಗಬೇಕಾದ ಹಳ್ಳಿಯ ಕಡೆಗೆ ಹೊರಟೆ. ಅಲ್ಲಿಗೆ ಸುಮಾರು ಎರಡು ಮೈಲಿ ದೂರವಿತ್ತು.

ಬೆಳಿಗ್ಗೆ ಸುಮಾರು ಆರುಗಂಟೆಯ ಹೊತ್ತಿಗೆ ಹಳ್ಳಿಯನ್ನು ಸೇರಿದೆ. ಊರ ಸೇರುವ ಮುಂಚೆಯೇ ಒಂದು ವಿತಂತುವಿನ ದರ್ಶನವಾಯಿತು. ಈ ಹಾಳು ಮುಖ ಏಕೆ ಕಂಡೆನಪ್ಪಾ ಬೆಳಗಾಗ! ಎಂದು ಮನಸ್ಸಿನಲ್ಲಿಯೇ ಅಂದುಕೊಂಡೆ. ಆ ಹೊತ್ತಿಗೆ ಆಕೆ ಇನ್ನೂ ಹತ್ತಿರ ಬಂದಳು. ಎಲ್ಲಿಯೋ ನೋಡಿದ ಮುಖ. ಆದರೆ ನೆನಪಾಗಲಿಲ್ಲ. ಮುಂದಕ್ಕೆ ನಡೆದು ಹೋಗಿ ವಿಚಾರಿಸುತ್ತಾ ನಮ್ಮ ಭಾವೀ ಬೀಗರ ಮನೆಗೆ ಹೋದೆ. ಅಲ್ಲಿ ಬೀಗರೊಡನೆ ನಾನು ಹೋದಕಾರ್ಯದ ವಿಚಾರವೆಲ್ಲಾ ಮಾತನಾಡಿದೆ. ಅಲ್ಲಿಯೇ ಊಟಕ್ಕೆ ಎಬ್ಬಿಸಿದರು. ಸಾಯಂಕಾಲದ ತನಕ ಬೇರೆ ರೈಲು ಇಲ್ಲದ್ದರಿಂದ ಒಪ್ಪಿಕೊಂಡೆ. ಊಟವಾದ ಮೇಲೆ ಹಾಗೆಯೇ ಮಾತನಾಡುತ್ತಿದ್ದಾಗ ಅವರಿದ್ದ ಮನೆಯ ಮಾತು ಬಂತು. 'ಈ ಹಳ್ಳಿಯಲ್ಲಿ ಕೂಡ ಇಷ್ಟು ಅನುಕೂಲವಾಗಿ ಮನೆಯನ್ನು ಕಟ್ಟಿಕೊಂಡಿರುವಿರಲ್ಲಾ, ಇದಕ್ಕೆ ಬಹಳ ಖರ್ಚಾಯಿತೇನೊ!' ಎಂದೆ. 'ಇದು ನಮ್ಮ ಮನೆಯಲ್ಲಾ, ನಾವು ಬಾಡಿಗೆಗೆ ಇದ್ದೇವೆ. ಅಮ್ಮಣ್ಣಮ್ಮಾ ಎಂಬುವರದು ಈ ಮನೆ. ಅವರ ಯಜಮಾನರು ತೀರಿಕೊಂಡು ಆಗಲೇ ಹತ್ತು ಹನ್ನೆರಡು ವರ್ಷಗಳಾದುವು. ಅವರು ಹೊಟ್ಟೆ ಕಟ್ಟಿ ಬಟ್ಟೆ ಕಟ್ಟಿ ಈ ಮನೆ ಕಟ್ಟಿಸಿದ್ದರು. ಆದರೆ ಇದನ್ನು ಅನುಭವಿಸುವ ಪುಣ್ಯ ಅವರಿಗಿರಲಿಲ್ಲ. ಅಮ್ಮಣ್ಣನವರು ಈ ಮನೆಯ ಒಂದು ಕೊಠಡಿ ಯಲ್ಲಿದ್ದುಕೊಂಡು, ಮಿಕ್ಕ ಮನೆಯನ್ನು ನಮಗೆ ಬಾಡಿಗೆಗೆ ಕೊಟ್ಟು, ಬಂದ ಹಣದಲ್ಲಿ ಹುಡುಗರನ್ನು ಸಾಕಿ ವಿದ್ಯಾಭ್ಯಾಸ ಮಾಡಿಸುತ್ತಿದ್ದಾರೆ' ಎಂದು ಹೇಳಿದರು.

ನನಗೇಕೊ ಅನುಮಾನ ಹೆಚ್ಚಾಯಿತು. ಆದರೆ ಅವರನ್ನು ಹೇಗೆ ಕೇಳಲಿ, 'ಅಮ್ಮಣ್ಣಿ ಯಾರು? ನಾನು ಮದುವೆಯಾಗಬೇಕಾಗಿದ್ದ ಹುಡುಗೀನೆ?' ಎಂದು. ಸುಮ್ಮನಿದ್ದು ಸಾಯಂಕಾಲ ಬೀಗರನ್ನು ಬೀಳ್ಕೊಂಡು ರೈಲಿನ ಕಡೆಗೆ ಹೊರಟೆ. ಹೋಗುವಾಗ ಬೀಗರಾಗಬೇಕಾಗಿದ್ದವರು 'ನಮ್ಮ ಹುಡುಗ ಒಪ್ಪಿದರೆ ನಮ್ಮ ಅಭ್ಯಂತರವೇನೂ ಇಲ್ಲ' ಎಂದರು. ಊರಿನಲ್ಲೇ ಹುಡುಗನನ್ನು ಕೇಳಿದ್ದೆ. 'ನಾನು ಮದುವೆ ಮಾಡಿಕೊಳ್ಳುವುದಿಲ್ಲ' ಎಂದು ಹೇಳಿದ್ದ. ಬಂದ ದಾರಿಗೆ ಸುಂಕವಿಲ್ಲ ಎಂದು ಹಿಂತಿರುಗಿದೆ. ಬರುವ ಗಡಿಬಿಡಿಯಲ್ಲಿ ಛತ್ರಿಯನ್ನು ಮರೆತಿದ್ದೆ. ತರಲು ಮನೆಯೊಳಕ್ಕೆ ಹೋದಾಗ ಮರಳಿ ಕಂಡೆ, ಬೆಳಗಾಗ ಕಂಡ ವಿತಂತುವನ್ನು. ಆಕೆಯದೆ ಮನೆ! ಅವಳೇ ಅಮ್ಮಣ್ಣಿ!

ರೈಲಿಗೆ ಬರುತ್ತಾ ಬರುತ್ತಾ ಯೋಚನೆ ಮಾಡಿದೆ. ಇವಳನ್ನು ಮದುವೆಯಾಗಲಿಲ್ಲವಲ್ಲಾ ಎಂದು ದುಃಖವಾಗಲಾರಂಭಿಸಿತು. ಇವಳನ್ನು ಮದುವೆಯಾಗಿದ್ದರೆ—ಇವಳಿಗೆ ವೈಧವ್ಯ ಪ್ರಾಪ್ತಿಯಾಗಿದ್ದರೆ —ನನಗೆ ಮಗಳ ಮದುವೆಯ ಗಲಾಟೆ ಇರುತ್ತಿದ್ದಿಲ್ಲವಲ್ಲಾ! ಈ ಸುಯೋಗವನ್ನು ಅರಿಯದೇ ಕಳೆದುಕೊಂಡೆನಲ್ಲಾ ಎಂದು ಖಿನ್ನಮನಸ್ಕನಾಗಿ ಹಿಂತಿರುಗಿದೆ.

* * * * *

ಮೊನ್ನೆ ಮೊನ್ನೆ ಮೈಸೂರಿನಿಂದ ನನ್ನ ದಾಯಾದಿಗಳೊಬ್ಬರು ಬಂದಿದ್ದರು. ಮನೆಯಲ್ಲಿ ಊಟವಾದ ಮೇಲೆ ನನ್ನ ಮಗಳ ಮದುವೆಯ ಮಾತು ಆರಂಭವಾಯಿತು. ವರಗಳಾವುದಾದರೂ ಇದ್ದರೆ ಹೇಳಿರಿ ಎಂದೆ. ನಮ್ಮೂರಿನಲ್ಲಿಯೇ ರಾಮಚಂದ್ರನೆಂಬ ವರನಿದ್ದಾನೆಂದೂ ಅವನು ಬಹಳ ಬುದ್ಧಿಶಾಲಿಯೆಂದೂ ಆ ಸಾರಿ ಐ.ಸಿ.ಎಸ್. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದನೆಂದೂ ಬಹಳ ವಿನಯವಂತನೆಂದೂ ಹೇಳಿದರು. ಅಲ್ಲದೆ ಅವನು ಮಾಡರ್ನ ಹೊಟೇಲಿನಲ್ಲಿರುವನೆಂದೂ ಬೇಕಾದರೆ ನನ್ನನ್ನು ಅವನಲ್ಲಿಗೆ ಕರೆದುಕೊಂಡು ಹೋಗುವರೆಂದೂ ಹೇಳಿದರು.

ಸರಿ, ಮಾಡರ್ನ ಹೊಟೇಲಿಗೆ ಮರುಕ್ಷಣದಲ್ಲಿಯೇ ಹೊರಟೆವು. ಆ ಹುಡುಗನೂ ಅಲ್ಲಿಯೇ ಇದ್ದ. ಬಹಳ ಮರ್ಯಾದೆಯಿಂದ ನಮ್ಮಿಬ್ಬರನ್ನೂ ಬರಮಾಡಿಕೊಂಡ. ನಾವು ಬಂದ ಕೆಲಸವನ್ನು ಅವನಿಗೆ ಹೇಳಿದೆವು. ಆಗ ಅವನು ಹೇಳಿದ 'ಸ್ವಾಮೀ, ಚಿಕ್ಕ ಹುಡುಗನಾಗಿದ್ದಾಗ ನಮ್ಮ ತಂದೆಯು ತೀರಿಹೋದರು. ಆಗಿನ್ನೂ ನಮ್ಮ ತಾಯಿಗೆ ೨೩-೨೪ ವರ್ಷವಾಗಿತ್ತು. ನನ್ನನ್ನೂ ನನ್ನ ತಂಗಿಯರಿಬ್ಬರನ್ನೂ ಮುಂದಕ್ಕೆ ತಂದವರೆಂದರೆ ನನ್ನ ತಾಯಿ. ನಮ್ಮ ಓದುಗಾರಿಕೆಗೆ ನಮ್ಮ ಖರ್ಚಿಗೆ ನಮ್ಮ ಸುಖಕ್ಕಾಗಿ ಅವರು ಪಟ್ಟಿರುವ ಕಷ್ಟಗಳನ್ನು ನಾನು ಇಷ್ಟೆಂದು ಹೇಳಲಾಗುವುದಿಲ್ಲ. ನನ್ನ ಮದುವೆಯು ನನಗಿಂತಲೂ ಹೆಚ್ಚಾಗಿ ಅವರಿಗೆ ಸುಖದಾಯಕವಾದುದು. ಅವರು ಒಪ್ಪಿದರೆ ನನ್ನದೇನೂ ಅಭ್ಯಂತರವಿಲ್ಲ. ನಿಮ್ಮನ್ನು ಹಿಂತಿರುಗಿ ಕಳುಹಿಸಲು ಇದೊಂದು ನೆಪವೆಂದು ತಿಳಿಯ ಬೇಡಿ. ನಾಳೆಯ ದಿನ ನಾನು ಊರಿಗೆ ಹೋಗಬೇಕೆಂದಿದ್ದೇನೆ. ನೀವೂ ನನ್ನ ಜತೆಯಲ್ಲಿ ಬಂದು ನಮ್ಮ ತಾಯಿಯನ್ನು ಮಾತನಾಡಿಸಿಕೊಂಡು ಬನ್ನಿ' ಎಂದು.

ಹಾಗೆಯೇ ಆಗಲೆಂದು ಒಪ್ಪಿ, ಮರುದಿನ ಅವನ ಜತೆಯಲ್ಲಿ ನಾವಿಬ್ಬರೂ ನಮ್ಮಾಕೆಯನ್ನು ಕರೆದುಕೊಂಡು ಹೊರಟೆವು. ನೆಟ್ಟಗೆ ಗಣೆಯ ಹತ್ತಿರ ಹೋದೆವು. ಅಲ್ಲಿಂದ ನಾನು ಮೊದಲು ವರಾನ್ವೇಷಕ್ಕೆ ಹೋಗಿದ್ದ ಹಳ್ಳಿಗೇ ಹೊರಟೆವು. ಕಡೆಗೆ ರಾಮಚಂದ್ರನು ನಾನು ಮೊದಲ ಬಾರಿ ಹೋದ ಮನೆಗೇ ಕರೆದುಕೊಂಡು ಹೋದನು. ಅಲ್ಲಿ ನಮ್ಮನ್ನು ಹಜಾರದಲ್ಲಿ ಕುಳ್ಳಿರಿಸಿ ಒಳಗೆ ಹೋಗಿ ತಾಯಿಯೊಡನೆ ಮಾತನಾಡುತ್ತಿದ್ದು, ಸ್ವಲ್ಪ ಹೊತ್ತಿಗೆ ಹೊರಗೆ ಬಂದು, ನಮ್ಮ ತಾಯಿಯವರು ಇವರೇ ಎಂದು ತಾಯಿಯನ್ನು ತೋರಿಸಿ, ನಮ್ಮಾಕೆಯ ಪರಿಚಯ ಮಾಡಿಸಿದನು.

ಅವನ ತಾಯಿ ಯಾರೆನ್ನುತ್ತೀರಿ? ಸರಿ, ನಾನು ಹೇಳಬೇಕೆ?

ಅಮ್ಮಣ್ಣಿನು ನಮ್ಮಾಕೆಯನ್ನು ಒಳಕ್ಕೆ ಕರೆದುಕೊಂಡು ಹೋಗಿ ಬಹಳ ಹೊತ್ತು ಮಾತನಾಡುತ್ತಿದ್ದರು. ಮಧ್ಯಾಹ್ನ ನಮಗೆಲ್ಲಾ ಅಲ್ಲೇ ಊಟ. ಸಾಯಂಕಾಲ ಹಿಂತಿರುಗಿದೆವು. ಆ ವೇಳೆಗೆ ಅಮ್ಮಣ್ಣಿನು ಮದುವೆಗೆ ಒಪ್ಪಿಗೆಯನ್ನಿತ್ತಿದ್ದಳು. ಆದರೆ ಹುಡುಗ ಹುಡುಗಿಯನ್ನು ನೋಡಿ ಒಪ್ಪಿದರೆ ಸಾಕು ಎಂದು ಹೇಳಿದ್ದಳು.

ನನ್ನ ದಾಯಾದಿಗೆ ಬಹಳ ಸಂತೋಷ. ಇಂತಹ ಅಣಿಯಾದ ವರನು ನಮ್ಮ ಹುಡುಗಿಗೆ ದೊರಕಿದನಲ್ಲಾ ಎಂದು. ಹಿಂತಿರುಗಿ ಬರುತ್ತಾ ನಮ್ಮಾಕೆಯು ಅಮ್ಮಣ್ಣಿ ಹೇಳಿದ್ದನ್ನೆಲ್ಲಾ ಹೇಳಿದಳು. ನಾನು ಯಾರೆಂಬುದನ್ನು ನಮ್ಮಾಕೆಯು ಹೇಳುತ್ತಲೂ ಅಮ್ಮಣ್ಣಿ ಬಹಳ ಸಂತೋಷಪಟ್ಟು 'ಅವರ ಸಂಬಂಧ ನಮ್ಮ ಹುಡುಗನಿಗೆ ಆಗುವುದು ನನಗೆ ಬಹಳ ಸಂತೋಷ' ಎಂದಳಂತೆ. ನಮ್ಮಾಕೆಯು ಅಮ್ಮಣ್ಣಿನ ಗುಣಕಥನವನ್ನೂ, ನನ್ನ ದಾಯಾದಿಯು ರಾಮಚಂದ್ರನ ಗುಣಕಥನವನ್ನೂ ಮಾಡಿದುದನ್ನು

ಕೇಳಿ ದಿಟವಾಗಿಯೂ ನನಗೆ ಹಿಡಿಸಲಾರದಷ್ಟು ದುಃಖವಾಯಿತು. ಯಾಕೆನ್ನುತ್ತೀರಿ? ನೀವೇ ನೋಡಿ. ಅಮ್ಮಣ್ಣನನ್ನು ಮದುವೆಯಾಗಿ ನನಗೂ ಈ ತರಹ ಸುಪುತ್ರನೊಬ್ಬನಿದ್ದು, ನನ್ನನ್ನೂ ಜನರು ಹೊಗಳುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು. ಅದನ್ನೆಲ್ಲಾ ಕಳೆದುಕೊಂಡು ಅಮ್ಮಣ್ಣನನ್ನು ಮದುವೆ ಮಾಡಿಕೊಳ್ಳಲಿಲ್ಲವಲ್ಲಾ ಎಂದು ಹಂಬಲಿಸುತ್ತ ಹಿಂತಿರುಗಿದೆ.

ಮುಂದಿನ ವಿಚಾರ ಏನೂ ಇಲ್ಲ. ನಮ್ಮ ಹುಡುಗಿ, ಅಮ್ಮಣ್ಣನ ಮಗ ಇವರದು ಆದರೆ ಅದೇ ಬೇರೆ ಕತೆಯಾಯ್ತಲ್ಲ......



# ಚೆಲುವನ ಚೆನ್ನ

ನಮ್ಮೂರಿನಲ್ಲಿ ಚೆಲುವನ ಹೆಸರನ್ನು ಕೇಳದೆ ಇದ್ದ ಹುಡುಗರೇ ಇಲ್ಲ. ಅವನು ಹುಡುಗರಿಗೆಲ್ಲಾ ಅಷ್ಟು ಬೇಕಾದವನಾಗಿದ್ದನು. ಅವನು ಡೊಂಬರವನು. ತನ್ನ ಹೆಂಡತಿ ಮಕ್ಕಳೊಡನೆ ಊರಿನ ಚೌಕಿಗಳಲ್ಲೆಲ್ಲಾ ಗಣೆಕಟ್ಟಿ ಆಟವಾಡಿ ಹೊಟ್ಟೆಹೊರೆದುಕೊಳ್ಳುತ್ತಿದ್ದನು. ಅವನ ಮಗನೇ ಚೆನ್ನ. ಚೆನ್ನನಿಗೆ ಆರು ವರ್ಷ ಆಗಿರಬಹುದು. ಆ ಗಣೆಯ ಮೇಲೇರಿ ಹೊಟ್ಟೆಯ ಮೇಲೆ ಮಲಗಿಕೊಂಡು ಸರ್ರನೆ ತಿರುಗುತ್ತಿದ್ದನು. ನಮಗೆಲ್ಲಾ ಅವನನ್ನು ನೋಡಿದರೆ ನಾವೂ ಅವನಂತೆ ಈ ಆಟಪಾಟಗಳನ್ನಾಡಲು ಕಲಿತರೆ ಬಲು ಚೆನ್ನು ಎನಿಸುತ್ತಿದ್ದಿತು. ಕೆಲವು ವರ್ಷಗಳಲ್ಲೇ ಈ ಚೆನ್ನನು ಬಲು ವಿಧವಾದ ಚಮತ್ಕಾರದ ಐಂದ್ರಜಾಲಿಕ ಆಟಗಳನ್ನು ಕಲಿತುಕೊಂಡನು. ಇಸ್ಪೀಟುಗಳ ಎಲೆಗಳನ್ನು ಹರಿದು ಬೇಕಾದ ಎಲೆಯು ತೆಂಗಿನ ಮರದಿಂದ ಬರುವಂತೆ ಮಾಡುವುದು. ಹುಡುಗಿಯನ್ನು ಬುಟ್ಟಿಯಲ್ಲಿಟ್ಟು, ಮುಚ್ಚಳವನ್ನು ಮುಚ್ಚಿ ಕತ್ತಿಯಿಂದ ಆ ಬುಟ್ಟಿಯನ್ನು ತಿವಿಯುವುದು; ಸ್ವಲ್ಪ ಹೊತ್ತಿನ ಮೇಲೆ ಜನಸಂದಣಿಯಿಂದ ಆ ಹುಡುಗಿಯು 'ಓ ಚೆನ್ನ ಬಂದೇ ಬಂದೇ' ಎಂದು ಕೂಗಿಕೊಂಡು ಇವನ ಬಳಿ ಬರುವುದು. ಇತ್ಯಾದಿಯಾಗಿ ಆ ವಿದ್ಯೆಗಳಲ್ಲಿ ಅಸಾಧಾರಣ ಪಾಂಡಿತ್ಯವನ್ನು ಪಡೆದನು. ಇವೆಲ್ಲಾ ಹುಡುಗನಾಗಿದ್ದಾಗ ನಾನು ನೋಡಿದುದಾದ್ದರಿಂದ ಅಚ್ಚಳಿಯದಂತೆ ನೆನಪು ನಿಂತಿದೆ.

*     *     *     *     *

ಸಂಕ್ರಾಂತಿಯ ಹಿಂದಿನ ದಿನ ಸಂತೆಗೆ ಹೋಗಿದ್ದೆ. ಅಲ್ಲಿ ಕಬ್ಬಿನ ಜಲ್ಲೆಗಳನ್ನೂ ಮಿಕ್ಕ ಸಾಮಾನುಗಳನ್ನೂ ಕೊಂಡುಕೊಂಡು ಬೇಗ ಮನೆಗೆ ಸರಸರನೆ ನಡೆಯಲಾರಂಭಿಸಿದ್ದೆ. ಕಂಕುಳಲ್ಲಿ ಕಬ್ಬಿನ ಜಲ್ಲೆ; ಕೈಯಲ್ಲಿ ಸಾಮಾನುಗಂಟು; ಮನಸ್ಸಿನಲ್ಲಿ ಮನೆಯಲ್ಲಿರುವ ಆರು ಮಕ್ಕಳ ಗೊಂದಲ. ಮೂರನ್ನೂ ಹೊತ್ತುಕೊಂಡು ವೇಗವಾಗಿ ನಡೆಯಲಾರಂಭಿಸಿದ್ದೆ. ಸಂತೆಯ ಸಂದಣಿಯು ಬಹುವಾಗಿದ್ದುದರಿಂದ ಬಹಳ ಬೇಗ ನಡೆಯಲು ಅಡಚಣೆಯಾಗಿತ್ತು. ಆದರೂ ಕಷ್ಟಪಟ್ಟು ಮುನ್ನುಗ್ಗುತ್ತಿದ್ದೆ. ಸ್ವಲ್ಪ ದೂರ ಹೋಗುವುದರೊಳಗೇ ಯಾರೋ ಒಬ್ಬರು ಹಸುವೊಂದನ್ನು ಹೊಡೆದರು. ಅದು ನನ್ನ ಬಳಿಗೇ ಬರುವಂತೆ ತೋರಿತು. ನಾನೂ ಹಿಂದೆಮುಂದೆ ನೋಡದೆ ಹಿಂದಕ್ಕೆ ಸರಿದೆ. ತಕ್ಷಣ ಯಾರೊ 'ಅಯ್ಯೊ!' ಎಂದಂತಾಯಿತು. ಹಿಂತಿರುಗಿದರೆ ಯಾರ ಕಣ್ಣಿಗೊ ನನ್ನ ಜಲ್ಲೆಯು ತಗುಲಿತ್ತು. ಆತನು ಕಣ್ಣುಗಳಿಗೆ ತನ್ನ ವಸ್ತ್ರವನ್ನು ಒತ್ತಿದ್ದನು. ವಸ್ತ್ರವೆಲ್ಲಾ ರಕ್ತಮಯವಾಗಿತ್ತು. ಅವನ ಬಾಯೆಲ್ಲಾ ಶಾಪಮಯವಾಗಿತ್ತು. ಆ ವೇಳೆಗೆ ಎದುರು ಬಂದಿದ್ದ ಹಸುವೂ ಇನ್ನೆಲ್ಲೋ ಮಾಯವಾಗಿತ್ತು. 'ಅಯ್ಯಾ, ನನ್ನ ಅಪರಾಧ, ಹಸುವಿಗೆ ಬೆದರಿ ನಿನ್ನ ಇರುವಿಕೆಯನ್ನು ಕಾಣದೆ

ಹಿಂದೆ ಸರಿದೆ. ಬಹಳ ಪೆಟ್ಟಾಯಿತೇ?' ಎಂದೆ. 'ಏನ್ರೀ, ಹೀಗೆ ಕೇಳುತ್ತೀರಿ! ನಾಚಿಕೆಯಾಗುವುದಿಲ್ಲವೆ? ಧಾಂಡಿಗರಾಗಿದ್ದುಕೊಂಡು ಆ ಕಂಚಿ ಹಸುವಿಗೆ ಹೆದರಿದೆ ಎಂದು ಹೇಳುತ್ತೀರಿ? ನನ್ನ ಕಣ್ಣು ಹಾಳುಮಾಡಿದಿರಲ್ಲ! ಆಗಲಿ, ನಿಮಗೆ ಇಷ್ಟರಲ್ಲೇ ನನ್ನ ಪರಿಚಯ ಮಾಡಿಸಿ ಕೊಡುತ್ತೇನೆ. ಹಾಗೆಯೇ ನನ್ನ ಲಾಯರ ಪರಿಚಯವನ್ನೂ ಮಾಡಿಸಿಕೊಡುತ್ತೇನೆ' ಎಂದು ರೇಗುತ್ತ ಹೇಳಿದ. ಆ ವೇಳೆಗೆ ಇನ್ನೊಬ್ಬ ಆಗಂತುಕನು ಹತ್ತಿರ ಬಂದ. ಬಂದವನೇ ನನ್ನನ್ನು ಛುಡಾಯಿಸಲು ಶುರು ಮಾಡಿದ. 'ಅಲ್ರೀ, ಜ್ಞಾನ ಇಲ್ಲವೇನ್ರೀ ನಿಮಗೆ? ಸಂತೆಬೀದಿಯಲ್ಲಿ ಹಿಂದೆ ಮುಂದೆ ನೋಡದೆ ನುಗ್ಗುತ್ತೀರಲ್ಲ. ಪಾಪ! ದೇವರೇ ಎಂದು ಆತ ಬರುತ್ತಿದ್ದರೆ ಅವನ ಕಣ್ಣನ್ನೇ ಇಂಗಿಸತೊಡಗಿದ್ದಿರಲ್ಲ. ನಿಮಗೆಲ್ಲಾ ನ್ಯಾಯಸ್ಥಾನದಲ್ಲಿ ಚೆನ್ನಾಗಿ ಶಿಕ್ಷೆಯಾಗಬೇಕ್ರೀ' ಎಂದ. ಆ ಮೇಲೆ ಪೆಟ್ಟು ತಿಂದವನ ಕಡೆಗೆ ತಿರುಗಿ ಹೇಳಿದ 'ಸ್ವಾಮೀ! ನೀವೇನಾದರೂ ಕೋರ್ಟಿಗೆ ಹೋಗುವುದಾದರೆ ನನ್ನ ಸಾಕ್ಷ್ಯವನ್ನು ಹೇಳಲು ಯಾವಾಗಲೂ ನಾನು ಸಿದ್ಧನಾಗಿದ್ದೇನೆ.' ನನ್ನ ಕಡೆ ದುರುಗುಟ್ಟುತ್ತ ನೋಡಿ 'ಈ ಅನ್ಯಾಯಕಾರರನ್ನು ನ್ಯಾಯವಾದ ಶಿಕ್ಷೆಗೆ ಗುರಿಮಾಡಲು ನನಗೆ ಬಹಳೇ ಸಂತೋಷ' ಎಂದ. ನಾನೂ ಯೋಚಿಸಲಾರಂಭಿಸಿದೆ. ಇನ್ನು ಕೋರ್ಟು ಕಛೇರಿ ಅಲೆಯಲಾರಂಭಿಸಿ ಹಣ ದಿನ ಎಲ್ಲಾ ಕಳೆದುಕೊಂಡು ಕಡೆಗೆ ಅವನಂತೆಯೇ ತೀರ್ಪಾದರೆ ದಂಡವನ್ನೂ ಕೊಡಬೇಕಾಗುತ್ತದೆ. ಈ ಮಧ್ಯೆ ಅವನ ಕಣ್ಣೇನಾದರೂ ಹೋಗಿಬಿಟ್ಟರೆ ದಂಡವೂ ಹೆಚ್ಚಾಗುತ್ತದೆ. ಇವೆಲ್ಲವನ್ನೂ ತಪ್ಪಿಸಿಕೊಳ್ಳಲು ಈಗಲೇ ಏನಾದರೂ ಪ್ರಯತ್ನ ಮಾಡಬೇಕು. ತಪ್ಪು ನನ್ನದೇನೊ ದಿಟ. ಹಿಂದುಮುಂದು ನೋಡದೆ ಸಂತೆಯ ಬೀದಿಯಲ್ಲಿ ನಾನು ಕಬ್ಬಿನ ಜಲ್ಲೆಯನ್ನು ಕೊಂಕುಳಲ್ಲಿಟ್ಟುಕೊಂಡು ಹೋದುದು ನನ್ನ ತಪ್ಪು. ಈಗಲಾದರೂ ಇವರಿಬ್ಬರಿಗೂ ಐದೈದು ರೂಪಾಯಿನ ನೋಟನ್ನು ಯಾರಿಗೂ ಕಾಣದಂತೆ ಕೊಟ್ಟು ಈ ಗೋಜಿನಿಂದ ಪಾರಾಗೋಣ, ಎಂದು ನಿರ್ಧರಿಸಿ ಕಿಸೆಯ ಒಳಕ್ಕೆ ಕೈಹಾಕಿದೆ. ಇಬ್ಬರೂ ನನ್ನನ್ನೇ ತುದಿಕಣ್ಣಿಂದ ನೋಡುತ್ತಿದ್ದರೆಂಬುದೂ ತಿಳಿಯಿತು. ಆ ವೇಳೆಗೆ ದೂರದಿಂದ ಇನ್ನೊಬ್ಬ ಮಹರಾಯನು ಬಂದ. ಅಯ್ಯೋ ದೇವರೇ! ಹದಿನೈದು ರೂಪಾಯಿಗೆ ಬಂತಲ್ಲಾ! ಎಂದುಕೊಳ್ಳುವಷ್ಟರಲ್ಲಿ ಅವನು ಮಾತನಾಡಿದ 'ಸ್ವಾಮೀ, ಇವರ ಕಥೆಯನ್ನು ನಂಬಬೇಡಿ ನೀವು ಹಿಂದಕ್ಕೆ ಸರಿದಾಗ ಈತ ನಿಮಗೆ ಆರು ಅಡಿ ಹಿಂದೆ ನಿಂತಿದ್ದ. ನಿಮ್ಮ ಕಬ್ಬಿನ ಜಲ್ಲೆಯು ಇವನಿಗೆ ತಾಕಲೇ ಇಲ್ಲ. ಅವನು ಕೋರ್ಟಿಗೆ ಹೋದರೆ ಹೋಗಲಿ. ನಾನು ನಿಮ್ಮ ಪರವಾಗಿ ಸಾಕ್ಷ್ಯ ಕೊಡುತ್ತೇನೆ' ಎಂದ. ನನಗೆ ಸ್ವಲ್ಪ ಧೈರ್ಯ ಬಂತು. ಆ ವೇಳೆಗೆ ಪೆಟ್ಟು ತಿಂದವನ ಕಣ್ಣುಗಳೂ ಸರಿಹೋದಂತೆ ಕಂಡಿತು. ಏಕೆಂದರೆ ವಸ್ತ್ರವನ್ನು ತೆಗೆದಿದ್ದನು. ಕಣ್ಣುಗಳು ಚೆನ್ನಾಗಿಯೇ ಇದ್ದುವು. 'ಹೋಗಲಿ ಬಿಡ್ರೀ ನೀವು ನಿಮ್ಮ ಪಾಡಿಗೆ ಹೋಗಿರಿ' ಎಂದು ಪೆಟ್ಟು ತಿಂದವನೇ ಹೇಳಿದ. ನನಗೆ ಆಶ್ಚರ್ಯ, ವಿಸ್ಮಯ, ಸಂಶಯ, ಅನುಮಾನ, ಕ್ರೌರ್ಯ, ಇತ್ಯಾದಿಗಳೆಲ್ಲವೂ ಒಟ್ಟಿಗೇ ಉಂಟಾಯಿತು.

ಸ್ವಲ್ಪ ಹೊತ್ತು ಮೌನವಾಗಿದ್ದೆ. ನಂತರ ಹೇಳಿದೆ, 'ಆದದ್ದು ಆಗಿ ಹೋಯಿತು. ಆದರೆ ನಿನ್ನ ಮನಸ್ಸಿನಲ್ಲಿ ಏನಿತ್ತಯ್ಯಾ ಹೀಗೆ ಮಾಡಲು? ಅದನ್ನು ಹೇಳಿದರೆ ನಾನೂ ಇದನ್ನೆಲ್ಲಾ ಮರೆತು ಬಿಡುತ್ತೇನೆ' ಎಂದೆ. ಎಲ್ಲರೂ ಹತ್ತಿರವೇ ಇದ್ದ ಒಂದು ಎಳನೀರಿನ ಅಂಗಡಿಯ ಬಳಿ ಹೋಗಿ ಎಳನೀರು ಕುಡಿದು ಗರುಕೆಯ ಮೇಲೆ ಕೂತುಕೊಂಡೆವು. ಆಗ ಪೆಟ್ಟು ತಿಂದವನು ನನ್ನ ಪ್ರವರವನ್ನೆಲ್ಲಾ ಹೇಳಿದ "ನೋಡ್ರಿ, ನಾನು ಒಬ್ಬ ಡೊಂಬರವನ ಮಗ. ನನ್ನ ಹೆಸರು ಚೆನ್ನ. ನನ್ನ

ತಂದೆಯ ಹೆಸರು ಚೆಲುವ. ನಾನು ಡೊಂಬರಾಟದಲ್ಲಿ ಐಂದ್ರಜಾಲಿಕ ಚಮತ್ಕಾರಗಳಲ್ಲಿ ಚೆನ್ನಾಗಿ ನುರಿತಿದ್ದೆ. ತಕ್ಕಮಟ್ಟಿಗೆ ಹೆಸರುವಾಸಿಯಾಗಿದ್ದೆ. ಊರೂರು ತಿರುಗಿ ದಾರಿಯ ಚೌಕಗಳಲ್ಲೆಲ್ಲಾ ಆಟ ಕಟ್ಟಿ ತಕ್ಕಮಟ್ಟಿಗೆ ಸುಖವಾಗಿಯೇ ಹೊಟ್ಟೆ ಹೊರೆದುಕೊಳ್ಳುತ್ತಿದ್ದೆ. ಆದರೆ ಈಗ್ಗೆ ಕೆಲವು ವರ್ಷಗಳಿಂದಲೂ ಜನರೆಲ್ಲರೂ ಪರದೇಶದಿಂದ ಬಂದು ಬ್ಯಾಂಡು, ಹುಡುಗಿಯರನ್ನು ಮುಂದಿಟ್ಟು ಸರ್ಕಸ್ ಎಂದು ಸಂಸ್ಥೆಗಳನ್ನು ಮಾಡಿಕೊಂಡು ಆಟ ಹೂಡಿದರೇ ಹಣ ಕೊಡುವರೇ ವಿನಹಾ ನನ್ನಂಥ ಏಕಸಂಸಾರ ಆಟಗಾರರಿಗೆ ಉತ್ತೇಜನವೇ ಇಲ್ಲದಂತಾಯಿತು. ಕಡೆಕಡೆಗೆ ಊಟ ಸಿಗುವುದೇ ಕಷ್ಟವಾಯಿತು. ಹಲವು ಪರದೇಶೀ ಸರ್ಕಸ್ ಸಂಸ್ಥೆಗಳು 'ಹದಿನೈದು ರೂಪಾಯಿ ಪಗಾರ ಕೊಡುತ್ತೇವೆ ನೀನು ನಮ್ಮಲ್ಲಿ ಕೆಲಸಕ್ಕೆ ಬಂದರೆ' ಎಂದರು. ಸ್ವತಂತ್ರ ಜೀವನದ ರುಚಿಗಂಡ ನಾನು ಅವರ ಕೆಲಸಕ್ಕೆ ಒಪ್ಪಲಿಲ್ಲ. ಊಟದ ನಿಮಿತ್ತ್ಯ ಬಹುವಾಗಿ ಯೋಚಿಸಬೇಕಾಯಿತು. ಆ ಹೊತ್ತಿಗೆ ನನ್ನ ಗೆಳೆಯ—ನನಗೆ ಸಾಕ್ಷ್ಯ ಹೇಳುವುದಾಗಿ ಬಂದವನು—ನನಗೆ ಸಂಧಿಸಿದ. ಇಬ್ಬರೂ ಸೇರಿ ಈಗ ಒಂದು ಉಪಾಯ ಹೂಡಿದ್ದೇವೆ. ನಿಮಗಾದಂತೆ ನಾನು ಹಿಂದೆ ಇದ್ದು ಪೆಟ್ಟು ತಿಂದಂತೆ ನಟಿಸುತ್ತೇನೆ. ನನ್ನ ಅನುಯಾಯಿಯು ಬಂದು ನನಗೆ ಸಾಕ್ಷ್ಯ ಹೇಳುವುದಾಗಿ ನೆರವಾಗುತ್ತಾನೆ. ಆಗ್ಗೆ ನಿಮ್ಮಂತಹರು ಐದೊ ಹತ್ತೊ ರೂಪಾಯಿ ಕೊಟ್ಟು ಹೊರಟು ಹೋಗುವರು. ಕೆಲವು ವೇಳೆ ಕಬ್ಬಿನ ಜಲ್ಲೆಯ ಪೆಟ್ಟು ತಿಂದಂತೆ ನಟಿಸುತ್ತೇವೆ. ಕೆಲವು ವೇಳೆ ಷಹರಿನ ರೈಲ್ವೆ ಸ್ಟೇಷನ್ನಿಗೆ ಹೋಗಿ ಬಾಳೆಹಣ್ಣು ತಿನ್ನುತ್ತಿದ್ದವರ ಹಿಂದೆ ನಡೆದು ಅವರು ಸಿಪ್ಪೆ ಎಸೆದ ವೇಳೆಗೆ ಅದನ್ನು ಜಾರಿಬಿದ್ದವನಂತೆ ನಟಿಸಿ, ಅವನನ್ನು ಠಾಣೆಗೆ ಎಳೆಯುತ್ತೇವೆಂದು ಹೆದರಿಸಿ, ಅವನು ದಂಡವನ್ನು ಯಾರಿಗೂ ತಿಳಿಯದಂತೆ ತೆರುವಂತೆ ಮಾಡುತ್ತೇವೆ. ಇನ್ನು ಕೆಲವು ವೇಳೆ ಷಹರಿನ ಹೋಟೆಲುಗಳಿಗೆ ಹೋಗಿ ಕಡಪಾಕಲ್ಲಿನ ಮೇಲೆ ಬೆಣ್ಣೆಯನ್ನು ಹಾಕಿ, ಹೋಟೆಲಿನವರೇ ಹಾಕಿದ್ದರೆಂದೂ ನಾನು ಅದನ್ನು ಜಾರಿಬಿದ್ದ ಹಾಗೂ ನಟಿಸಿ ಅವರಿಂದ ದಂಡ ವಸೂಲ್ಮಾಡಿಕೊಂಡು ಬರುತ್ತೇನೆ. ಮಳೆಗಾಲದಲ್ಲಿ ಛತ್ರಿಯ ನೆಪದಿಂದಲೂ ಸಂಕ್ರಾಂತಿಯ ವೇಳೆಯಲ್ಲಿ ಕಬ್ಬಿನ ಜಲ್ಲೆಗಳಿಂದಲೂ ಬಾಳೇಹಣ್ಣಿನ ಸಿಪ್ಪೆಯಿಂದಲೂ ಮನೆಕಟ್ಟುತ್ತಿದ್ದಾಗ ನನ್ನ ಕಾಲಮೇಲೇ ಇಟ್ಟಿಗೆಯು ಬಿದ್ದಂತೆ ನಟಿಸುತ್ತಲೂ ಹೀಗೆ ವಿಧವಿಧವಾಗಿ ಕೆಲಸ ಮಾಡಿ ಹೊಟ್ಟೆ ಹೊರೆಯುತ್ತಿದ್ದೇನೆ' ಎಂದು ಹೇಳಿದ.

'ಅಯ್ಯಾ ಚೆನ್ನ ನಿನ್ನ ನೆನಪು ನನಗೆ ಚೆನ್ನಾಗಿದೆ. ನೀನು ಈ ಕೆಲಸ ಮಾಡುವಾಗ ತಿಳಿಯದವರನ್ನು ಮೋಸಗೊಳಿಸುತ್ತೇನೆ ಎಂಬ ಭಾವನೆಯು ಮೂಡುವುದೇ? ಇಲ್ಲವೇ?' ಎಂದು ಕೇಳಿದೆ.

ಅವನು ಹೇಳಿದ 'ಅದು ಯಾಕ್ರೀ ಆ ಭಾವನೆ. ನಾನು ಇದೊಂದು ಕಲೆಯೆಂದು ತಿಳಿದಿದ್ದೇನೆ. ನನ್ನ ಕಲೆಯನ್ನು ನಾನು ಉಚಿತ ರೀತಿಯಲ್ಲಿ ನಡೆಸಿದರೆ ಹಣ ಪಡೆಯುತ್ತೇನೆ. ಚೆನ್ನಾಗಿರುವ ಪಟವೊಂದನ್ನು ಯಾರಾದರೂ ಬರೆದರೆ ಅವರಿಗೆಷ್ಟು ಖರ್ಚಾಗುತ್ತೆ, ಸುಮಾರು ಒಂದು ರೂಪಾಯಿನಷ್ಟು ಬಣ್ಣ. ಅದನ್ನು ಮೆಚ್ಚಿದವರು ಅದಕ್ಕೆ ಸಾವಿರಾರು ರೂಪಾಯಿ ಕೊಡುವುದಿಲ್ಲವೇ? ಒಳ್ಳೆಯ ಪದ್ಯವೊಂದನ್ನು ಬರೆದ ಪುಣ್ಯದಿಂದ ಎಷ್ಟೋ ಜನ ಯುವಕ ಕವಿಗಳಿಗೆ ಸುಖಜೀವನದ ಸರಕಾರಿ ಕೆಲಸಗಳು ದೊರಕುವುದಿಲ್ಲವೇ? ಅವೆಲ್ಲವೂ ಮೋಸವೇ? ಹಾಗೆಯೇ ನಾನೂ ಒಬ

ಕಲೋಪಾಸಕ. ಕಲೆಯ ಅಭ್ಯಾಸದಲ್ಲಿ ಚೆನ್ನಾಗಿ ತೇರ್ಗಡೆಯಾಗದಿದ್ದರೆ ಅಂದೆ ಹಣದ ಆಶೆಯನ್ನು ಬಿಟ್ಟು ಎಲ್ಲಾದರೂ ಸಾಮಾನು ಮಾರಿಕೊಂಡು ಜೀವನ ಮಾಡುತ್ತೇನೆ.'

ಅವನ ಮಾತುಗಳು ನನಗೇಕೋ ಸಮಂಜಸವಾಗಿ ತೋರಿತು. ಅವನ ನ್ಯಾಯವೂ ನನಗೆ ಸಮ್ಮತವಾಯಿತು. ಪೂರ್ವಪರಿಚಿತನ ದರ್ಶನವಾಗಿದ್ದಕ್ಕೆ ಅವನನ್ನು ವಂದಿಸಿ ನನ್ನ ಮಾರ್ಗವನ್ನು ನಾನು ಹಿಡಿದೆ. ಮನೆಗೆ ಹೋಗಿ ಮಕ್ಕಳಿಗೆಲ್ಲಾ ಇದನ್ನು ಹೇಳಿದರೆ, ಯಾರೂ ನಂಬುವುದಿಲ್ಲವೆಂಬುದನ್ನು ಕಂಡು, ಯಾರಿಗೂ ನಾನು ಹೇಳಲಿಲ್ಲ.

*  *  *  *  *

ಇದಾದ ಎಷ್ಟೋ ತಿಂಗಳ ಮೇಲೆ ನಾನು ಷಹರಿಗೆ ಕಾರ್ಯಾಂತರವಾಗಿ ಹೋಗಿದ್ದೆ. ಅಲ್ಲಿ ಒಂದು ಸಾಯಂಕಾಲ ಮಾರ್ಕೆಟ್ಟಿನಿಂದ ಹಿಂತಿರುಗಿ ನನ್ನ ಕೊಠಡಿಗೆ ಬರುತ್ತಿದ್ದಾಗ ದಾರಿಯಲ್ಲೊಬ್ಬನು ಹೂವು ಮಾರುತ್ತಿದ್ದನು. ಅವನನ್ನು ನೋಡಿದ ಹಾಗೆ ಜ್ಞಾಪಕ. ಅವನನ್ನು ಕರೆದು ಒಂದು ಕುಚ್ಚು ಹೂವು ಕೊಡೆಂದು ಕೇಳಿದೆ. ಅವನದನ್ನು ಸರಿಪಡಿಸುತ್ತಿದ್ದಾಗ ಅವನನ್ನು ಕೇಳಿದೆ, 'ನಿನ್ನನ್ನು ಎಲ್ಲೋ ನೋಡಿದಂತಿದೆ. ನೀನು ಯಾರು?' ಎಂದು. ಅವನು ಹೇಳಿದ, 'ನಾನು ಚೆಲುವನ ಚೆನ್ನ ಸ್ವಾಮೀ. ನಿಮ್ಮನ್ನು ಸಂತೆಯಲ್ಲಿ ಒಮ್ಮೆ ನೋಡಿದ್ದೆನಲ್ಲವೇ?' ಎಂದ. ನನಗೂ ಜ್ಞಾಪಕ ಬಂತು. ಅವನನ್ನು ಕೇಳಿದೆ, 'ಅಯ್ಯಾ ಚೆನ್ನ, ಇದೇನಿದು! ನಿನ್ನ ಕಲೆಯನ್ನು ಮರೆತುಬಿಟ್ಟೆಯಾ? ಅಥವಾ ಅದರಿಂದ ಕೇಡೇನಾದರೂ ಸಂಭವಿಸಿತೇ? ಹಾದಿಯಲ್ಲಿ ಹೂವು ಮಾರುವ ಸ್ಥಿತಿಗೆ ಬಂದಿರುವೆಯಲ್ಲ!' ಎಂದೆ. ಆಗವನು ಹೇಳಲಾರಂಭಿಸಿದ. 'ನೋಡ್ರಿ, ನಿಮ್ಮನ್ನು ನೋಡಿದ ಮೇಲೆ ಹಳ್ಳಿಗಳಲ್ಲಿ ನನ್ನ ಕಲೆಯನ್ನು ಅಭ್ಯಸಿಸುವುದು ಅಷ್ಟು ಫಲಕಾರಿಯಲ್ಲ ಎಂದು ನಾವಿಬ್ಬರೂ ಷಹರಿಗೆ ಬಂದು ಅಭ್ಯಸಿಸತೊಡಗಿದೆವು. ಇಲ್ಲಿ ದಂಡವೆಂದರೆ ನೂರು ಇನ್ನೂರು ರೂಪಾಯಿಗಳು ದೊರೆಯಲಾರಂಭವಾಯಿತು. ಆದರೆ ಒಂದು ದಿನ ಸಾಹುಕಾರ ......ಯ್ಯನವರು ಮನೆ ಕಟ್ಟಿಸುತ್ತಿದ್ದರು. ಮಹಡಿಗೆ ಹತ್ತುವುದಕ್ಕೆ ಬೊಂಬಿನ ಏಣಿಯನ್ನು ಹಾಕಿದ್ದರು. ಅವರಲ್ಲಿ ಕೆಲಸಕ್ಕೆ ಸೇರಿಕೊಂಡು, ಏಣಿಯನ್ನು ಹತ್ತಹೋಗಿ, ಅವರ ಕೂಗಿದ ನೆಪವನ್ನು ಕಾದುಕೊಂಡಿದ್ದು, ಅಲ್ಲಿಂದ ಕೆಳಗೆ ಬಿದ್ದಂತೆ ನಟಿಸಿ ಅವರಿಂದ ಹೆಚ್ಚು ದಂಡವನ್ನು ತೆರಿಸಬೇಕೆಂದು ಸ್ಥಿರಮಾಡಿಕೊಂಡೆವು. ಅಂತೆಯೇ ಆ ಮನೆಯ ಕಟ್ಟುವಿಕೆಗೆ ಕೆಲಸಗಾರನಾಗಿ ಸೇರಿಕೊಂಡೆ. ಅವರು ಅಲ್ಲಿಗೆ ದಿನಾಲೂ ಬೆಳಿಗ್ಗೆ ಬಂದು ಕೆಲಸವನ್ನು ನೋಡಿಕೊಳ್ಳುತ್ತಿದ್ದರು. ಒಂದು ದಿನ ನನ್ನನ್ನು ಕರೆದು, 'ಮಹಡಿಯ ಮೇಲಕ್ಕೆ ಹತ್ತಿ, ಅಲ್ಲಿಂದ ಈ ಹಗ್ಗವನ್ನು ಕೆಳಕ್ಕೆ ಬಿಡು. ಅದು ನೇರವಾಗಿ ಬೀಳುವ ಕಡೆಯಲ್ಲೇ ಒಂದು ಸಿಂಹದ ಬಾಯಿಯನ್ನು ಮಾಡಿಸಿ ಮಳೆಯ ನೀರು ಅದರ ಬಾಯಿಯಲ್ಲಿ ಬೀಳುವಂತೆ ಮಾಡಬೇಕು' ಎಂದರು. ನಾನು ಹೇಳಿದೆ, 'ಏಣಿಯು ಚೆನ್ನಾಗಿಲ್ಲ. ಬೇರೆ ಏಣಿ ತರಿಸಿ, ನಂತರ ಹತ್ತುತ್ತೇನೆ' ಎಂದು. ಅವರಂದರು, 'ಈ ಏಣಿ ಸರಿಯಾಗಿದೆ. ನಿನ್ನೆಯ ದಿನವೆಲ್ಲಾ ಇದನ್ನು ಕೆಲಸಗಾರರು ಉಪಯೋಗಿಸಿದ್ದಾರೆ'. 'ಸರಿ' ಎಂದು ಹೇಳಿ ಅದರ ಕಾಲಿಗೆ ಊರೆ ಕೊಟ್ಟಿದ್ದ ಕಲ್ಲನ್ನು ಅವರಿಗೆ ಕಾಣದಂತೆಯೇ ಕಾಲಿನಿಂದ ಒದೆದು ಹತ್ತಲಾರಂಭಿಸಿದೆ. ತುದಿಗೆ ಹೋಗುವ ವೇಳೆಗೆ ಗೋಡೆಗೆ ಕೈ ಕೊಟ್ಟು ನೂಕಿ ಏಣಿಯು ಬೀಳುವಂತೆ ಮಾಡಿ, ನಾನು ಅಲ್ಲಿಂದ ನೆಗೆದು, ಬಿದ್ದು ಜ್ಞಾನತಪ್ಪಿದವನಂತೆ ಅಥವಾ ಕಾಲು ಮುರಿದವನಂತೆ ನಟಿಸಬೇಕೆಂದು ನನ್ನ

ಕಾರ್ಯಕ್ರಮ. ಹಾಗೆಯೇ ಪ್ರಯತ್ನಿಸಿದೆ. ಆದರೆ ನೋಡಿ, ನನಗೆ ಈಗ ಕಲಾದೇವಿಯು ಪ್ರಸನ್ನಳಾಗಿಲ್ಲ. ವಯಸ್ಸಾಗಿಹೋಯಿತು. ಇನ್ನೂ ನನ್ನ ಆಟ ಹೂಡಲು ಐದು ಮೆಟ್ಟಲುಗಳಿದ್ದಾಗಲೇ ಏಣಿಯು ಅದೇ ಅದಾಗಿ ಜಾರಿತು. ನಾನು ಕೆಳಗೆ ಬಿದ್ದೆ. ಕಾಲು ದಿಟವಾಗಿಯೂ ಮುರಿದು ಹೋಯಿತು. ಆಸ್ಪತ್ರೆಗೆ ತಕ್ಷಣ ಸಾಹುಕಾರರು ತಮ್ಮ ಕಾರಿನಲ್ಲಿಯೇ ಕರೆದುಕೊಂಡು ಹೋದರು. ಅಲ್ಲಿ ಮೂರು ತಿಂಗಳಿದ್ದು ಕಾಲು ಸರಿ ಮಾಡಿಕೊಂಡು ಹಿಂತಿರುಗಿ ಬಂದೆ. ನನ್ನ ಜತೆಗಾರನು ಹೇಳಿದ, 'ಈಗ ಸಾವಿರ ರೂಪಾಯಿ ದಂಡ ಗಿಟ್ಟಿಸಿಬಿಡೋಣ' ಎಂದು. ಸಾಹುಕಾರರು, ನಾನು ಗಲಾಟೆ ಎಬ್ಬಿಸದೆ ಇದ್ದರೆ, ಅವರ ಮನೆಯ ಹೆಂಗಸರಿಗೆ ಇದು ಗೊತ್ತಾಗದೆ ಇದ್ದರೆ, ಸಾವಿರ ರೂಪಾಯಿ ಕೊಡುವುದಾಗಿ ಒಪ್ಪಿಕೊಂಡರು. ನಾನು ಅದನ್ನು ತೆಗೆದುಕೊಳ್ಳಲಿಲ್ಲ' ಎಂದು ಹೇಳಿದ.

'ಅದೇಕೆ ಹಣ ತೆಗೆದುಕೊಳ್ಳಲಿಲ್ಲ? ಅದೇ ನಿನ್ನ ಕಾರ್ಯವಾಗಿತ್ತಲ್ಲ? ಆ ಹಣ ಇಟ್ಟುಕೊಂಡು ಒಂದು ದೊಡ್ಡ ಅಂಗಡಿಯನ್ನೇ ಆರಂಭಿಸಬಹುದಾಗಿತ್ತಲ್ಲ?' ಎಂದೆ.

'ಛೇ, ನಾನು ಬೇಕಾಗಿ ಬಿದ್ದು, ನನ್ನ ಕಲೆಯನ್ನು ಪ್ರೌಢ ರೀತಿಯಲ್ಲಿ ನಡೆಸಿದ್ದರೆ ಆ ಹಣವನ್ನು ತೆಗೆದುಕೊಳ್ಳಲು ನನಗೆ ಹಕ್ಕುಂಟು. ನಾನು ಅಕಸ್ಮಾತ್ತಾಗಿ ಬಿದ್ದೆ. ನನ್ನ ಕ್ರಮದಂತೆ ಬೀಳಲಿಲ್ಲ. ಈ ಅಪಾಯವಾದ ಮಾತ್ರಕ್ಕೇ ಹಣವನ್ನು ನಾನು ತೆಗೆದುಕೊಳ್ಳಬಹುದೇ? ನಾನು ಸಂಪಾದಿಸಿದ್ದರೆ ಸಂತೋಷವಾಗಿ ತೆಗೆದುಕೊಳ್ಳುತ್ತಿದ್ದೆ. ಇದು ನನಗೆ ಅನ್ಯಾಯದ ಹಣ. ಅದಕ್ಕಾಗಿ ತೆಗೆದುಕೊಳ್ಳಲಿಲ್ಲ' ಎಂದ.

ಅವನ ಹತ್ತಿರ ಇನ್ನೆರಡು ಕುಚ್ಚು ಹೂವು ತೆಗೆದುಕೊಂಡೆ. ನಾನು ಒಬ್ಬನೇ ಇದ್ದವನು, ನನಗೆ ಹೂವು ಬೇಡವಾಗಿತ್ತಾದರೂ ಆ ವ್ಯಾಪಾರ ಮಾಡಿದೆ. ಅದೇ ನಾನು ಅವನ ಸತ್ಯವಾದ ಕಲೆಗೆ ಕೊಟ್ಟ ಕಾಣಿಕೆ. ಬೇರೊಂದನ್ನೂ ಅವನು ತೆಗೆದುಕೊಳ್ಳನು.

■

# ಇಟಲಿ, ನಮ್ಮ ಕೇರೀನೇ!

**ಗೋ**ಧೂಳಿ ಕಾಲ. ಸಂಜೆ ೬ ೬-೩೦ರ ವೇಳೆ. ರೋಮ್ ಇನ ವಿಮಾನ ನಿಲ್ದಾಣದಿಂದ ಊರೊಳಗಿರುವ ಹೋಟೆಲ್ ಟೆಟ್ಟಿಯೋನೋಗೆ ಬಸ್ಸಿನಲ್ಲಿ ಹೊರಟೆವು. ಹತ್ತು ಗಾವುದದ ಆ ಹಾದಿಯಲ್ಲಿ ಹಳ್ಳಿ ಕೇರಿಗಳ ಜನರು ಅಲ್ಲಲ್ಲಿ ಕಾಣಿಸಿಕೊಂಡರು. ನಮ್ಮ ತರಹ ಕಪ್ಪು ಕಪ್ಪು ಕೂದಲು. ಹರಕು ಹರಕು ಬಟ್ಟೆ. ಹಳ್ಳಿಗಳ ರಸ್ತೆ ಅಂಚಿನಲ್ಲಿ ಕುಕ್ಕುರುಗಾಲಿನಲ್ಲಿ ಕೂತ ೬-೮ ವಯಸ್ಸಿನ ಹುಡುಗರು.

ನಮ್ಮ ಕೇರೀನೇ! ಗ್ರಾಮಸಿಂಹಗಳಿಗೆ ಆಹಾರ ಒದಗಿಸಲು ರಸ್ತೆ ಅಂಚಿನಲ್ಲಿ ನಮ್ಮ ಹುಡುಗರು ಕೂತುಕೊಳ್ಳುಲ್ಲವೇ? ಅದೇ ರೀತಿ ಅಲ್ಲಿ ಕೂಡ. ಆ ತನಕ ಯೂರೋಪಿನ ೬-೭ ವಾರಗಳ ಪ್ರವಾಸದಲ್ಲಿ ಈ ದೃಶ್ಯವನ್ನೇ ಕಂಡಿರಲಿಲ್ಲ. ಇಟಲಿಯಲ್ಲಿ ಇದನ್ನು ಕಂಡಾಗಲೇ ಅಪ್ಪಾ! ನಮ್ಮ ಊರಿಗೇ ಬಂದಹಾಗಾಯ್ತು. ಮನೆ ಸೇರಿದ ಹಾಗಾಯ್ತು. ಇಲ್ಲಿ ಎಲ್ಲಿ ಬೇಕಾದರೂ ನಮ್ಮೂರಿನಲ್ಲಿ ಮಾಡುವಂತೆ ಸಂದಿ ಗೊಂದಿಗಳಲ್ಲಿ ದೇಹಬಾಧೆಗಳನ್ನು ತೀರಿಸಿಕೊಳ್ಳಬಹುದು ಎಂಬ ಧೈರ್ಯ ಬಂತು. ಎಲ್ಲಿ ಬೇಕಾದರೂ ಸಿಂಬಳ ಸೀನಬಹುದು ಎನ್ನುವ ವಿಶ್ವಾಸ ಹುಟ್ಟಿತು.

ಹೋಟಲನ್ನು ಸೇರಿದಾಗ ಇನ್ನೂ ಕಣ್ಣು ಬೆಳಕಾಗಿತ್ತು. ಹಳೆ ಕಾಲದ ಅರಮನೆಯನ್ನು ಹೋಟಲಾಗಿ ಪರಿವರ್ತಿಸಿದ್ದರು. ತುಸು ಹತ್ತಿರದಲ್ಲೇ ಜ್ಯೂಲಿಯಸ್ ಸೀಸರನ್ನು ಕೊಲೆಗೈದ ಸ್ಥಳ. ಹೋಟಲಿನಲ್ಲಿ ಸಾಮಾನು ಇಳಿಸಿ ಆ ಸ್ಥಳವನ್ನು ನೋಡಲು ಆಸಕ್ತಿ ಇದ್ದ ಇಬ್ಬರು ಮೂವರು ಹೋದೆವು.

ಕೆರೆ ಅಂಗಳ ಇದ್ದ ಹಾಗೆ ಇದೆ ಆ ಸ್ಥಳ. ಕೊಳಚಲು ಪ್ರದೇಶ. ಜ್ಯೂಲಿಯಸ್ ಸೀಸರ್ ಕೊಲೆಯಾದಲ್ಲಿ ಒಂದು ಹಳೆ ಮಂಟಪದ ತರಹ ಶಿಥಿಲವಾದ ಕಟ್ಟಿದ ಒಂದಿದೆ. ಸುತ್ತಲೂ ಅಲ್ಲಿ ಇಲ್ಲಿ ಸಣ್ಣ ಗುಹೆಗಳ ತರಹ ಕೊಠಡಿಗಳು. ಭಿಕ್ಷುಕರು ಅಲ್ಲಿ ಇರಬಹುದು ಎನ್ನುವಂತಿದ್ದುವು.

ಜಟ್ಟಂತ ಒಂದು ಧಡೂತಿ ಕರಿ ಬೆಕ್ಕು ಕೊಠಡಿಯೊಂದರಿಂದ ಓಡಿ ಬಂತು. ಅದರ ಹಿಂದೆಯೇ ಗಡವಾ ಬೆಕ್ಕು ಒಂದು ಓಡಿ ಬಂತು.

ಜತೆ ಜತೆ ಚೀತ್ಕಾರ, ಜೋಡಿ ಜೋಡಿ ಕಿರುಚಾಟ, ಪರಸ್ಪರ ಪರಚಾಟ. ಯಥಾ ಪ್ರಕಾರ ನಮ್ಮ ಕೇರಿಯ ದೃಶ್ಯವೇ! ಸಂಗಾತಿ ಬೆಕ್ಕುಗಳ ಸಂಗೀತವೇ!

ಜ್ಯೂಲಿಯಸ್ ಸೀಸರ್ ಎಂದರೆ ನನ್ನ ವಾರಿಗೆಯ ವಿದ್ಯಾರ್ಥಿಗಳಿಗೆಲ್ಲ ತುಂಬ ಗೌರವ. ಆತ ಬರವಣಿಗೆಯಲ್ಲಿ ಹೇಗೋ ಹಾಗೆ, ಸಮರದಲ್ಲೂ ಅತಿ ಕೌಶಲ ತೋರಿದವ. ಸಾಮ್ರಾಜ್ಯ ಕಟ್ಟಿದವ. ಭೂಲೋಕದ ನಮಗೆ ತಿಳಿದ ಚರಿತ್ರೆಯಲ್ಲಿ ಸೀಸರ್, ವಿದ್ಯಾರಣ್ಯ, ವಿನ್‌ಸ್ಟನ್ ಚರ್ಚಿಲ್, ಈ

ಮೂವರೇ ಕತ್ತಿಯನ್ನೂ ಲೇಖನಿಯನ್ನೂ ಒಂದೇ ಪ್ರೌಢಿಮೆಯಿಂದ ಝಳಪಿಸಿದವರು. ಇಂದಿಗೂ ಆಗಿಂದಾಗ್ಗೆ ಆತನ Commentaries ಅನ್ನು ಓದುತ್ತೇನೆ.

ಅಂತಹವನ ಮರಣಮಂಟಪ ಊರ ಮಧ್ಯದಲ್ಲಿ ಶಿಥಿಲವಾಗಿ ಬಿದ್ದಿದೆ. ಬೆಕ್ಕುಗಳ ಕ್ರೀಡಾರಂಗ. ಜೇಬುಗಳ್ಳರ ಕೋಟೆ ಕೊತ್ತಲ. ಆತನನ್ನು ಬೆಂಬಲಿಸಿದ್ದ ಕ್ಲಿಯೋಪಾತ್ರಳ ಸಿನೀಮಾವನ್ನು ನೋಡಿದರೆ ಆತನ ಕಾಲದ ಶ್ರೀಮಂತಿಕೆ ಸೌಭಾಗ್ಯ ಸಂಸ್ಕೃತಿ ಎಲ್ಲವೂ ಕಣ್ಣಿಗೆ ಕಟ್ಟಿದಂತಾಗುತ್ತದೆ. ಆದರೆ ಚರಮ ಸ್ಥಳ?

ಹೀಗೆಲ್ಲಾ ಅನ್ನಿಸಿತು. ಹೋಟಲಿಗೆ ಮರಳಿದೆವು, ಆ ಮಾತು ಈ ಮಾತು ಆಡುತ್ತ ರಾತ್ರಿ ಎಂಟಕ್ಕೆಲ್ಲಾ ಊಟ ಮುಗಿಯಿತು. ಊರಿನಲ್ಲಿ ಅಡ್ಡಾಡಿ ಬರೋಣ ಒಂದೆರಡು ತಾಸು, ಎಂದು ನಾಲ್ವರು ಹೊರಡಲು ಸಿದ್ಧರಾದೆವು. ಆ ಹೋಟಲ ಮ್ಯಾನೇಜರ್ ತುಸು ಹಿರಿಯವ. ನಮ್ಮ ಪೆಂಗು ಮುಖಗಳನ್ನು ನೋಡಿ ಏನು ಕರುಣೆ ಉಕ್ಕಿತೋ, ಅವ ಹೇಳಿದ "ನಿಮ್ಮ ಪರ್ಸ್‌ಗಳಲ್ಲಿ ಹಣವಿದ್ದರೆ, ಅದನ್ನು ಹೋಟಲಿನಲ್ಲಿ ಇಟ್ಟು ಹೋಗಿ. ನಿಮ್ಮ ಪ್ಯಾಸ್‌ಪೋರ್ಟ್ ಮತ್ತು ಪರಿಚಯ ಪತ್ರಗಳನ್ನು ಮಾತ್ರ ತೆಗೆದುಕೊಂಡು ಹೋಗಿ. ಈ ಊರಿನಲ್ಲಿ ಬಲು ಚೂಟಿ ಜೇಬುಗಳ್ಳರಿದ್ದಾರೆ. ಯಾವುದೋ ಮಾಯದಲ್ಲಿ ಜೇಬು ಕತ್ತರಿಸುತ್ತಾರೆ. ಆದರೂ ಕದ್ದ ನಂತರ ಪರ್ಸಿನಲ್ಲಿದ್ದ ಹಣವನ್ನು ಲಪಟಾಯಿಸಿ, ಪ್ಯಾಸ್‌ಪೋರ್ಟ್ ಮತ್ತು ಇತರ ವೈಯಕ್ತಿಕ ಕಾಗದಗಳನ್ನು ಅನಾಮಧೇಯವಾಗಿ ಇಂಡಿಯನ್ ರಾಯಭಾರಿ ಕಚೇರಿಗೆ, ಅಂಚೆಯಲ್ಲಿ ಕಳಿಸುತ್ತಾರೆ. ಹಿಂತಿರುಗಿ ಬಂದಾಗ ಜೇಬು ಖಾಲಿಯಾಗಿದ್ದರೆ ಹೆದರಬೇಡಿ. ನಾಳೆ ಅಥವಾ ನಾಡಿದ್ದು ಇಂಡಿಯನ್ ರಾಯಭಾರಿ ಕಚೇರಿಗೆ ಹೋಗಿ. ನಿಮ್ಮ ಪ್ಯಾಸ್‌ಪೋರ್ಟ್ ಖಂಡಿತ ದೊರೆಯುತ್ತೆ. ನಮ್ಮೂರ ಜೇಬುಗಳ್ಳರಿಗೆ, ನೀತಿ ನಿಯತ್ತು ಇದೆ. ಪ್ರವಾಸಕ್ಕೆ ಬಂದವರ ಹಣ ದೋಚುವುದಕ್ಕೆ ಅವರು ಹಿಂತೆಗೆಯುವುದಿಲ್ಲ. ಆದರೆ ಅವರಿಗೆ ಇತರ ಇನ್ನಾವ ತೊಂದರೆಯನ್ನೂ ಮಾಡುವುದಿಲ್ಲ." ಎಂದು ಎಚ್ಚರಿಕೆ ಕೊಟ್ಟ.

ಎದೆಯ ಮೇಲೆ ನೆಪೋಲಿಯನ್ ಯಾವ ರೀತಿ, ಚಿತ್ರಗಳಲ್ಲಿ ಕೈ ಇಟ್ಟುಕೊಂಡೇ ಇದ್ದ, ಅದೇ ರೀತಿ ನಾನೂ ಎದೆಯ ಮೇಲೆ ಅಂಗಿಯ ಒಳಜೇಬಿನಲ್ಲಿದ್ದ ಪರ್ಸಿನ ಮೇಲೆ, ರಕ್ಷಣೆಗಾಗಿ ಕೈಯಿಟ್ಟುಕೊಂಡೇ ಹೊರಟೆ.

ಸಣ್ಣಪುಟ್ಟ ಸಂದಿಗೊಂದಿಗಳು, ಬೆಂಗಳೂರಿನ ಚಿಕ್ಕಪೇಟೆ ದೊಡ್ಡಪೇಟೆ ಸಂದಿಗಳ ತರಹಾನೇ! ೬-೮ ಅಡಿ ಅಗಲದ ಸಂದಿಗಳು. ಹಳೇಕಾಲದ ನುಣ್ಣಗೆ ಈಗ ತೇಯ್ದು ಹೋಗಿರುವ ಚಪ್ಪಡಿ ಹಾಸಿದ ಸಂದಿಗಳು. ಹಾದಿಗೇ ತೆರೆಯುವ ಹೆಬ್ಬಾಗಿಲುಗಳಿರುವ ಎರಡು ಮೂರು ಅಟ್ಟದ ಮನೆಗಳು. ಗಿಜಿಗಿಜಿ, ಗುಜುಗುಜು, ಎಲ್ಲಾ ನಮ್ಮ ಊರಿನ ಹಳೇಪೇಟೆಯ ಮಾದರಿಯೇ.

ಆ ಸಂದು, ಈ ಗೊಂದು ದಾಟಿ, ಹಾದಿಯಲ್ಲಿ ಸಿಕ್ಕ ಇಂಗ್ಲೀಷ್ ಬಲ್ಲ ಒಬ್ಬನಿಂದ ಸಲಹೆ ಪಡೆದು, ಬಸವನ ಕೊಳದಂತಿದ್ದ ಒಂದು ಕೊಳದ ಬಳಿ ಹೋದೆವು. ಅರ್ಧ ಚಂದ್ರಾಕಾರದಲ್ಲಿದೆ ಆ ಕೊಳ. ಹಿಂದೆ ದೊಡ್ಡ ಬಂಡೆಗಳಂತೆ ಗೋಡೆಯನ್ನು ರಚಿಸಿದ್ದಾರೆ. ಆ ಗೋಡೆಯಲ್ಲಿ ಮೂರು ನಾಲ್ಕು ಅಪ್ಸರೆಯರ ವಿಗ್ರಹಗಳಿವೆ. ಅವರ ಬಾಯಿಗಳಿಂದ ನೀರು ಸುರಿದು ಬರುತ್ತದೆ. ಬಂದ ನೀರು ಕೊಳದಲ್ಲಿ ತಿಳಿ ಅಲೆಗಳನ್ನು ಎಬ್ಬಿಸುತ್ತದೆ. ಕೊಳದ ಸುತ್ತಲೂ ದಾರಿಯನ್ನೂ ನಿರ್ಮಿಸಿದ್ದಾರೆ. ದಾರಿಯಿಂದ ಇಳಿದು ಕೊಳದ ನೀರಿನಂಚಿನತ್ತ ಹೋಗಬಹುದು.

ಮೂರು ನಾಣ್ಯಗಳನ್ನು ಆ ಕೊಳಕ್ಕೆ ಎಸೆದು, ಇಷ್ಟಾರ್ಥವನ್ನು ನೆನೆಸಿಕೊಂಡರೆ, ಆ ಇಷ್ಟಾರ್ಥ ಈಡೇರುತ್ತದೆ ಎಂದು ಪ್ರತೀತಿ. ಈ ನಂಬುಗೆಯ ಮೇಲೆ, ಈ ಕೊಳದ ಚಲನಚಿತ್ರವೊಂದನ್ನು ನಿರ್ಮಿಸಿದ್ದಾರೆ ಹಾಲಿವುಡ್ಡಿನ ಜಾಣರು. ಆ ಜಾಣರ ಇಷ್ಟಾರ್ಥವೇನೋ ಈಡೇರಿತಂತೆ.

ನಾವು ಅಲ್ಲಿಗೆ ಹೋದಾಗ ಪಕ್ಕದಲ್ಲೇ ತರುಣತರುಣಿಯರ ಜೋಡಿ ನಿಂತಿತ್ತು. ಇವರು ಅಮೆರಿಕನ್ನರು ಎಂದು ಸುಲಭವಾಗಿ ಹೇಳಬಹುದಿತ್ತು. ಧಾಂಡಿಗರ ಹಾಗೆ ಬೆಳೆದಿದ್ದರೂ ಅವರ ಬೆರಳುಗಳ ಸುತ್ತ ಉಂಗುರುವಿದ್ದಿಲ್ಲ. ಅವನೇನೋ ಎಂಟುಪತ್ತು ಬಾರಿ ಮೂರುಮೂರು ನಾಣ್ಯಗಳನ್ನು ಕೊಳಕ್ಕೆ ಎಸೆದು, ಕಣ್ಣುಮುಚ್ಚಿಕೊಂಡು ಪ್ರಾರ್ಥಿಸುತ್ತಿದ್ದ. ಆಕೆಯ ಕೈಲೂ ನಾಣ್ಯಗಳನ್ನಿಟ್ಟು ನೀನೂ ನಾಣ್ಯತ್ರಯ ಹಾಕಿ ಪ್ರಾರ್ಥಿಸಿಕೊ ಎಂದ. ಆಕೆಯೂ ಹಾಗೇ ಮಾಡಿದಳು. ಯಾಕೋ? ಏನೋ? ಅವ ಹಠಾತ್ತನೆ ಕಣ್ಮರೆಯಾದ. ಇನ್ನೂ ಯಾರೋ ಒಬ್ಬ ಅಮೆರಿಕನ್ ತರುಣ "ಇಲ್ಲೇ ಇದ್ದೀಯಾ ಎಲ್ಲಿ" ಅಂತ ಉದ್ಗಾರ ತೆಗೆಯುತ್ತ ಅಲ್ಲಿಗೆ ಬಂದ.

೮-೧೦ ಸಾರಿ ಮೂರುಮೂರು ನಾಣ್ಯ ಹಾಕಿದವನ ಇಷ್ಟಾರ್ಥ ಅಂದೇನೂ ಈಡೇರಿದಂತೆ ತೋರಲಿಲ್ಲ.

"ಇಂಡಿಯಾನೋ" ಎಂಬ ಪ್ರಶ್ನೆಯನ್ನು ಯಾರೋ ಕೇಳಿದರು. ತಿರುಗಿ ನೋಡಿದೆ. ಭಾರಿಮೀಸೆಯ ಗುಂಗುರು ಕ್ರಾಪಿನ ಇಟಾಲಿಯನ್ ಆ ಪ್ರಶ್ನೆಯನ್ನು ಕೇಳಿದ್ದ.

"ಜೀ! ಜೀ" ಎಂದು ನಾನೂ ಉತ್ತರಿಸಿದೆ.

ಆಮೇಲೆ ಅವ ಹರುಕುಮುರುಕು ಇಂಗ್ಲೀಷಿನಲ್ಲಿ ಮಾತನಾಡಲಾರಂಭಿಸಿದ.

"ಮೂರು ನಾಣ್ಯ ಹಾಕಿ ಪ್ರಾರ್ಥಿಸಲಿಲ್ಲ ನೀವು ಏಕೆ" ಎಂದ.

"ನನ್ನ ಪ್ರಾರ್ಥನೆ ಈಡೇರುವ ಹಾಗಿಲ್ಲ" ಎಂದೆ.

"ಯಾಕೆ? ಅಂತಹ ಪ್ರಾರ್ಥನೆ ಏನು" ಎಂದ.

"ಸುಮಾರು ಅರ್ಧ ತಾಸಿನಿಂದ ಬಂದು ಹೋದ ಪುಷ್ಪ ಧರಿಸಿದ ಪುಷ್ಪವತಿಯರನ್ನೂ ಮತ್ತು ಅವರ ಜತೆಯನ್ನೂ ನೋಡುತ್ತಿದ್ದೇನೆ. ಏನಿಲ್ಲ ಅಂದರೂ ಈ ಕೊಳದಲ್ಲಿ ಈ ಹೊತ್ತಿಗೆ ಮಂತ್ರಿಗಳಿಗೆ ಕೊಡಬಹುದಾದಷ್ಟು ಲಂಚದ ಮೊತ್ತ ಬಿದ್ದಿರುತ್ತದೆ. ಆ ನಾಣ್ಯಗಳನ್ನೆಲ್ಲಾ ಲಪಟಾಯಿಸಬೇಕು ಎಂದು ನನ್ನ ಆಸೆ. ಆದರೆ ಅದು ಈಡೇರುವಂತಿಲ್ಲ" ಎಂದೆ.

"ಯಾಕೆ ಈಡೇರುಲ್ಲ" ಎಂದ.

"ನನಗೆ ಈಜು ಬರುಲ್ಲ. ಅಲ್ಲದೆ ಈ ಕೊಳದೊಳಕ್ಕೆ ಯಾರೂ ಇಳಿಯಬಾರದು ಅಂತ ಎಚ್ಚರಿಕೆ ಬೋರ್ಡ್ ಹಾಕಿದ್ದಾರೆ. ಕೊಳದಲ್ಲಿ ಸಂಗ್ರಹವಾದ ಹಣವನ್ನೆಲ್ಲಾ ಪೌರಸಭೆ ಲಪಟಾಯಿಸುತ್ತೆ ಎಂದು ಈಗತಾನೆ ಯಾರೋ ಹೇಳಿದರು. ಅದಕ್ಕೇ" ಎಂದು ರಾಗ ತೆಗದೆ.

"ದಿಟ! ದಿಟ! ನೀವು ಹೇಳಿದ್ದು" ಅಂದ ಅವ.

ಗ್ರಾಸಿ ಗ್ರಾಸಿ ಅಂತ ವಂದನೆ ಸಲ್ಲಿಸಿ, ಇಟಾಲಿಯನ್ನರ ತರಹ ತಬ್ಬಿಕೊಂಡು ಮುತ್ತುಕೊಟ್ಟು ಹೊರಟು ಹೋದ.

ನಾವು ನಾಲ್ವರಿದ್ದೆವಲ್ಲ! ಅವರಲ್ಲಿ ಒಬ್ಬ ಹಠಾತ್ತನೆ ಒಂದೊಂದಾಗಿ ಮೂರು ನಾಣ್ಯಗಳನ್ನು ಕೊಳಕ್ಕೆ ಎಸೆದು ಕಣ್ಣು ಮುಚ್ಚಿಕೊಂಡ.

ಆಶ್ಚರ್ಯವಾಯಿತು ನನಗೆ. "ಪುಡಿಗಾಸು ಇರೋದು ನಮ್ಮ ಬಳಿ. ಅದನ್ನೂ ಕಳೆದುಕೊಂಡು ಏನು ಬೇಡಿಕೊಂಡೆಯೋ?" ಎಂದೆ.

ನನಗೂ ಸ್ವಲ್ಪ ಅನುಮಾನ. ತೆಳ್ಳಗೆ ಬೆಳ್ಳಗೆ ಇದ್ದ ಯುವಕ ಡಾಕ್ಟರ್ ಅವ. ಬಾಲ್‌ರೂಂ ಡ್ಯಾನ್ಸ್ ಕಲಿತಿದ್ದ ಸ್ಫುರದ್ರೂಪಿ. ಮನೆ ಹೆಂಡತಿ ಊರು ಬಿಟ್ಟು ಬಂದು ಸುಮಾರು ರಾತ್ರಿಗಳಾಗಿತ್ತು. ಏನು ಬೇಡಿಕೊಂಡ ಈಗ? ಎಂದು.

"ಮನೆಯಿಂದ ತಂದಿದ್ದ ಚಟ್ನಿಪುಡಿ ಮುಗಿದು ಮೂರುದಿನ ಆಯ್ತು. ಊರಿಗೆ ತುರ್ತುಕಾಗದವನ್ನು ವಿಮಾನದ ಮೂಲಕ ಕಳಿಸೀನಿ. ಜ್ಯೂರಿಕ್ ಇಗೆ ಇಂತಹ ತೇದಿಗಳಲ್ಲಿ, ರೋಮ್‌ಇಗೆ ಈ ಈ ತಾರೀಖಿನಲ್ಲಿ ತಲಪುವ ಹಾಗೆ ಆದಷ್ಟು ಚಟ್ನಿಪುಡಿ ಕಳಿಸಿ, ಮರೆಯದೆ ಕಳಿಸಿ ಅಂತ. ಜ್ಯೂರಿಕ್‌ನಲ್ಲಿ ದಿನಾಲೂ ಅಂಚೇಕಚೇರಿಗೆ ಹೋದೆ. ಏನೂ ಬರಲಿಲ್ಲ. ಇಲ್ಲಾದರೂ ಬಂದರೆ, ಇನ್ನೆರಡು ದಿನ ಜೀವ ಹಿಡಕೊಂಡು ಇರಬಹುದು. ನಾಲಿಗೆ ಮೇಲೆಲ್ಲಾ ದೋಷಕಟ್ಟಿದ ಹಾಗಾಗಿದೆ. ಬೇಗ ಚಟ್ನಿಪುಡಿ ಬರದೆ ಇದ್ದರೆ. ಈ ಹಾಳು ಊಟತಿಂಡಿ ಮಾಡಲೇಬೇಕಾದರೆ ಘಟ ಇಲ್ಲೇ ಬಿದ್ದುಹೋಗಬಹುದು ಎನ್ನಿಸುತ್ತೆ" ಎಂದ.

"ಅಯ್ಯೋ ಪಾಪ! ಹಾಗೇನೋ? ನಿನ್ನ ಇಷ್ಟಾರ್ಥ ಈಡೇರಲಿ. ನಿನ್ನ ಸಂಗಾನೇ ಇರ್ತೀನಿ. ಚಟ್ನಿಪುಡಿ ಬಂತು ಅಂತ ನನ್ನ ಸಂಗ ಬಿಡಬೇಡ" ಎಂದು ಅಂಗಲಾಚಿಕೊಂಡೆ.

ಆ ಕಾರಂಜಿಯ ಬಳಿ ಇದ್ದ ಚರ್ಚಿನ ಗಡಿಯಾರ ಹತ್ತು ಬಡಿಯಿತು. ನಾಲ್ವರೂ ಹೋಟಲಿಗೆ ಹಿಂತಿರುಗಿದೆವು. ಅವರನ್ನ ಇವರನ್ನ ಕೇಳಿ ರಸ್ತೆ ತಿಳಿದುಕೊಂಡು ಹಿಂತಿರುಗಲು ಅರ್ಧ ತಾಸಾಗಿತ್ತು.

ಮಲಗುವ ಮುನ್ನ ಅಂಗಿ ಬಿಚ್ಚಿಡುವಾಗ ನೋಡಿಕೊಂಡೆ. ನನ್ನ ಪರ್ಸ್ ಸುರಕ್ಷಿತವಾಗಿತ್ತು. ನೆಪೋಲಿಯನ್ ಹಸ್ತ ಅದನ್ನು ಕಾಪಾಡಿತ್ತು. ಆದರೆ ನನ್ನ ಎಡ ಮೇಲ್ ಜೇಬಿನಲ್ಲಿದ್ದ ರೇಷ್ಮೆ ಕರವಸ್ತ್ರ ಮತ್ತು ಪಾರ್ಕರ್ ಪೆನ್ ಎರಡೂ ಮಾಯವಾಗಿದ್ದುವು.

ಭಾರಿಮೀಸೆಯ ಗುಂಗುರು ಕೂದಲಿನ "ಇಂಡಿಯಾನೋ" ಎಂದ ಆ ಇಟಾಲಿಯನ್ ತಬ್ಬಿಕೊಂಡು ಮುತ್ತುಕೊಟ್ಟ ನೆನಪಾಯಿತು. ಗಂಡು ಗಂಡಸಿಗೆ ಮುತ್ತು ಕೊಟ್ಟರೂ ಜೇಬು ಖಾಲಿಯಾಗುತ್ತೆ ಎಂದು ಆಗಲೇ ನನಗೆ ತಿಳಿದಿದ್ದು.

ಮಲಗುವ ಮುಂಚೆ, ಬಾಗಿಲು ಕಿಟಕಿಗಳು ಭದ್ರವಾಗಿವೆ ಎಂದು ಖಾತರಿ ಮಾಡಿಕೊಳ್ಳುವುದು ಅಭ್ಯಾಸ. ಬಾಗಿಲು ಜಡಿದಿತ್ತು. ಕಿಟಕಿಗಳು ತೆರೆದಿದ್ದುವು ಕಂಬಿಗಳಿದ್ದಿಲ್ಲ. ಆದರೆ ಐದನೆ ಅಂತಸ್ತಿನಲ್ಲಿತ್ತು, ನನ್ನ ಕೊಠಡಿ. ಯಾವ ಕಳ್ಳ ಇಷ್ಟು ಎತ್ತರ ಹತ್ತಿ ಬರುತ್ತಾನೆ ಎಂದು ಧೈರ್ಯ ಬಂತು, ಆದರೂ ಅಭ್ಯಾಸ ಬಲದಮೇಲೆ ಕಿಟಕಿಯಾಚೆ ಕಣ್ಣುಹಾಯಿಸಿದೆ. ಅಲ್ಲೊಂದು ಪುಟ್ಟಮೊಗಸಾಲೆ ಇತ್ತು. ಹಳೆ ಅರಮನೆಗಳ ಮಹಡಿ ಕಿಟಕಿಗಳಿಗೆ ಇರುಲ್ಲವೇ? ಆ ತರಹ. ಪಕ್ಕದ ಕೊಠಡಿಯ ಮೊಗಸಾಲೆಯೂ ಈ ಮೊಗಸಾಲೆಯೂ ಹೆಜ್ಜೆ ಅಂತರ ಮಾತ್ರ ದೂರವಾಗಿದ್ದುವು. ಪಕ್ಕದ ಕೊಠಡಿಯಲ್ಲಿ ಕಳ್ಳ ಇದ್ದರೆ? ಕಳ್ಳಿ ಇದ್ದರೆ ಇನ್ನೂ ತಾಪತ್ರಯ ಎಂದು ತೋಚಿತು. ಬೇಗ ಕಿಟಕಿಯನ್ನು ಮುಚ್ಚಿದೆ. ಹಳೇ ಕಾಲದಲ್ಲಿ ಅರಮನೆಯ ವಾತಾವರಣದಲ್ಲಿ ಈ ಸೌಕರ್ಯಗಳಿರಬೇಕಾದದ್ದು ನ್ಯಾಯ. ಆದರೆ ಈಗ? ಅದೂ ಮುದುಕನಿಗೆ?

ಗಾಳಿ ಇಲ್ಲದೇ ಇದ್ದರೂ, ಸುರಕ್ಷಿತವಾಗಿದ್ದರೆ ಸಾಕು ಎಂದು ರಾಮಸ್ಕಂಧಂ ಹೇಳಿ ಮಲಗಿದ.

ಮಾರನೆಯ ಬೆಳಿಗ್ಗೆ ಬೇಗ ಹೊರಡಬೇಕಾಗಿತ್ತು. ಅದಕ್ಕೇ ಏನನ್ನೂ ಓದಲು ತೊಡಗಲಿಲ್ಲ.

■

# ವಿಯನ್ನಾ ಬೈ ನೈಟ್

ರಾತ್ರಿ ೮ ಗಂಟೆಗೆ ಊಟದ ಶಾಸ್ತ್ರವನ್ನು ಮುಗಿಸಿ ವಿಯನ್ನಾದ ವೆಸ್ಟ್ ಮಿನಿಸ್ಟರ್ ಹೊಟೇಲಿನ ಅಂಗಳದಲ್ಲಿ ಕಾದಿದ್ದೆ, ಸುಮಾರು ಒಂಭತ್ತರ ಹೊತ್ತಿಗೆ ವಿಯನ್ನಾ ಬೈ ನೈಟ್ ತೋರಿಸುವ ಬಸ್ ಬಂತು. ಅಂದು ಬೆಳಿಗ್ಗೆಯೇ ನಮ್ಮ ಹೋಟೇಲಿನಲ್ಲಿ ನಾಲ್ಕು ಜನ ಈ ಬಸ್ಸಿನಲ್ಲಿ ರಾತ್ರಿ ಪ್ರವಾಸಕ್ಕೆ, ಪ್ರದರ್ಶನಗಳಿಗೆ ಟಿಕೆಟ್ ಕೊಂಡಿದ್ದೆವು. ನಾಲ್ವರೂ ಹೋಗಿ ಬಸ್ಸಿನಲ್ಲಿ ಕೂತೆವು. ಧಗ ಧಗ ದೀಪಗಳುರಿಯುತ್ತಿದ್ದ ದೊಡ್ಡ ದೊಡ್ಡ ರಸ್ತೆಗಳಲ್ಲಿ ಬಸ್ ಹೋಗಿ ಕಡೆಗೊಂದು ಅಡ್ಡ ರಸ್ತೆಯಲ್ಲಿ ತಿರುಗಿ ಒಂದು ಕಡೆ ನಿಂತಿತು. ಬಸ್ಸಿನಲ್ಲಿದ್ದ ನಾಲ್ವರು ಅಮೆರಿಕನ್ನರು. ನಾಲ್ವರು ನಾವು ಭಾರತೀಯರು, ಎಂಟು ಜನ ಇಂಗ್ಲಿಷಿನವರು, ಮಿಕ್ಕವರೆಲ್ಲ ಯೂರೋಪಿಯನ್ನರು. ಬುಡ ಕಟ್ಟು ಸುಲಭವಾಗಿ ಗೊತ್ತಾಗಲಿಲ್ಲ. ಎಲ್ಲರೂ ಇಳಿದೆವು ಮಾರ್ಗದರ್ಶಿಯನ್ನು ಹಿಂಬಾಲಿಸಿದೆವು.

ಸಂದಿಯಲ್ಲಿದ್ದ ಒಂದು ಬಾಗಿಲು ತಟ್ಟಿದ, ಬಾಗಿಲು ತೆರೆಯಿತು. ಓಣಿಯಂತಿದ್ದ ವರಾಂಡಾ ಕಾಣಿಸಿತು. ಅದರಲ್ಲಿ ನಡೆದು ಸುಮಾರು ದೂರ ಹೋದಾಗ ದೊಡ್ಡ ಅಂಗಳ ಕಾಣಿಸಿತು. ನಾಲ್ವರೂ ನಾವು ಅಲ್ಲಿದ್ದ ಮೇಜೊಂದರ ಬಳಿ ಕುಳಿತೆವು.

ಇಬ್ಬರು ಹುಡುಗಿಯರು ಮತ್ತೊಬ್ಬ ಬಂದರು. ನಮ್ಮೂರಿನಲ್ಲಿ ರಸ್ತೆ ಪಕ್ಕದ ಮೈದಾನದಲ್ಲಿ ದೊಂಬರಾಟ ಕಟ್ಟುಲ್ಲವೇ? ಅದೇ ತರಹ ಆ ಮೂವರೂ ದೊಂಬರಾಟ ಆಡಿದರು. ಹಿಂದು ಹಿಂದಕ್ಕೆ ವರ್ತುಳಾಕಾರದಲ್ಲಿ ಇದ್ದಲ್ಲೇ ಪಲ್ಟಿ ಹೊಡೆಯುವುದು, ಮುಂದು ಮುಂದಕ್ಕೆ ಅದೇ ತರಹ ಪಲ್ಟಿ ಹೊಡೆಯುವುದು. ಯುವಕನ ಎರಡು ತೋಳುಗಳ ಮೇಲೆ ಹುಡುಗಿಯರು ನಿಂತುಕೊಂಡು, ಆ ಹುಡುಗ ಎದ್ದು ನಿಂತಮೇಲೆ ಅಲ್ಲಿಂದ ಕೆಳಕ್ಕೆ ಧುಮುಕುವುದು. ದೇಶಾವರದ ನಗೆ ಪ್ರದರ್ಶಿಸುವುದು. ಇತ್ಯಾದಿ ಐದು ನಿಮಿಷ ಆಡಿದರು. ಪ್ರಾಯಶಃ ವಿಯನ್ನಾದಲ್ಲಿ ಬಹಿರಂಗ ಸ್ಥಳದಲ್ಲಿ ಬೆಳಿಗ್ಗೆ ಆಡಲು ಅವಕಾಶವಿಲ್ಲವೇನೋ? ಆದುದರಿಂದ ರಾತ್ರಿ ಹೀಗೆ ಆಟ ಕಟ್ಟಿ ಕಟ್ಟಿ ಪರದೇಶದಿಂದ ಬಂದವರಿಂದ ಹಣ ಸಂಪಾದಿಸಿ, ಹೊಟ್ಟೆ ಹೊರೆದುಕೊಳ್ಳುತ್ತಾರೇನೋ ಎಂದುಕೊಂಡೆ.

ಅದಾದಮೇಲೆ ಐದು ನಿಮಿಷ ಸಂಗೀತ. ಸಾಮೂಹಿಕ ನೃತ್ಯ. ಅಂದರೆ ಅಲ್ಲಿಗೆ ಬಂದಿದ್ದವರು ಜತೆ ಕೂಡಿಸಿಕೊಂಡು ಕುಣಿಯುವುದು.

ಅನಂತರ ಸುಮಾರು ತೂಕವಿದ್ದ ಹೆಣ್ಣೊಂದು ಬಂದು ನೃತ್ಯ ಮಾಡಿತು. ತುಂಬಾ ಎಳಸಾದ ಮುಖ ೧೪-೧೬ರ ಪ್ರಾಯ. ಆದರೂ ಮೈ ತುಂಬಿಕೊಂಡಿತ್ತು. ಸೊಳ್ಳೆ ಪರದೇಲಿ ಉಡುಪನ್ನು ಹೊಲಿಸಿಕೊಂಡು ಈ ಹೆಣ್ಣು ಕುಣಿಯುತ್ತಿತ್ತು. ನೃತ್ಯವನ್ನು ನೋಡಿದರೋ, ಅಥವಾ ಈ ಬೂಸಕ್ಕನ್ನು

ನೋಡುತ್ತಿದ್ದರೋ, ಅಲ್ಲಿದ್ದ ಜನ, ಹೇಳಬರುವಂತಿಲ್ಲ. ಅಂಗ ವಿನ್ಯಾಸವಾಗಲಿ, ಕಾಲು ಕುಣಿತವಾಗಲಿ, ಶ್ರೇಷ್ಠತರದ್ದಲ್ಲ.

ಆಮೇಲೆ ತಿರುಗಿ ಸಾಮೂಹಿಕ ನೃತ್ಯ, ಸುಗ್ಗಿ ಕುಣಿತದ ತರಹ ಬಂದಿದ್ದವರೆಲ್ಲರೂ ಭಾಗಿಗಳಾಗಿದ್ದರು.

ಅದಾದ ಮೇಲೆ ಕಾಲಿಗೆ ತಾಳ, ಕೈಯಲ್ಲಿ ಕಂಜಿರ, ಬಾಯಲ್ಲಿ ತುತ್ತೂರಿ, ಸೊಂಟಕ್ಕೆ ಗಿಲಗಿಲಿ ಕಟ್ಟಿಕೊಂಡಿದ್ದವನೊಬ್ಬ ಬಂದು, ಬಾಂಡ್ ಬಾರಿಸಿದ. ಹತ್ತೂ ಜನ ಒಟ್ಟಿಗೆ ಮಾಡುವ ಕೊಲೆಯನ್ನು ಇವನೊಬ್ಬನೇ ಮಾಡುತ್ತಿದ್ದ. ಮಂದಿ ಚಪ್ಪಾಳೆ ತಟ್ಟಿತು. ಭೇಷ್ ಅಂದಿತು. ನಾನೂ ಗುಟುಕು ನುಂಗಿದೆ.

ಅನಂತರ ಮಾರ್ಗದರ್ಶಿ ಎದ್ದ, ಹೊರ ಹೊರಟ. ಕುರಿ ಕುರಿಯ ಹಿಂದೆಮುಂದೆ ಹೋಗುವಂತೆ ನಾವೂ ಹಿಂಬಾಲಿಸಿದೆವು. ಛೇ! ಛೇ ಹಾಗನ್ನಬಾರದೇನೋ? ಬಿಳಿ ಕುರಿಯ ಹಿಂದೆ ಕರಿ ಮಂದೆ ಹೋಗುವಂತೆ; ಅನ್ನಬೇಕಾಗಿತ್ತು, ಹೋಗಿ ಬಸ್ಸಿನಲ್ಲಿ ಕುಳಿತೆವು. ತಿರುಗಿ ಆ ಬಸ್ಸು, ದೊಡ್ಡರಸ್ತೆ ಅಡ್ಡರಸ್ತೆ ಗಿಡ್ಡ ರಸ್ತೆಗಳನ್ನು ಹಾದು ಒಂದು ಓಣಿಯ ಪಕ್ಕದಲ್ಲಿ ನಿಂತಿತು.

ತಿರುಗಿ ಎಲ್ಲರೂ ಇಳಿದು ತುಸುದೂರ ನಡೆದು ಹೋಗಿ ಒಂದು ಬಾಗಿಲ ಬಳಿ ನಿಂತೆವು, ಬಾಗಿಲು ತೆರೆಯಿತು. ಎದುರಿಗೆ ಎರಡಡಿ ಅಗಲವಿರುವ ಮೆಟ್ಟಿಲುಗಳು. ಇಪ್ಪತ್ತು ಕಡಿದಾದ ಮೆಟ್ಟಿಲುಗಳನ್ನು ಹತ್ತಿ ಎಡಕ್ಕೆ ತಿರುಗಿ, ತಿರುಗಿ ಮೆಟ್ಟಲುಗಳನ್ನೇ ಹತ್ತಿ ಕಡೆಗೆ ಒಂದು ಅಟ್ಟ ಸೇರಿದೆವು. ಅಲ್ಲಿ ನಮಗಾಗಿ ಮೀಸಲಿದ್ದ ಕುರ್ಚಿಗಳ ಮೇಲೆ ಒತ್ತಡವಾಗಿ ಕುಳಿತೆವು. ಬಲಗಡೆ ವಾರೆಯಾಗಿ ಎದುರಿಗೆ ರಂಗ ಮಂಟಪ. ಬಲಗಡೆ ಹಳ್ಳದಲ್ಲಿ ಪ್ರೇಕ್ಷಕರೆಲ್ಲ ಕುಳಿತಿರುವ ದೃಶ್ಯ, ೨೦೦-೩೦೦ ಮಂದಿ ಕುಳಿತಿದ್ದಿರಬಹುದು.

ಪ್ರದರ್ಶನ ಶುರುವಾಗಿತ್ತು. ಒಂದು ಹೆಣ್ಣು ಏಳು ಚೆಂಡುಗಳನ್ನು ದೊಂಬರ ತರಹ ಕುಣಿಸುತ್ತಿದ್ದಳು. ಎರಡೂ ಕೈಗಳಲ್ಲಿ ಎರಡು ಚೆಂಡುಗಳು. ಎಡಗೈಯಿಂದ ಒಂದು ಚೆಂಡನ್ನು ಚಿಮ್ಮುವಳು. ಅದು ಮೇಲಕ್ಕೆ ಹೋದಾಗ ಬಲಗೈಯಿನ ಚೆಂಡನ್ನು ಎಡಗೈಗೆ ಎಸೆಯುವಳು. ಮೇಲಿಂದ ಇಳಿಯುತ್ತಿದ್ದ ಚೆಂಡನ್ನು ಬಲಗೈಯಲ್ಲಿ ಹಿಡಿಯುವಳು. ಚೆಂಡುಗಳೆಲ್ಲಾ ದೊಡ್ಡ ಸೊನ್ನೆಯ ಸುತ್ತ ಸುತ್ತುತ್ತಿದ್ದಂತೆ ಭಾಸವಾಗುತ್ತಿತ್ತು. ಅವಳ ಕೈ ಚಳಕ ಅಷ್ಟು ಚೆನ್ನು, ನಮ್ಮೂರ ಸರ್ಕಸುಗಳಲ್ಲಿ ಈ ಚಮತ್ಕಾರವನ್ನು ಎಷ್ಟೋ ಬಾರಿ ನೋಡಿದ್ದೇನೆ. ಇದೇನು ಮಹಾ ಎಂದುಕೊಂಡೆ. ನನ್ನ ಪಕ್ಕದಲ್ಲಿ ಕುಳಿತಿದ್ದವ ಅಮೆರಿಕನ್ ಮುದುಕ ಒಬ್ಬ. ಮೊಣಕೈಯಿಂದ ನನ್ನನ್ನು ತಿವಿದ. ಎಷ್ಟು ಚೆನ್ನಾಗಿ ಆಡ್ತಾಳೆ ನೋಡಿ. ಐದೇ ಚೆಂಡುಗಳಲ್ಲಿ ಆಕೆ ಆಡ್ತಾ ಇರೋದು. ಆದರೆ ನೋಡುವವರಿಗೆ ಏಳರ ತರಹ ಕಾಣಿಸುತ್ತೆ" ಎಂದ. ತಿರುಗಿ ನೋಡಿದೆ. ದಿಟ-ಅವನು ಹೇಳಿದ್ದು. ಐದೇ ಚೆಂಡುಗಳು ತಿರುಗುತ್ತಾ ಇದ್ದುವು. ಒಕ್ಕೆರಡು ಎದೆಯ ಮೇಲೆ ಇದ್ದಲ್ಲೇ ಇದ್ದುವು. ಆದರೂ ಕೈ ಚಳಕದ ವೇಗದಲ್ಲಿ ವ್ಯತ್ಯಾಸ ಗೊತ್ತಾಗುತ್ತಲೇ ಇರಲಿಲ್ಲ.

ಅದಾದಮೇಲೆ ಇಬ್ಬರು ನರ್ತಕರು ಬಂದರು. ಸದಾರಮೆ ನಾಟಕದ ಕಳ್ಳನ ತರಹ ಉಡುಪು ಧರಿಸಿದ್ದ ಯುವಕ ಒಬ್ಬ. ಅದೇ ರೀತಿ ಪೈಜಾಮಾ ಒತ್ತಂಗಿ ಧರಿಸಿದ್ದ ಯುವತಿ ಒಬ್ಬಳು. ಅಪಾಚಿ ಡಾನ್ಸ್ ಅಂತ ಪಕ್ಕದಲ್ಲಿದ್ದವ ತಿವಿಯುತ್ತಾ ಹೇಳಿದ. ದಿಟವಾದ ವ್ಯಾಯಾಮ ಪ್ರದರ್ಶನವೇ ಅದು.

ಅವಳ ಬಲಗೈ ಹಿಡಿದು ತನ್ನ ಸುತ್ತ ಗಿರಿಗಟ್ಲೆ ಸುತ್ತುವ ಹಾಗೆ ಆಕೇನ ತಿರುಗಿಸಿದ. ಹಿನ್ನೆಲೆಯ ಹಿತವಾದ ಸಂಗೀತ. ನಂತರ ಅವಳು ನಿಂತಿದ್ದಳು. ಏನು ಬಂತೋ ಅವನಿಗೆ. ಜಟ್ಟಂತ ಹೋಗಿ ಅವಳ ಕೆನ್ನೆಗೆ ಲಪ್ಪಂತ ಹೊಡೆದ. ತತ್ತರಿಸುತ್ತ ಆಕೆ ಹಿಂದಕ್ಕೆ ಹೋದಳು. ಕುಣಿಯುವ ಹೆಜ್ಜೆಗಳನ್ನು ಹಾಕುತ್ತಲೇ, ಸಂಗೀತದ ಹಿನ್ನೆಲೆಗೆ ಸರಿ ತಾಳ ಹಾಕುತ್ತಲೇ ತತ್ತರಿಸಿದಳು. ದೂರ ಹೋಗಿ ನಿಂತಳು. ಸುಧಾರಿಸಿಕೊಂಡಳು. ತಿರುಗಿ ಬಂದು ಸೇಡು ತೀರಿಸಿಕೊಳ್ಳಲು ಇವನನ್ನು ಹೊಡೆಯುಕ್ಕೆ ಅಂಗೈ ಎತ್ತಿ ಬಂದಳು. ಹತ್ತಿರ ಬಂದಳು. ಸರಕ್ಕಂತ ಅವಳ ತೋಳುಗಳನ್ನು ಹಿಡಿದು ತನ್ನ ತಲೆ ಮೇಲಕ್ಕೆ ಎತ್ತಿದ. ಅಲ್ಲಿ ಆಕೆಯನ್ನು ಅಪ್ಪಾಲೆ ತಿಪ್ಪಾಲೆ ತಿರುಗಿಸಿದ. ಸುಮಾರು ವಜನ್ ಇದ್ದಳು ಆಕಿ. ಏನಿಲ್ಲ ಅಂದರೂ ೪೦-೫೦ ಕಿಲೋಗ್ರಾಂ. ಲೀಲಾಜಾಲವಾಗಿ ಆಕೇನ ಎತ್ತಿ ತಿರುಗಿಸುತ್ತಿದ್ದ. ಇವನ ತೂಕ ಸುಮಾರು ೭೦ ಕಿಲೊ ಇದ್ದಿರಬಹುದು. ಪರವಾಗಿಲ್ಲ ತೆಳ್ಳಗಿದ್ದರೂ ವಸ್ತಾದಿಯಾಗಿದಾನೆ ಎನಿಸಿತು.

ಇದೇ ರೀತಿ ವ್ಯಾಯಾಮದ ಚೆಕ್ಕಂದ ಆಡಿದರು ಸ್ವಲ್ಪ ಹೊತ್ತು. ಸಂಗೀತದವರು ಅಲ್ವಿದಾಯಾ ತರಹ ಯಾವುದೋ ಮಟ್ಟನ್ನು ಬಾರಿಸಿದರು. ಏನು ಬಂತೋ ಆ ಕೃಶಾಂಗಿಗೆ, ಯಾವ ಆವೇಶ ಮೂಡಿತೋ. ಥಟ್ಟಂತ ಅವನನ್ನು ಅನಾಮತ್ತು ಎತ್ತಿಬಿಟ್ಟು ಹೆಗಲ ಮೇಲೆ ಹಾಕಿಕೊಂಡು ರಂಗದ ಪಕ್ಕಕ್ಕೆ ಜಗ್ಗು ಹಾಕುತ್ತಾ ಹೊರಟುಹೋದಳು.

ಆರು ವರ್ಷದ ಹುಡುಗನಾಗಿದ್ದಾಗ ನಮ್ಮಜ್ಜಿ, ಪಕ್ಕದ ಮನೆಯ ಮೂರು ವರ್ಷದ ಪಾತುವನ್ನು ಕಂಡು, “ಲೋ! ಹುಷಾರಾಗಿರೋ, ಬಲು ಚೂಟಿ ಪಾತು; ಗಂಡನ್ನ ಬುಟ್ಟೀಲಿ ಹಾಕ್ಕೊಂಡು, ಹೆಗಲ ಮೇಲೆ ಇರಿಸಿ, ಸಂತೆಗೆ ಹೋಗಿ ಮಾರಿಕೊಂಡು ಬಂದುಬಿಡುತ್ತಾಳೆ” ಅಂತ ಹೇಳುತ್ತಿದ್ದಳು. ಮೂರು ವರ್ಷದ ಪಾತು ಅಲ್ಲ ಈಕೆ. ೨೩ ಮೀರಿದ, ಮಾತು ಆಡದ ಮಹಿಳೆ. ಅವನು ಗಂಡನೋ ಅಲ್ಲವೋ ನನಗೆ ತಿಳಿಯದು. ಆದರೆ ಗಂಡಸು ಅಂತ ಖಚಿತವಾಗಿ ಸುಲಭವಾಗಿ ಗೊತ್ತಾಗಿತ್ತು. ಅವನನ್ನು ಅನಾಮತ್ತು ಎತ್ತಿ ಹೆಗಲ ಮೇಲೆ ಹಾಕಿಕೊಂಡು ಹೋದ ಜೋರು ನೋಡಿದರೆ, ನೇರ ಸಂತೆಗೆ ಹೋಗಿ, ಅಜ್ಜಿ ಹೇಳಿದ ಹಾಗೆ ಮಾರಿಕೊಂಡು ಬರುತ್ತಾಳೇನೋ ಅಂದುಕೊಂಡೆ.

ರಂಗಮಂಟಪದ ಮೇಲೆ ಹಂಟರ್‌ವಾಲಿಯೊಬ್ಬಳು ಬಂದಳು. ಷಿಕಾರಿ ಗಂಡುಗಳು ಸಾಮಾನ್ಯವಾಗಿ ಧರಿಸುವ ತುಸು ಬಿಗಿಯಾದ ಜೋಧ್‌ಪುರ್ ಷರಾಯಿಯನ್ನು ತೊಟ್ಟಿದ್ದಳು. ನಾಲ್ಕು ಜೋಬುಗಳಿರುವ ಗಾಥಾಬಟ್ಟೆಯ ಅಂಗಿಯನ್ನು ಹಾಕಿಕೊಂಡಿದ್ದಳು. ಅಂಗಿಯ ಮೇಲ್ಜೇಬುಗಳೆರಡೂ ತುಂಬಿಕೊಂಡಿದ್ದವು. ವಾರಣವಾಗಿ ತುಂಬಿಕೊಂಡಿದ್ದುವು. ಆದುದರಿಂದಲೇ ಹಂಟರ್‌ವಾಲಿ ಇವಳು, ಹಂಟರ್‌ವಾಲ್ ಅಲ್ಲ ಅಂತ ಖಂಡಿತವಾದುದು. ತಲೆಗೆ ಬಿಗಿಯಾದ ಟೊಪ್ಪಿ ಹಾಕಿಕೊಂಡಿದ್ದಳು. ಟಿಕ್ ಟಿಕ್ ಶಬ್ದ ಮಾಡುವ ಬೂಡ್ಸು, ಉಡಿಗೆಯನ್ನು ಸಂಪೂರ್ಣಗೊಳಿಸಿತ್ತು. ಕೈಯಲ್ಲೊಂದು ಹಂಟರ್ ಚಾವುಟಿ ಹಿಡಿದಿದ್ದಳು. ರಂಗದ ಮೇಲೆ ಅತ್ತಿಂದ ಇತ್ತ ಓಡಾಡುವಾಗ, ಆ ಚಾಟಿಯನ್ನು ಲಟ್ ಪಟ್ ಅಂತ ನುಡಿಸುತ್ತಿದ್ದಳು. ಹಿನ್ನೆಲೆಯ ಸಂಗೀತದ ತಾಳಕ್ಕೆ ಸರಿಯಾಗಿ ಚಾಟಿ ನುಡಿಸುತ್ತಿದ್ದಳು.

ರಂಗಮಂಟಪದ ಬಲ ಪಕ್ಕದತ್ತ ಒಮ್ಮೆ ನೋಡಿದಳು. ಬೇಟೆಯ ಮೃಗ ಅಲ್ಲಿ ಎಲ್ಲಾದರೂ ಹುದುಗಿಕೊಂಡಿರಬಹುದೋ ಅಂತ. ಸಪ್ಪಳದೊಡನೆ ಕಳ್ಳ ಹೆಜ್ಜೆ ಹಾಕುತ್ತ, ಕಣ್ಣಿನ ಮೇಲೆ ಅಂಗೈ

ನೆರಳು ಹಾಕಿಕೊಂಡು ನಡೆದಳು. ಚಾಟಿಯಿಂದ ಒಮ್ಮೆ "ಲಟ್" ಮಾಡಿದಳು. ಈ ಶಬ್ದಕ್ಕೆ ವನ್ಯಮೃಗವಿದ್ದರೆ, ಹೊರಗೆ ಬರುತ್ತಿತ್ತು ಎಂದವಳ ಸಹಜವಾದ ಎಣಿಕೆ. ಆ ಪಕ್ಕದಿಂದ ಯಾವ ಮೃಗವೂ ಬರಲಿಲ್ಲ. ಈ ಕಡೆ ಸರಿದಳು.

ಎಡ ಪಕ್ಕದತ್ತ ಇಣಿಕಿ ನೋಡಿದಳು. ಅಲ್ಲೇನೋ ಹುದುಗಿತ್ತೇನೋ? ಮೆಲ್ಲ ಮೆಲ್ಲಗೆ ಅತ್ತೆ ಮನೆಗೆ ಮೊದಲ ಬಾರಿ ಹೋಗುವ ಹಳೇಕಾಲದ ಸೊಸೆಯಂತೆ ಕಾಲೆಳೆದುಕೊಂಡು ಹೋದಳು. ಅಲ್ಲಿ ಇದ್ದುದು ಅನುಮಾನಾಸ್ಪದವಾಗಿರಬೇಕು ಥಟ್ಟಂತ ನಿಮಿರಿ ನಿಂತಳು. ಎಡಗೈಯನ್ನು ಎಡಸೊಂಟದಮೇಲೆ ಇರಿಸಿದಳು. ಬಲಗೈಯಲ್ಲಿದ್ದ ಚಾಟಿಯನ್ನು "ಲಟ್" ಅಂತ ಬಾರಿಸಿದಳು. ರಂಗ ಮಂಟಪದ ಎಡ ಪಕ್ಕದಲ್ಲೂ ವನ್ಯ ಮೃಗವು ಹುದುಗಿಕೊಂಡಿರಲಿಲ್ಲ. ಬೇಟೆ ಮಾಯವಾಗಿದೆ ಎಂದು ಖಿನ್ನಳಾಗಿ ರಂಗಮಂಟಪದ ಮಧ್ಯಕ್ಕೆ ಚಾಟಿ ನುಡಿಸುತ್ತಲೇ ಬಂದಳು. ಬಂದು ನಿಂತಳು. ಚಾಟಿ ನುಡಿಸುವುದನ್ನು ನಿಲ್ಲಿಸಿ ಬೂಡ್ಸಿನಿಂದ ತಾಳ ಹಾಕಿದಳು. ಶತಪಥ ಗಂಡು ಹೆಜ್ಜೆ ಹಾಕಿದಳು. ತಿರುಗಿ ನಿಂತಳು.

ನಂತರ ರಂಗಮಂಟಪದ ಮಧ್ಯೆ ನಿಂತು ನೆಟ್ಟಗೆ ಮುಂದಕ್ಕೆ ನೋಡಿದಳು. ಮುಖ ಮಂದಸ್ಮಿತವಾಯಿತು. ಟ್ಯೂಬ್‌ಲೈಟಿನ ಸ್ವಿಚ್ ಹಾಕಿದ ಮೇಲೆ, ಎಷ್ಟೋ ಹೊತ್ತು ಅದಾಗ ಕಣ್ಣು ಕಣ್ಣು ಮಿಟಿಕಿಸಿ ಆಮೇಲೆ ದೀಪ ಹೊತ್ತಿಕೊಳ್ಳಲ್ಲವೆ? ಅದೇ ತರಹ ಹಂಟರವಾಲಿಯೂ ಎದುರಿಗೆ ನೋಡಿ ಪ್ರೇಕ್ಷಕರನ್ನೆಲ್ಲಾ ಕಂಡು, ಕಣ್ಣು ಕಣ್ಣು ಮಿಟಿಕಿಸಿ, ನಂತರ ಕಿರಿನಗೆಯನ್ನು ಹೂಡಿದಳು. ತುಟಿಯ ಎರಡೂ ತುದಿಗಳು ಕಿವಿಯತ್ತ ವಾಲಿದವು. ಎರಡೂ ಕೆನ್ನೆಗಳಲ್ಲಿ ಪುಟಾಣಿಗುಣಿಗಳು ಇಣುಕಿದುವು. ಕಮಲದಂತಿದ್ದ ಕಣ್ಣು, ಮೀನಿನ ಕಣ್ಣುಗಳಂತಾಯಿತು. ಮೈಯ್ಯೂ ಉಬ್ಬಿದಂತಾಯಿತು. ಕಾಲುಗಳೂ ಸಡಿಲಗೊಂಡುವು.

ಅಷ್ಟು ಹೊತ್ತೂ ವನ್ಯಮೃಗಕ್ಕೆ ಬೇಟೆಹೂಡಿ ಸೋತ ಬೇಸರದಿಂದಲೋ ಅಥವಾ ಹಾಗೆ ಭೇಟೆಯಾಡಿದ ಆಯಾಸದಿಂದಲೋ ಆಕೆಗೆ ಶಕೆಯಾಗಿದ್ದಿರಬೇಕು ಹಾಗೂ ಎದುರಿಗಿದ್ದ ವನ್ಯ ಮೃಗಗಳ ಶಿಕಾರಿಗೆ, ಚಾಟಿಯ ಅಗತ್ಯ ಇಲ್ಲ ಎಂದು ಆಕೆ ತಿಳಿದುಕೊಂಡಳೋ ಏನೋ? ಅಥವಾ ಎದುರಿಗೆ ಕಂಡ ವನ್ಯ ಮೃಗಗಳ ಶಿಕಾರಿಯನ್ನು ಪ್ರಯಾಸಪಡದೆ ಮಾಡಬಹುದು ಎಂದುಕೊಂಡಳೇನೋ?

ಚಾಟಿಯನ್ನು ಒಂದು ಪಕ್ಕಕ್ಕೆ ಎಸೆದಳು. ರಂಗಮಂಟಪದ ಹಿಂಬದಿಯ ತುದಿಯಲ್ಲಿ ಅಜ್ಜಿಯೊಬ್ಬಳು ನಿಂತಿದ್ದಳು. ಕೈಕಯಿಗೆ ಮಂಥರೆ ಇದ್ದ ಹಾಗೆ. ಮಿಟಕಲಾಡಿ ಮೀನಾಕ್ಷೀಗೆ ರಂಗಜ್ಜಿ ಇದ್ದಹಾಗೆ, ಆಕೆ ಹಂಟರವಾಲಿಯ ರಕ್ಷಕಳಾಗಿದ್ದಳು. ಹಂಟರ್‌ವಾಲಿ ಎಸೆದ ಚಾಟಿಯನ್ನು ತೆಗೆದಿಟ್ಟುಕೊಂಡಳು. ಇದನ್ನು ಹಂಟರ್‌ವಾಲಿಯೂ ನೋಡಿದಳು. ಅಜ್ಜಿಯ ಮೇಲೆ ಕೋಪ ಬಂದಿತೇನೋ? ನಾನೂ ಇವಳ ಹಾಗೆ ಒಂದು ದಿವಸ ಆಗಿ ಬಿಡ್ತೀನಿ ಅಂತ ಭಯವೇ ಅಮರಿಕೊಂಡಿತೇನೋ? ಏನಾಯ್ತೋ ಪಾಪ! ಕೆರಳಿದಳು ಹಂಟರ್‌ವಾಲಿ.

ತಲೆಯಲ್ಲಿದ್ದ ಟೊಪ್ಪಿಯನ್ನು ಕಿತ್ತೆಸೆದಳು. ಭಗೀರಥ ಪ್ರಾರ್ಥಿಸಿದಾಗ ಗಂಗೆ ಮೇಲಿಂದ ರಭಸವಾಗಿ ಇಳಿಯುವಾಗ, ಈಶ್ವರ ನಿಂತು ಆಕೆಯ ಜೋರನ್ನೆಲ್ಲಾ ತನ್ನ ಜಟಾಜೂಟಗಳಲ್ಲಿ ಹುಟ್ಟಡಗಿಸಿ ಹಿಡಿದುಕೊಳ್ಳುವ ರವಿವರ್ಮನ ಚಿತ್ರವನ್ನು ನೋಡಿದ್ದೀರಾ? ಈಶ್ವರ ದೃಢವಾಗಿ

ನಿಂತಿದ್ದಾನೆ. ಜಡೆಗಳೆಲ್ಲವೂ ಕಾಳ ಕರಾಳವಾಗಿ, ಹೆಪ್ಪುಗಟ್ಟಿದ ಕತ್ತಲೆಯಂತೆ, ತಲೆಯಿಂದ ಗುಂಗುರುಗುಂಗರಾಗಿ ಇಳಿದು ನಿಂತಿವೆ.

ಹಂಟರ್‌ವಾಲಿಯ ರಂಗು ರಂಗಿನ ಗುಂಗುರು ಕೂದಲುಗಳೂ, ಶಿವನ ಜಟೆಯಂತೆ ಮುಖದ ಸುತ್ತಾ ಇಳಿದಾಡುತ್ತಿದ್ದುವು. ಇಷ್ಟು ಕೂದಲುಗಳನ್ನು ಆ ಪುಟಾಣಿ ಟೊಪ್ಪಿಯಲ್ಲಿ ದಬ್ಬಿಟ್ಟಿದ್ದಳಲ್ಲಾ! ಇಂತಹ ಚಾಣಾಕ್ಷಿ ಯಾರನ್ನೂ ಟೊಪ್ಪಿಯಲ್ಲಿ ಹಾಕಿ ಹಿಡಿಯುವ ಸಾಧ್ಯತೆ ಇದೆ ಎಂದೆನಿಸಿತು.

ಆ ಗುಂಗುರು ಕೂದಲುಗಳು ಕಿವಿಯೊಳಗೆ ಗುಂಯ್ ಮಾಡಿದುವೇನೋ? ಏನು ರಹಸ್ಯ ತಿಳಿಸಿದುವೋ? ಹಂಟರ್‌ವಾಲಿ ಕುಪಿತಳಾದಳು. ಅಂಗಿಯನ್ನು ಕಿತ್ತೆಸೆದಳು. ಅದೆಂತ ಅಂಗಿ ಅಂತ! ಗುಂಡಿಗಳೆಲ್ಲ ಇದ್ದಂತೆಯೇ ಇದ್ದವು. ಇವಳು ಒಂದು ಕಡೆ ಹಿಡಿದು ಕಿತ್ತಾಗ ಅಂಗಿಗೆ ಅಂಗಿಯೇ ಕಿತ್ತಂತೆ ಹೊರಬಂತು. ಮಕ್ಕಳ ಅಲಂಕಾರದ ಅಂಗಿಗಳಿಗೆ ಅಲಂಕಾರದ ಗುಂಡಿಗಳನ್ನು ಹಾಕಿರುಲ್ಲವೇ? ಹಾಗೆ ಈಕೆಯ ಅಂಗಿಗೂ ಕಾಣದ ಹಾಗೆ ಒತ್ತು ಗುಂಡಿಗಳನ್ನು ಹಾಕಿದ್ದಿರಬೇಕು. ಮೂಲೆಯಲ್ಲಿದ್ದ ಅಜ್ಜಿ ಬಂದು ಅಂಗಿಯನ್ನು ತೆಗೆದುಕೊಂಡು ವಾರಣವಾಗಿ ಮಡಿಸಿ ಹಿಂದಕ್ಕೆ ಹೋದಳು.

ಅದೇನು ಮೋಜು ಅಂತ! ಅಂಗಿಯನ್ನು ತೆಗೆದು ಎಸೆದಿದ್ದರೂ ಮೇಲಿನ ಎರಡು ಜೇಬುಗಳನ್ನು ತುಂಬಿಕೊಂಡಿದ್ದ ವಸ್ತುಗಳು ಅಲ್ಲಿಯೇ ಮೆರೆಯುತ್ತಿದ್ದುವು. ಇವಕ್ಕೂ ಎರಡು ಅಲಂಕಾರದ ಗುಂಡಿಗಳು. ಏಕಮುಖ ರುದ್ರಾಕ್ಷಿಗಳ ಹಾಗೆ ಆ ಗುಂಡಿಗಳು ರಚಿತವಾಗಿದ್ದುವು.

ಎದುರಿಗೆ ಕಂಡ ವನ್ಯ ಮೃಗಗಳನ್ನು ಮತ್ತೊಮ್ಮೆ ನೋಡಿದಳು. ಅಂಗೈ ನೆರಳನ್ನು ಹುಬ್ಬಿನ ಮೇಲೆ ಹಾಕುತ್ತಾ ನೋಡಿದಳು. ಏನೋ ತೆವಲು ಬಡಿದಿರಬೇಕು. ಎಡ ಸೊಂಟದ ಮೇಲಿದ್ದ ಕೈಯನ್ನು ಪಕ್ಕಕ್ಕೆ ಝಾಡಿಸಿದಳು. ಜೋಧ್‌ಪುರ್ ಷರಾಯಿಯ ಎಡ ಅರ್ಧ ಅನಾಮತ್ತಾಗಿ ಹರಿದು ಬಂತು. ಅರ್ಧನಾರೀ ನಗ್ನ ಮೂರುತಿ. ಸರಿ—ಇಷ್ಟು ಹೊತ್ತಿಗೆ ನೀವೆಣಿಸಿದಂತೆಯೇ—ಬಲ ಅರ್ಧದ ಷರಾಯಿಯೂ ಅಜ್ಜಿಯ ಕೈ ಸೇರಿತು.

ಅಷ್ಟು ಹೊತ್ತಿಗೆ ಆವೇಶ ಉಲ್ಬಣಕ್ಕೇರಿತ್ತು. ಆವೇಶ ಬಂದವರು ತೇರಿನ ಸುತ್ತ ಕುಣಿದಾಡುವುದಿಲ್ಲವೇ? ಹಾಗೆ ಹಂಟರವಾಲಿ ಹಾಕಿದ್ದೇ ಹೆಜ್ಜೆ. ಕುಣಿದಿದ್ದೇ ನಾಚು!

ಸುಸ್ತಾಯಿತೇನೋ ಪಾಪ! ರಂಗಮಂಟಪದ ಪಕ್ಕದಲ್ಲೇ ಉಯ್ಯಾಲೆಯೊಂದು ತೂಗು ಹಾಕಿತ್ತು. ಅದರ ಮೇಲೆ ಹೋಗಿ ಬಿದ್ದುಕೊಂಡಳು. ತೊಣಚಿ ಹೊಕ್ಕ ನಾಯಿಯ ಹಾಗೆ ಆಡಿದಳು. ನೀರಿನಿಂದ ಹೊರ ಬಂದ ಮೀನಿನ ತರಹ ಮಿಲಿಮಿಲಿ ಒದ್ದಾಡಿದಳು. ವನ್ಯ ಮೃಗ ಬೇಟೆಯಲ್ಲಿ ಸಿಗಲಿಲ್ಲ ಅಂತ ಹಾಗೆ ಒದ್ದಾಡಿದಳೋ, ಅಥವಾ ಸಿಕ್ಕಿತು ಅಂತ ಮುಲುಗಾಡಿದಳೋ ಭಗವಂತನಿಗೇ ಗೊತ್ತು. ನಮ್ಮ ದೇಶದ ಭರತನಾಟ್ಯದ ಮುದ್ರಾ ಸಂಕೇತಗಳು ಅವರಿಗೆ ಹೇಗೆ ಗೊತ್ತಾಗುವುದಿಲ್ಲವೋ ಹಾಗೆಯೇ ಅವರ ನಾಟ್ಯದ ಅಂತರಂಗ ಸರಿಯಾಗಿ ನನಗೆ ತಿಳಿಯಲಿಲ್ಲ. ಆದರೂ ಅವರ ಅಂತರಂಗ ಬಹಿರಂಗ ಎರಡೂ ಒಂದೆಯೇನೋ ಎನ್ನುವಷ್ಟು ಅನುಮಾನ ಬಂತು. ಎರಡರಲ್ಲೂ ಮುಚ್ಚಿಡುವ ವಸ್ತುವಾಗಲಿ ಇರಲಿಲ್ಲ.

ರಾತ್ರಿ ಹನ್ನೆರಡು ಗಂಟೆ ಬಡಿಯಿತು. ರಂಗಮಂಟಪದ ಹಿಂಬದಿಯಲ್ಲಿದ್ದ ದೊಡ್ಡ ಗಡಿಯಾರವು ಜಾಗಟೆ ಬಾರಿಸಿತ್ತು. ಒಂದೇ ಮುಳ್ಳುಗಡಿಯಾರದ ಮುಖದಲ್ಲಿ ನಿಂತಿದ್ದಂತೆ ಕಾಣಿಸಿತು.

ನಮ್ಮ ಮಂದೆಯ ಕುರುಬ ಎದ್ದು ಹೊರಟ. ಹುಷ್ ಅಂತ ಅವನು ಸಿಳ್ಳು ಹಾಕಬೇಕಾಗಿರಲಿಲ್ಲ. ಕುರಿಗಳ ಹಾಗೆ ಅವನ ಹಿಂದೆ ಮಂದೆಗೆ ಮಂದೆಯೇ ನಡೆಯಿತು. ಎಲ್ಲರೂ ಹೋಗಿ ಬಸ್ಸಿನಲ್ಲಿ ಕೂತೆವು. ಬಸ್ ಹೊರಟಿತು. ಸ್ವಲ್ಪದೂರ ಹೋದಮೇಲೆ, ರಾತ್ರಿಯಲ್ಲಿಯೂ ಭವ್ಯವಾಗಿ ಕಾಣಿಸುತ್ತಿದ್ದ ಅರಮನೆಯ ಮುಂದೆ ಬಸ್ ನಿಲ್ಲಿತು. ಅರಮನೆಯಲ್ಲಿ ಆ ರಾತ್ರಿ ದೀಪೋತ್ಸವವಿರಬೇಕು. ನಮ್ಮಲ್ಲಿ ದೀಪಾವಳಿ ಇದ್ದಹಾಗೆ ಎಂದುಕೊಂಡೆ. ಆದರೆ ಮಾರ್ಗದರ್ಶಕ ವಿವರಣೆಯಿತ್ತ:—ಆಗಿನ ಕಾಲದ ಅರಮನೆಯು ಅಲ್ಲಿ ಒಂದು ಬಟ್ಟಲು ಕಾಫಿ ಕುಡಿಯುವುದು, ಒಂದು ಮೋಜೆಂದೂ ಅದಕ್ಕಾಗಿ ಅಲ್ಲಿಗೆ ಹೋಗುತ್ತಿದ್ದೇವೆಂದೂ ತಿಳಿಸಿದ.

ನಿಜವಾಗಲೂ ಅದು ಅರಮನೆಯೇ! ಒಳ ಅಂಗಳದ ಹಜಾರದಲ್ಲಿ ನಾವು ನಾಲ್ವರೂ ಒಂದು ಮೇಜಿನ ಸುತ್ತ ಕುಳಿತೆವು. ನೂರು ಇನ್ನೂರು ಅಡಿ ಉದ್ದ ಅಗಲದ ಒಳ ಅಂಗಳ, ಸಣ್ಣ ಪುಟ್ಟ ಕಾರಂಜಿಗಳು. ಹುಲ್ಲುಗಾವಲುಗಳು. ಬಯಲುನಾಟ್ಯ ಮಂಟಪ, ಧಗಧಗಿಸುವ ವರ್ಣವರ್ಣದ ವಿದ್ಯುದ್ದೀಪಗಳು, ಅಂಗಳದ ಸುತ್ತಲೂ ಎತ್ತರವಾದ ಅಗಲವಾದ ಹಜಾರ. ಹಜಾರದಲ್ಲಿ ೨೦-೨೫ ಅಡಿ ಎತ್ತರದ ಅಮೃತಶಿಲೆಯ ದುಂಡು ಕಂಬಗಳು, ಅಣಿಯಾದ ಮೇಜುಗಳು, ಅಂದವಾದ ಕುರ್ಚಿಗಳು.

ಕೂತ ಸ್ವಲ್ಪ ಹೊತ್ತಿನಲ್ಲೇ ನಮ್ಮ ಮೇಜಿನ ಬಳಿಗೆ ಇಬ್ಬರು ಸಭ್ಯಸ್ಥರು ಬಂದರು. ಭಾರತೀಯರಾದ ನಮ್ಮ ಪರಿಚಯ ಮಾಡಿಕೊಳ್ಳಲು ಕುತೂಹಲದಿಂದ ಆ ದೇಶದವರು ಬರುತ್ತಿದ್ದಾರೆ ಅಂತ ಅಂದುಕೊಂಡೆ. ಲಕ್ಷಣವಾದ ಬೆಲೆ ಬಾಳುವ ರಾತ್ರಿ ಸಂಪ್ರದಾಯದ ಕರಿ ಬಾಲದ ಅಂಗಿ, ಷರಾಯಿ, ಬಿಳಿ ಬೊ ಧರಿಸಿದ್ದರು. ಹತ್ತಿರ ಬಂದ ಕೂಡಲೇ ಎದ್ದು ನಮಸ್ತೆ ಎಂದು ಸ್ವಾಗತಿಸೋಣ; ಭಾರತೀಯ ಶೈಲಿಯಲ್ಲಿ ಎಂದುಕೊಂಡೆ. ಆದರೆ ಬಂದ ಸಭ್ಯಸ್ಥರು, ನಾನು ಬಾಯಿ ಬಿಡುವ ಮೊದಲೇ ಕಾಫೀ? ಲಿಕ್ಯೂರ್? ಎಂದು ಕೇಳಿದರು. ಓಹೋ! ಈ ಹೋಟಲುಗಳ ಮಾಣಿಗಳು ಇವರು; ಕಾಫಿ ಕುಡೀತೀರೋ? ಅಥವಾ ಕುಡೀತೀರೋ? ಎಂದು ಕೇಳುತ್ತಿದ್ದಾರೆ ಎಂದು ಅರ್ಥವಾಯಿತು.

ಅಷ್ಟುಹೊತ್ತಿಗೆ ಹೋಟಲ್ ಮ್ಯಾನೇಜರ್ ಬಂದು ಆ ಮಾಣಿಗಳಿಗೆ ಏನನ್ನೋ ಹೇಳಿದ. ಜರ್ಮನ್ ಭಾಷೆಯಲ್ಲಿ ಘರ್‌ಘರ್ ಅಂತ ಹೇಳಿದ. "ಭಾರತದಿಂದ ಬಂದು ದುಡ್ಡು ಚೆಲ್ಲುವ ಮಹಾರಾಜರಿವರಲ್ಲ; ಅಲ್ಲಿಂದ ಬಂದಿರುವ-ಪಾಪರ್ ಆಸಾಮಿಗಳು. ಇವರು ಹೋಗುವಾಗ ಚಮಚ ತಟ್ಟೆ ಸರಿಯಾಗಿದೆಯೇ ಅಂತ ನೋಡಿಕೋ" ಅಂತ ಹುಷಾರು ಕೊಟ್ಟನೋ ಅಥವಾ ಇನ್ನೇನಾದರೂ ಹೇಳಿದನೋ ತಿಳಿಯಲಿಲ್ಲ. ಹೇಗೇ ಆಗಲಿ ಮಾಣಿಗಳಿಬ್ಬರೂ ನಮ್ಮ ಉತ್ತರಕ್ಕೆ ಕಾಯದೇ ಹೋದರು. ಹೋಗಿ ನಾಲ್ಕು ಬಟ್ಟಲು ಕರಿ ಕಾಫಿ ತಂದು ನಮ್ಮೆದುರಿಗೆ ಇಟ್ಟರು. ನೋಡುಕ್ಕೆ ನಮ್ಮ ಬಣ್ಣದಂತೆ ಕಾಫಿ ಇದ್ದರೂ, ರುಚಿಯಾಗೇನೋ ಇತ್ತು. ಕ್ರೀಂ ಹಾಕಿದ್ದರಂತೆ. ಯೂರೋಪ್ ದೇಶದ ಬಿಳಿ ಕೆಚ್ಚಲುಗಳ ಹಾಲು ಕೂಡ ಬೇರೆ ರುಚಿಯನ್ನು ಹೊಂದಿರುತ್ತವೆಯೇನೋ?

ಅಲ್ಲಿಗೆ ಬಂದಿದ್ದ ಇತರ ಅತಿಥಿಗಳು ದೊಡ್ಡ ಅಂಗಳದ ನಾಟ್ಯ ಮಂಟಪದಲ್ಲಿ ನೃತ್ಯ ಮಾಡಲಾರಂಭಿಸಿದರು. ಪ್ರದರ್ಶನದ ನೃತ್ಯ ಅಲ್ಲ. ಸ್ವಸುಖದ ನೃತ್ಯ, ಜತೆ ಜತೆ ನೃತ್ಯ ಮಾಡುವುದು. ಹುಡುಗನಾಗಿದ್ದಾಗ ನಮ್ಮ ರಂಗಜ್ಜಿ ಹೇಳುತ್ತಿದ್ದಳು. ಮಾಡಿದವರ ಪಾಪ ನೋಡಿದವರ ಕಣ್ಣು ಕುಕ್ಕುತ್ತೆ ಅಂತ. ಇದರ ಜ್ಞಾಪಕ ಬರುತ್ತಿದ್ದ ಹಾಗೆ ಮುಖ ಈ ಕಡೆಗೆ ತಿರುಗಿಸಿದೆ.

ಅಷ್ಟು ಹೊತ್ತಿಗೆ ನಮ್ಮ ಮಂದೆಯ ಕುರುಬ ಎದ್ದು ನಿಂತ. ನಾವೂ ಹೊರಟೆವು.

ಎಲ್ಲರೂ ಹಿಂತಿರುಗಿ ಬಸ್ಸು ತುಂಬಿಕೊಂಡೆವು. ಹೋಟಲಿಗೆ ಹಿಂತಿರುಗಿದಾಗ ನಿಶಿರಾತ್ರಿ ಒಂದು ಗಂಟೆಯಾಗಿತ್ತು. ಜೇಬು ಖಾಲಿಯಾಗಿತ್ತು. ಕಳ್ಳಕಾಕರ ಭಯವಿಲ್ಲದೆ ಮಲಗಿದೆ. ನಿದ್ರೆ ಬಂತು.

ಬೆಳಿಗ್ಗೆ ಎದ್ದಾಗ, ಪಕ್ಕದ ಗೋಡೆಯ ಮೇಲಿದ್ದ ಚಿತ್ರದ ಹೆಣ್ಣು ಕೊಳದಲ್ಲಿ ಈಜುತ್ತಲೇ ಇದ್ದಳು. ಎಷ್ಟು ಚಳಿಯೋ ಪಾಪ ಎನ್ನಿಸಿತು.



# ಮಾಸ್ಕೋದಲ್ಲಿ ನಟಾಷಾ!

ಆಸ್ಪತ್ರೆಯನ್ನು ನೋಡಿಕೊಂಡು ಅಲ್ಲಿನ ಡಾಕ್ಟರುಗಳೊಡನೆ ಆದರದ ಮಾತುಕತೆಗಳನ್ನಾಡಿ, ಅವರು ನಡೆಸುತ್ತಿದ್ದ ಪ್ರಯೋಗಗಳನ್ನು ಅರಿತು ನಾವು ನಮ್ಮ ದೇಶದಲ್ಲಿ ಯಾವ ಯಾವ ಪ್ರಯೋಗಗಳನ್ನು ನಡೆಸುತ್ತಿದ್ದೇವೆಂಬುದನ್ನು ಅವರಿಗೆ ತಿಳಿಸಿ, ಹಿಂತಿರುಗಿ ಬಸ್ಸಿಗೆ ಬಂದು ಕುಳಿತಾಗ ಸುಮಾರು ೧೨-೨೦ ಗಂಟೆಯಾಗಿತ್ತು. ನಮ್ಮ ವಾಹನದಲ್ಲಿ ಸುಮಾರು ಮೂವತ್ತು ಜನ ಭಾರತೀಯ ವೈದ್ಯರಿದ್ದೆವು. ನಾನು ಕುಳಿತಿದ್ದ ಕಡೆಯ ಸಾಲಿನಲ್ಲಿ ಐವರಿದ್ದೆವು. ಎದುರಿಗೆ ಮುಂದಿನ ಸಾಲಿನಲ್ಲಿ ಹೊಸ ಹೆಣ್ಣು ಮುಖವೊಂದು ಕಾಣಿಸಿತು.

ನಮ್ಮೂರ ಹುಡುಗಿಯರ ಮುಖವಲ್ಲ. ಬೆಳದಿಂಗಳಿಂದ ತುಂಬಿದ್ದ ಹಾಲು ಮುಖ. ತೆಳ್ಳಾನೆ ಆಯಕಟ್ಟು. ಕಿರುನಗೆ ನಕ್ಕಾಗ ಬಸ್ಸಿನ ಸೂರಿಗೆಲ್ಲಾ ಬೆಳದಿಂಗಳು ಹರಡುತ್ತಿತ್ತು. ನೋಡಿದ ಕಣ್ಣುಗಳಿಗೆ ತಂಪು ಗಾಣುತ್ತಿತ್ತು. ಪ್ರಾಯ ೧೮-೨೦ ಇರಬಹುದು.

ನನ್ನ ಪಕ್ಕದಲ್ಲಿ ಪಂಜಾಬಿನ ವೈದ್ಯರೊಬ್ಬರು ಕುಳಿತಿದ್ದರು. ಆತನಿಗೆ ಸುಮಾರು ೩೫-೪೦ರ ಪ್ರಾಯ. ಐದೂವರೆ ಅಡಿ ಎತ್ತರದಾತ. ಅಷ್ಟೇ ಅವನ ಸುತ್ತಳತೆಯೂ ಕೂಡ. ಸಾಕಷ್ಟು ಧಡಿಯ ಅನ್ನಿ!

ಕುಲು ಕುಲು ನಗುತ್ತಾ ಅವನು ಎದುರು ಕುಳಿತಿದ್ದ ಯುವತಿಯ ಕೈ ಹಿಡಿದು ಹಸ್ತಸಾಮುದ್ರಿಕ ಹೇಳಲು ಶುರು ಮಾಡಿದ.

"ಎಲ್ಲರನ್ನೂ ಪ್ರೀತಿಸುವ ಸ್ವಭಾವ ನಿಮ್ಮದು" ಎಂದ.

ನನಗೆ ಗಾಭರಿಯಾಯ್ತು. ಹೊರ ದೇಶದ ಹುಡುಗಿಯೆದುರಿಗೆ ಇವನೇನಾದರೂ ಆಭಾಸದ ಭವಿಷ್ಯ ನುಡಿದರೆ, ನಮ್ಮ ದೇಶಕ್ಕೆ ಅಪಕೀರ್ತಿ ಬರಬಹುದು ಎನ್ನಿಸಿತು. ಹುಡುಗಿಯ ಮನಸ್ಸೂ ನೋವಾಗಬಹುದು ಎನ್ನಿಸಿತು. ಆದಕಾರಣ ತಕ್ಷಣ ಆಕೆಯ ಬಲಗೈಯನ್ನು ಅವನ ಕೈಗಳಿಂದ ಬಿಡಿಸಿ ನನ್ನ ಅಂಗೈಯಲ್ಲಿಟ್ಟುಕೊಂಡು,

"ತಮ್ಮಾ! ಇದು ಕಲಾರಾಧಕರ, ಆತ್ಮವರಿಯುವ ದಾರ್ಶನಿಕರ ಹಸ್ತ! ಕಾರ್ಮಿಕರ ಹಸ್ತದಲ್ಲಿ ಇಂತಹ ಅದೃಷ್ಟ ರೇಖೆ ಇದ್ದರೆ ಎಲ್ಲರನ್ನು ಪ್ರೀತಿಸುವ ಸ್ವಭಾವ ಎಂದು ಹೇಳಬಹುದು. ಆದರೆ ದಾರ್ಶನಿಕರ ಹಸ್ತದಲ್ಲಿ ಈ ತೆರನ ಅದೃಷ್ಟ ರೇಖೆಯನ್ನು ಬೇರೆ ತರಹ ಅರ್ಥ ಮಾಡಿಕೊಳ್ಳಬೇಕು" ಎಂದು ಹೇಳಿದೆ.

ಪಂಜಾಬಿ ವೈದ್ಯ ಮುಖದಲ್ಲಿ ಬೆವರಿಳಿಸುತ್ತಾ ಸುಸ್ತು ಹೊಡೆದ. ಸೋಲನ್ನು ಒಪ್ಪಿಕೊಂಡಂತೆ ಒರಗಿ ಕೂತುಕೊಂಡ.

ಧೈರ್ಯದಿಂದ ನಾನು ಮುಂದುವರೆದೆ.

"ಮಗಳೇ! ನೀನಾರೋ ನಾನರಿಯೆ! ಆದರೆ ಅಪಕ್ವ ವಿದ್ಯೆಯಿಂದ ಈ ತಮ್ಮ ಹೇಳೋದನ್ನು ಕೇಳಲಾರದೆ ನಾನು ಕೈ ಹಾಕಬೇಕಾಯ್ತು. ನಿನ್ನದು ದಾರ್ಶನಿಕರ, ಕಲಾರಾಧಕರ ಹಸ್ತ. ಅಂದ ಮೇಲೆ ಯೋಚನೆ ಮಾಡಿ, ಆಗುಹೋಗುಗಳನ್ನು ಲೆಕ್ಕ ಹಾಕಿ ಬಾಳಿ ಬದುಕುವ ಲಭ್ಯವಿಲ್ಲ. ಮನಸ್ಸಿಗೆ ತೋಚಿದ್ದನ್ನು ತುಂಬೆದೆಯಿಂದ ಮಾಡಿ ನರಳುತ್ತಾ, ಬಾಳಿನಲ್ಲಿ ಎಲ್ಲರಂತಿರದೆ ಮನಸ್ಸಿನಲ್ಲೇ ಮಂಡಿಗೆಯನ್ನು ಮೆಲ್ಲುವ ಸ್ವಭಾವ ನಿನ್ನದು. ಅದೇ ನಿನ್ನ ಹುಟ್ಟು ಗುಣ" ಎಂದೆ. ಕತ್ತೆತ್ತಿ ಅವಳ ಮುಖವನ್ನು ನೋಡಿದೆ. ಆ ಹುಡುಗಿಯು ನನ್ನನ್ನೇ ದುರುಗುಟ್ಟುತ್ತ ನೋಡುತ್ತಿದ್ದಳು. ತಲೆಯೆತ್ತಿದಾಗ ನನ್ನ ಮುಖವನ್ನು ನೋಡಿ ಕ್ಷಣಾರ್ಧದಲ್ಲಿ ಮಂದಹಾಸವನ್ನು ಬೀರಲು ಯತ್ನಿಸಿದಳು. ಅಷ್ಟೇ! ಯತ್ನಿಸಿದಳು. ಕಾತುರತೆಯಿಂದ "ಸಂಸಾರ ಜೀವನ ಹೇಗೆ ನೋಡಿ ಹೇಳಿ" ಎಂದಳು. ಆ ವಯಸ್ಸಿನಲ್ಲಿ ಹುಡುಗಿಯರಿಗೆಲ್ಲಾ ಮುಂದಿನ ಮದುವೆ ಯೋಚನೆಯೇ ಸಹಜವಲ್ಲವೇ! ಅದಕ್ಕೇ ಹುಡುಗಿಯ ಮುಖ ನೋಡಿ ನನಗೆ ಅಯ್ಯೋ! ಎಂದೆನಿಸಿತು. ಆಕೆಯನ್ನು ಸಂತೋಷಪಡಿಸೋಣ ಎಂದೂ ಬಲವತ್ತರವಾದ ಆಸೆ ತೋರಿತು.

ಅವಳ ಅಂಗೈಯನ್ನು ಹಿಗ್ಗಲಿಸಿ ನನ್ನ ಎಡ ಅಂಗೈಯಲ್ಲಿ ಹಿಡಿದು ಬಲಗೈ ತೋರಬೆರಳಿಂದ ರೇಖೆಗಳನ್ನು ತೋರಿಸುತ್ತಾ ನಾನಂದೆ.

"ನೋಡು! ಮಗಳೆ! ನಿನ್ನ ಬುದ್ಧಿ ರೇಖೆಯು ಚಂದ್ರನ ಗುಡ್ಡದ ತನಕ ಹರಿದು ಹೋಗಿದೆ. ಅಂದಮೇಲೆ, ನಿನ್ನ ಜಾಣತನವು ಅಸಾಧಾರಣವಾದುದು. ಮಿಕ್ಕವರು ಮೂರು ತಾಸುಗಳಲ್ಲಿ ತಿಳಿಯುವುದನ್ನು ನೀನು ಮೂರೇ ನಿಮಿಷಗಳಲ್ಲಿ ಅರ್ಥ ಮಾಡಿಕೊಳ್ಳುತ್ತೀ! ಲೋಕ ಪ್ರಸಿದ್ಧ ಕವಿಯಾಗುವ ಪ್ರತಿಭೆಯನ್ನು ಈ ರೇಖೆ ಸೂಚಿಸುತ್ತದೆ" ಎಂದು ತಲೆಯೆತ್ತಿ ನೋಡಿದೆ.

ಆಕೆಯ ಮುಖ ಅರಳಿತ್ತು. ಕಿವಿಯಿಂದ ಕಿವಿ ತನಕ ನಗು ಹರಡಿತ್ತು. ಅರುಂಧತಿಯ ಕಾಲದಿಂದ ರೂಪವತಿಯನ್ನು ನೀನು ಜಾಣೆ ಅಂದರೆ ಯಾವ ಹೆಣ್ಣುತಾನೆ ಹಿಗ್ಗಿಲ್ಲ!!

ಧೈರ್ಯ ಬಂತು. ತಿರುಗಿ ಅಂಗೈ ಕಡೆ ನೋಟ ಹರಿಸಿದೆ. ಹೇಳಿದೆ. "ಆದರೆ ನೋಡು! ದಾಂಪತ್ಯ ರೇಖೆಗೆ, ಬುದ್ಧಿ ರೇಖೆಯಿಂದ ಕವಲೊಡೆದ ತೆಳ್ಳನೆ ರೇಖೆಯೊಂದು ಅಡ್ಡ ಬಂದಿದೆ. ಒಲವಿನಿಂದ ಮದುವೆಯಾಗಬಯಸಿದರೂ, ಬುದ್ಧಿಯು ಬೇಡವೆಂದು ಹೇಳುತ್ತದೆ. ಆದರೆ ಬುದ್ಧಿಯ ಮಾತಿಗೆ ಹ್ಞೂಗೊಡಬೇಡ. ಎದೆ ಹೇಳಿದಂತೆ ಮಾಡು! ಸ್ವಲ್ಪ ದಿನ ಕಷ್ಟಗಳು ಮುತ್ತಬಹುದು. ಆದರೆ ಆಮೇಲೆ ಬಲುಕಾಲ ಬಲು ಸುಖವಾದ ಜೀವನ ಮಾಡಬಹುದು" ಎಂದು ಹೇಳಿದೆ.

ಅಷ್ಟು ಹೊತ್ತಿಗೆ ಬಸ್ಸು ನಮ್ಮ ಹೋಟಲನ್ನು ತಲುಪಿತು. ಎಲ್ಲರೂ ಇಳಿದು ನಮ್ಮ ನಮ್ಮ ಕೊಠಡಿಗೆ ಹೋದೆವು. ಬೇಗಬೇಗ ಉಡುಪು ಬದಲಾಯಿಸಿ ಊಟಕ್ಕೆ ಹೋಗದೆ ಇದ್ದರೆ, ಊಟವೇ ಸಿಗಲಾರದು ಎಂಬ ಭಯವಿದ್ದುದರಿಂದ ಅವಸರ ಪಡುತ್ತಲೇ ಇದ್ದೆವು.

*　*　*　*　*

ಮಧ್ಯಾಹ್ನವೆಲ್ಲಾ ಪಟ್ಟಣ ಪ್ರದಕ್ಷಣೆ ಹಾಕಿ ರಷ್ಯನ್ ಗೆಳೆಯರಿತ್ತ ಸೌಹಾರ್ದ ಕೂಟದಲ್ಲಿ ಭಾಗವಹಿಸಿ, ತಿರುಗಿ ನಮ್ಮ ಹೋಟಲಿಗೆ ಬಂದಾಗ ರಾತ್ರಿ ಎಂಟು ಗಂಟೆಯಾಗಿತ್ತು. ಸುಸ್ತು ಬಡಿದುಹೋಗಿದ್ದೆ. ದಿಂಬೊಂದನ್ನು ಕೊಟ್ಟರೆ ಇದ್ದಲ್ಲೇ ಬಿದ್ದುಕೋತೀನಿ ಎನ್ನುವಷ್ಟು ಬಳಲಿದ್ದೆ.

ಹದಿನೂರನೇ ಮಹಡಿ ಹತ್ತಿ ಹೋಗಿ, ಕೈ ಕಾಲು ತೊಳೆದುಕೊಂಡು ಊಟಕ್ಕೆ ಬರುವುದರ ಬದಲು ಎರಡನೇ ಮಹಡಿಯಲ್ಲಿದ್ದ ಭೋಜನದ ಅಂಗಳದಲ್ಲಿ ಊಟ ಮಾಡಿಬಿಟ್ಟೇ ಕೊಠಡಿಗೆ ಹಿಂದಿರುಗೋಣ ಎಂದುಕೊಂಡೆ. ಸುಸ್ತು ಬಡೆದ ಬ್ರಾಹ್ಮಣನಿಗೆ ತರಕಾರಿಗಳನ್ನು ಎಷ್ಟೇ ಚೆನ್ನಾಗಿ ಬೇಯಿಸಿ, ಅಂದವಾಗಿ ಬಡಿಸಿದರೂ ಕೂಡ, ನಮ್ಮೂರ ಮಸಾಲೆ ಇಲ್ಲದೆ ಇದ್ದರೆ ಸ್ವಲ್ಪ ಪೆಚ್ಚೆ! ಹೊರವಾಗಿ ಬೆಳೆದ ಬಡಿಸುತ್ತಿದ್ದ ಹೆಣ್ಣು ಮಕ್ಕಳ ಒತ್ತಾಯಕ್ಕಾದರೂ ತಿನ್ನಲೇಬೇಕಾಯ್ತು. ಹೇರಳವಾಗಿ ಕೊಟ್ಟ ಹಣ್ಣುಗಳನ್ನು ಕಬಳಿಸಿದೆ. ನಂತರ ಹದಿಮೂರನೆ ಮಹಡಿಯತ್ತ ಎತ್ತೇಣಿಯನ್ನು ಹತ್ತಿದೆ.

ಹದಿಮೂರನೆ ಮಹಡಿ ಸಿಕ್ಕಿತು. ಎತ್ತೇಣಿಯು ನಿಂತಿತು. ಬಾಗಿಲು ತೆರೆದಾಗ ನಾನು ಹೊರಬಿದ್ದೆ. ಮಧ್ಯದಲ್ಲಿ ಒಂದು ಪುಟಾಣಿ ತೊಟ್ಟಿ, ನಾಲ್ಕಾರು ಕುರ್ಚಿಗಳು ಇರುತ್ತವೆ. ಆ ತೊಟ್ಟಿಯಿಂದ ನಾಲ್ಕೂ ದಿಕ್ಕುಗಳಿಗೆ ನಾಲ್ಕು ಉದ್ದಾನೆ ಪಡಶಾಲೆಗಳು ಪಸರಿಸುತ್ತವೆ. ಅವುಗಳಲ್ಲಿ ಹೋದರೆ ಎರಡೂ ಕಡೆಗಳಲ್ಲಿ ಕೊಠಡಿಗಳಿರುತ್ತವೆ. ಪುಟಾಣಿ ತೊಟ್ಟಿಯಲ್ಲಿ ಯಾವಾಗಲೂ ಒಬ್ಬಾಕೆಯು ಹಾಜರಿ ಇರುತ್ತಾಳೆ. ಕೊಠಡಿ ಬೀಗದ ಕೈಯನ್ನು ಅವಳ ಹತ್ತಿರವೇ ಕೊಟ್ಟು ಹೊರಗೆ ಹೋಗೋದು. ಕಳ್ಳನ ಕೈಲಿ ಗಂಟು ಕೊಟ್ಟಹಾಗೇ! ಹಿಂದಿರುಗಿದಾಗ ಆಕೆಯ ಬಳಿ ಬೀಗದ ಕೈ ವಾಪಸು ಪಡೆದು ನಮ್ಮ ಕೊಠಡಿ ಸೇರಿಕೊಳ್ಳುವ ಕ್ರಮ.

ಬೀಗದ ಕೈ ಪಡೆಯಲು ಮೇಜಿನ ಬಳಿಗೆ ಹೋದೆ. ಹಾಜರಿ ಇದ್ದ ಆಕೆಯು ಬೀಗದ ಕೈ ಕೊಟ್ಟಾಗ, ತೊಟ್ಟಿಯ ಕುರ್ಚಿಗಳ ಮೇಲೆ ಕುಳಿತಿದ್ದ ಒಬ್ಬ ಸ್ತ್ರೀಯು ಕೋಕಿಲ ಕಂಠದಿಂದ "ಮಾವಾ!" ಅಂತ ಕರೆಯುತ್ತಾ ಮೇಜಿನ ಬಳಿಗೆ ಬಂದಳು. ಯಾರನ್ನು ಕರೆಯುತ್ತಾಳೋ ಅಂತ ಸುತ್ತ ನೋಡಿದೆ. ನಾನೊಬ್ಬನೇ! ಇನ್ನು ಯಾರೂ ಇತ್ತಿಲ್ಲ. ಕೂಗಿದಾಕೆಯ ಕಡೆ ನೋಡಿದೆ, ಎಲ್ಲೋ ನೋಡಿದ ಮುಖ. ದಿನಬೆಳಗಾದರೆ ರಾತ್ರಿ ಮಲಗುವ ತನಕ ಹತ್ತಾರು ಹೊಸ ಮುಖಗಳನ್ನು ಕಾಣುವ ದಿನಚರಿ. ಅಂದಮೇಲೆ ಬೇಗ ಗುರ್ತು ಸಿಗಲಿಲ್ಲ.

"ಜ್ಞಾಪಕ ಬರಲಿಲ್ಲವೇ! ಮಾಮಾ! ಬೆಳಿಗ್ಗೆ ಆಸ್ಪತ್ರೆಯಿಂದ ನಿಮ್ಮ ಜತೆಯಲ್ಲೇ ಬರಲಿಲ್ಲವೇ!" ಎಂದು ಕೇಳಿದಳು.

ಓಹೋ! ಹಸ್ತಸಾಮುದ್ರಿಕದ ಹುಡುಗಿ! ದಿಟ್ಟಿಸಿ ನೋಡಿದೆ. ಅವಳೇ!

"ಚೆನ್ನಾಗಿ ನೆನಪಿದೆ. ಇಲ್ಲೇ ಇದೀಯಾಮ್ಮಾ? ಕೊಠಡಿ ನಂಬರು ಯಾವುದು? ಅಪ್ಪ ಅಮ್ಮ ಕೂಡ ಇಲ್ಲೇ ಇದಾರೆಯೇ?" ಎಂದು ಕೇಳಿದೆ.

"ಮೆಡಿಕಲ್ ಕಾಲೇಜಿನ ಹಾಸ್ಟಲಲ್ಲಿ ನಾನಿರೋದು. ನಾಲ್ಕನೇ ವರ್ಷದ ವ್ಯಾಸಂಗ ಮಾಡುತ್ತಿದ್ದೇನೆ. ನಿಮ್ಮನ್ನು ಭೇಟಿಯಾಗಬೇಕೆಂದೇ ಇಲ್ಲಿಗೆ ಬಂದು ಕಾಯುತ್ತ ಕುಳಿತೆ." ಎಂದಳು ಆ ಹುಡುಗಿ.

"ಬಾಮ್ಮ ಹಾಗಾದರೆ! ಏನು ವಿಚಾರ ಕೇಳಬೇಕಿತ್ತು," ಎಂದು ಹೇಳುತ್ತಾ ಕುರ್ಚಿಯ ಬಳಿಗೆ ಹೆಜ್ಜೆ ಹಾಕಿದೆ.

"ನಿಮ್ಮ ಕೊಠಡಿಗೆ ಹೋಗೋಣ. ಅಲ್ಲೇ ಮಾತನಾಡುತ್ತೇನೆ" ಎಂದಳು.

ನನಗೆ ಸ್ವಲ್ಪ ಅನುಮಾನ! ಯಾವುದೋ ದೇಶ. ಎಲ್ಲೋ ಹೋಗಿದ್ದೇನೆ. ಇಂಗ್ಲೀಷ್ ಕಲಿತ ಈ ಹುಡುಗಿಯ ಹತ್ತಿರ, ಕೊಠಡಿ ಬಾಗಿಲು ಹಾಕಿಕೊಂಡು ಮುಪ್ಪಿನ ಮುದುಕ ಏನು ಮಾತಾಡ್ತಾ ಇರುತ್ತಾನೆ ಎಂದು ಯಾರಾದರೂ ನೋಡಿದವರು ಏನಾರು ಅಂದುಕೊಳ್ಳದೆ ಇರುತ್ತಾರೆಯೇ? ಹಾಗೆ ಅಂದುಕೊಂಡೋರು ಸುಮ್ಮನೆ ಇರುತ್ತಾರೆಯೇ? ನಾಲ್ಕು ಜನ ಹಿಡಿದುಕೊಂಡು ತದಕಿದರೆ ನನ್ನಾಟ ಮುಗಿದ ಹಾಗೇ. ಅದಕ್ಕಿಂತ ಕ್ರೂರವಾದುದು ಕೋರ್ಟಿಗೆ ಎಳೆಯೋದು. ಅವರ ಭಾಷೆ ಬರುಲ್ಲ, ಎಂದೆಲ್ಲಾ ಯೋಚನೆಗಳು ಬಂದವು. ಆ ವೇಳೆಗೆ ಆ ಹುಡುಗಿ, ನನ್ನ ಕೊಠಡಿ ಬಳಿಗೆ ಹೋದಳು. ಬೀಗದ ಕೈ ತೆಗೆದುಕೊಂಡಾಗ ಆಕೆ ನನ್ನ ಕೊಠಡಿಯ ನಂಬರನ್ನು ತಿಳಿದುಕೊಂಡಿದ್ದಿರಬೇಕು. ನಾನೂ ಅವಳನ್ನು ಹಿಂಬಾಲಿಸಿದೆ. ಕೊಠಡಿಯ ಬಾಗಿಲಬಳಿ ಅವಳು ನಿಂತಳು. ನಾನು ಹೋಗಿ ಬಾಗಿಲು ತೆಗೆದೆ, ಅವಳೇ ಮೊದಲು ನುಗ್ಗಿ ದೀಪ ಹಚ್ಚಿದಳು. ನಾನು ಒಳಕ್ಕೆ ಹೋದೆ. ಆಕೆ ಬಾಗಿಲನ್ನು ಹಾಕಿ ಒಳಕ್ಕೆ ಬಂದು ಕುರ್ಚಿಯಮೇಲೆ ಕುಳಿತಳು. ನಾನೂ ಕುಳಿತೆ.

"ಏನು ವಿಚಾರ. ಮಗಳೇ! ನಗುಸರಸಿಹಾಗೆ ಬೆಳಿಗ್ಗೆ ಬಸ್ಸಿನಲ್ಲಿ ಕಾಣಿಸಿಕೊಂಡೆ, ಈಗ, ಬಲ ಅತ್ತೆ ಮನೆ ಸೊಸೆಯಹಾಗೆ ಕಾಣಿಸುತ್ತೀಯಲ್ಲ!" ಎಂದೆ.

"ಮಾಮ! ಈ ಬೆಳಿಗ್ಗೆ ನೀವು ಕೈ ನೋಡಿ ಭವಿಷ್ಯ ಸೂಚಿಸೋತನಕ ಖುಷಿಯಿಂದಿದ್ದೆ, ಈಗ ಬಲು ಯೋಚನೆ ತುಂಬಿಕೊಂಡಿದೆ. ಅದಕ್ಕೇ ಇಷ್ಟು ಹೊತ್ತಾದರೂ ನಿಮಗೆ ತೊಂದರೆಕೊಟ್ಟರೂ ಪರವಾಗಿಲ್ಲ ಎಂದುಕೊಂಡು ಬಂದೆ. ನನ್ನ ವಿಚಾರ ಹೇಳ್ತೇನೆ ಸ್ವಲ್ಪ ಕೇಳಿ, ನಂತರ ಕೈನೋಡಿ ಬುದ್ಧಿ ಹೇಳಿ" ಎಂದಳು.

"ಆಗಲಮ್ಮ" ಎಂದು ಆರಾಮವಾಗಿ ಕುಳಿತೆ.

"ಮೂರು ವರ್ಷದ ಹುಡುಗಿಯಾಗಿದ್ದಾಗ, ಅಮ್ಮ ಕೆಲಸಕ್ಕೆ ಹೋಗುತ್ತಿದ್ದಳು. ಬಸ್ಸಿನಲ್ಲಿ ನನ್ನನ್ನು ಬಾಲಮಂದಿರಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಅಮ್ಮನ ಜತೇಲೇ ಇರಬೇಕು ಎಂದು ನನಗೆ ತುಂಬಾ ಆಶೆ ಇರುತ್ತಿತ್ತು. ಬೆಳೆದಮೇಲೆ ಮೆಡಿಕಲ್ ಕಾಲೇಜಿನ ವಿದ್ಯಾರ್ಥಿಯಾದಾಗ ನನ್ನ ಮಕ್ಕಳನ್ನು ಐದಾರು ವರ್ಷಗಳಾಗುವ ತನಕ ನಾನೇ ಸಾಕಬೇಕು ಎಂದು ತೀವ್ರ ಹಂಬಲವುಂಟಾಯಿತು. ನಮ್ಮ ದೇಶದಲ್ಲಿ ಮದುವೆಯಾದರೆ ಇದು ಕಷ್ಟಸಾಧ್ಯವಾಗಬಹುದು. ವಿದೇಶೀಯರ್‍ಯಾರಾದರೂ ದೊರೆತರೆ, ಒಲಿದರೆ, ಅವರನ್ನ ಮದುವೆಯಾಗಬೇಕೆಂದು ನಿರ್ಧರಿಸಿದೆ. ಅಪ್ಪ ಅಮ್ಮನೂ ಒಪ್ಪಿದರು. ಎರಡು ವರ್ಷಗಳ ಹಿಂದೆ ಅಂತಹವನೊಬ್ಬ ಸಿಕ್ಕಿದ. ಬಲು ಜಾಣ. ವಿದೇಶದಿಂದ ಓದಲು ಇಲ್ಲಿಗೆ ಬಂದಿದ್ದ. ಅವನನ್ನು ಮದುವೆಯಾದೆ. ಎರಡು ವರ್ಷಗಳ ಅನುಭವದಿಂದ, ಅವನು ಅಷ್ಟೆಲ್ಲಾ ಸೊಬಗಲ್ಲ ಎಂದು ಖಚಿತವಾಯ್ತು. ವಿವಾಹವಿಚ್ಛೇದನ ಮಾಡಿಕ್ಕೊಳ್ಳೋಣ ಎಂದು ಅಪ್ಪ ಅಮ್ಮನೊಡನೆ ಮಾತಾಡಿ ತೀರ್ಮಾನಿಸಿದೆ ಕೆಲವು ವಾರಗಳ ಹಿಂದೆ. ಆದರೆ ಈ ಬೆಳಿಗ್ಗೆ ನೀವು ಕೈ ನೋಡಿ ಹೇಳಿದಿರಿ. ಬುದ್ಧಿಯ ಮಾತಿಗೆ ಹ್ಲೂಗೊಡಬೇಡ ಎಂದಿರಿ. ಈಗ ಅನುಮಾನ ಬಂದಿದೆ. ಕೈ ಹಿಡಿದವನ ಜತೆ ಈಗ ಒದ್ದಾಡಿದರೆ ಮುಂದಕ್ಕೆ ಸುಖ ಶಾಶ್ವತವಾಗುತ್ತೇನೋ ಎಂದು ಆಸೆ ಹುಟ್ಟಿದೆ. ಅದಕ್ಕೇ ಮನಸ್ಸು ಕಳವಳದಿಂದ ಕೂಡಿದೆ. ಸಂದೇಹದಿಂದ ತುಂಬಿದೆ. ತಿರುಗಿ ಕೈ ನೋಡಿ ಏನು ಮಾಡಬೇಕೋ ಹೇಳಿ" ಎಂದಳು.

ಒಂದು ನಿಮಿಷ ಸ್ತಬ್ಧನಾದೆ. ಈ ನಟಾಷಾ, ಈ ತೆಳ್ಳಾನೆ ಸುರಸುಂದರಿ, ವೈದ್ಯ ವಿದ್ಯಾಭ್ಯಾಸ

ಮಾಡುತ್ತಿರುವ ಹುಡುಗಿ, ಇಷ್ಟು ಆತ್ಮೀಯವಾಗಿ, ಅಷ್ಟು ನಂಬಿಕೆ ಆದರದಿಂದ, ಈ ಬೆಳಗಿನ ತನಕ ಕಾಣದೆ ಇದ್ದ ನನ್ನನ್ನು ಕಂಡು, ನನ್ನ ಹಸ್ತಸಾಮುದ್ರಿಕ ಕೇಳಿದ ಮಾತ್ರಕ್ಕೆ ನನ್ನನ್ನು ಮಾಮ ಎಂದು ಕರೆದು ಸಲಹೆ ಕೇಳಲು ಬಂದಿದ್ದಾಳಲ್ಲ, ಎಂದು ದೈನ್ಯಭಾವನೆ ನನ್ನನ್ನು ತುಂಬಿತು.

ನನ್ನ ಹಸ್ತ ಸಾಮುದ್ರಿಕದ ಗುಟ್ಟೆಲ್ಲಾ ಮೆದುಗೈಗಳನ್ನು ಹಿಡಿದುಕೊಂಡು ತಡವರಿಸುವುದರಲ್ಲೇ ಮುಗಿಯುತ್ತಿತ್ತು. ದಿಟವಾಗಲೂ ನಾನು ಆ ಶಾಸ್ತ್ರವನ್ನು ಅಭ್ಯಾಸ ಮಾಡಿದ್ದಿಲ್ಲ. ಅಂದಮೇಲೆ ಏನು ಮಾಡಲಿ?

ಸಹಜವಾದ ವ್ಯವಹಾರ ಜ್ಞಾನವನ್ನು ಉಪಯೋಗಿಸಿಕೊಂಡೆ. ಕೇಳಿದೆ, "ಮಗಳೇ! ನಿನ್ನನ್ನು ಮದುವೆಯಾದ ವಿದೇಶೀಯನು ಭಾರತೀಯನೇ?" ಎಂದು. "ಅಲ್ಲ" ಎಂದಳು ನಟಾಷಾ!

"ಹಾಗಾದರೆ ಅಂಗೈ ತೋರಿಸು" ಎಂದೆ.

ಅಂಗೈ ನೋಡುತ್ತಾ ಹೇಳಿದೆ.

"ವಿವಾಹ ವಿಚ್ಛೇದನ ಮಾಡಿಕೋ! ನಿನ್ನ ಬಾಳು ಹಸನಾಗುತ್ತೆ" ಎಂದು.

ಕಾರಣ ಇಷ್ಟೇ! ಇಂತಹ ಚೆಂದುಳ್ಳಿ ಹೆಣ್ಣು ನಮ್ಮ ದೇಶಕ್ಕೆ ಬಂದರೆ, ಬಹಳ ಚೆನ್ನ. ಹಾಗಾಗದಿದ್ದರೆ, ಅವಳ ದೇಶದಲ್ಲೇ ಇದ್ದು ಆ ದೇಶದ ಭಾವೀ ಜನಾಂಗದ ತಾಯಿಯಾಗಿರಲಿ. ಬೇರೆ ದೇಶಗಳಿಗೆ ಹೋಗುವುದು ಬೇಡ ಎಂದೇ ಆಲೋಚನೆ.

ಆಕೆ ಜಟ್ಟಂತ ಎದ್ದಳು. ನನ್ನ ಕೈ ಕುಲುಕಿದಳು. ತುಂಬಾ ವಂದನೆಗಳು ಎಂದಳು. ಬೆಳದಿಂಗಳು ಆಕೆಯ ಮುಖವನ್ನೆಲ್ಲಾ ತುಂಬಿ ಹರಿಯುತ್ತಿತ್ತು.

"ಮಾಮ! ನಿಮಗೆ ತೊಂದರೆ ಕೊಟ್ಟುದಕ್ಕೆ, ಸುಸ್ತಾಗಿದ್ದಾಗಲೂ ಸತಾಯಿಸಿದ್ದಕ್ಕೆ, ನನ್ನ ಮೇಲೆ ಕೋಪ ಇಲ್ಲವೇ?" ಎಂದು ಕೇಳಿದಳು.

"ಈಗ ಕೋಪ ಇಲ್ಲ ಮಗಳೇ! ಆದರೆ ನೀನು ಎರಡನೇ ಮದುವೆ ಮಾಡಿಕೊಂಡಾಗ, ನನ್ನನ್ನು ಕರೆಯದೇ ಇದ್ದರೆ, ಅದು ನನಗೆ ಗೊತ್ತಾದರೆ, ನಿನ್ನ ಮೇಲೆ ಕೋಪ ಬರುತ್ತೆ" ಎಂದು ನಗುತ್ತಾ ಹೇಳುವಾಗ, ಜೇಬಿನಿಂದ ನನ್ನ ವಿಳಾಸವಿದ್ದ ಚೀಟಿಯೊಂದನ್ನು ಆಕೆಗೆ ಕೊಟ್ಟೆ.

ಆಕೆಯು ಹೊರಡಲುದ್ಯುಕ್ತಳಾದಳು. ನಾನು ಕುರ್ಚಿಯಿಂದ ಎದ್ದು ನಿಂತೆ, ಅವಳನ್ನು ಎತ್ತೇಣಿಯ ಬಾಗಿಲ ತನಕ ಕಳಿಸಿ ಬರೋಣ ಎಂದು.

ಕುರ್ಚಿಯಿಂದ ಏಳುವುದನ್ನು ಕಂಡ ಆಕೆ, ಎರಡೂ ಕೈಗಳಿಂದ ನನ್ನೆರಡೂ ಭುಜಗಳನ್ನು ಅದುಮಿ ಕೂರಿಸಿ "ಮಾಮ! ನೀವು ವಿಶ್ರಾಂತಿ ತೆಗೆದುಕೊಳ್ಳಿ! ನಾನು ಹೋಗುತ್ತೇನೆ. ಕಾಗದ ಬರೆಯುತ್ತೇನೆ ಆಮೇಲೆ" ಎಂದು ಹೇಳಿ ಹೋದಳು.

* * * * *

ಕುರ್ಚಿಯ ಮೇಲೆ ಕೂತಿದ್ದೆ. ಎರಡೇ ನಿಮಿಷಗಳಲ್ಲಿ ಕೊಠಡಿಯ ಸಂಗಾತಿಯು ಏದುಬ್ಬಸಪಡುತ್ತ ಬಂದು "ಯಾರೋ! ಆ ಹುಡುಗಿ! ಇಲ್ಲಿಗೇಕೆ ಬಂದಿದ್ದಳೋ!" ಎಂದು ಕೇಳುತ್ತಾ ಮಂದಹಾಸವನ್ನು ಮುಖದಲ್ಲಿ ತೋರಿದ.

"ಮಗಳು ಬಂದಿದ್ದಳು ಕಣೋ! ಕಷ್ಟ ತೋಡಿಕೊಳ್ಳಲು" ಎಂದೆ. "ಯಾರ ಮಗಳೋ! ಅತ್ತೆಯ ಮಗಳೇನೋ!" ಎಂದ ಅವ.

■

# ಸ್ಟಕ್-ಹೋಂ

"ಸ್ಟಕ್ ಹೋಮಿನ ಹೆಸರಿನಲ್ಲಿ, ನಿಮ್ಮನ್ನು ಸ್ವಾಗತಿಸುತ್ತೇನೆ" ಎನ್ನುತ್ತಾ ವಿಮಾನ ನಿಲ್ದಾಣದಲ್ಲಿ "ಮಾರ್ಗಮಿತ್ರ"ನು ನಮ್ಮನ್ನು ಎದುರ್ಗೊಂಡ. ಹುಡುಗನಾಗಿದ್ದಾಗ "ಸ್ಟಾಕ್ ಹೋಂನಲ್ಲಿ ಜರ್ಮನ್ ಸಿಲ್ವರ್ ಪಾತ್ರೆಗಳು" ಅಂತ ಉರು ಹೊಡೆದಿದ್ದ ನನಗೆ ಇವನ್ಯಾಕೆ ಸ್ಟಕ್ ಹೋಂ ಅಂತಾನೆ, ಸರಿಯಾಗಿ ಇಂಗ್ಲೀಷಿನಲ್ಲಿ ಉಚ್ಚಾರ ಮಾಡುಕ್ಕೂ ಬರುಲ್ವಲ್ಲ ಅಂತ ಒಂದು ಕ್ಷಣ ಅನ್ನಿಸಿತು. ಆದರೆ ಹಿಂಡಿಗೆ ಹಿಂಡೇ ಬಸ್ ಹತ್ತಿರಕ್ಕೆ ಸುಂಕದ ಕಟ್ಟೇನ ತಟಾಯ್ಸಿಕೊಂಡು ಓಡುತ್ತಾ ಇತ್ತು. ಹೊರಲಾರದ ಅಂಗಿ ಹೊತ್ತು ನಾನೂ ಧಸ ಬುಸ ಅಂತ ಹಿಂಡು ಸೇರಬೇಕಾಯ್ತು. ಅಂದಮೇಲೆ ಯೋಚನೆಗೆ ಅವಕಾಶವೆಲ್ಲಿ?

*     *     *     *     *

ಬಸ್‌ನಲ್ಲಿ ಎಲ್ಲರೂ ಕುಳಿತೆವು. ತುಂತುರು ಹನಿ ಹಾಕುತ್ತಾ ಇತ್ತು. ಆ ಊರಿನ ಮಾರ್ಗಮಿತ್ರ ಪ್ಯಾಲೆಸ್ ಹೋಟಲಿನಲ್ಲಿ ನಿಮಗೆಲ್ಲಾ ಅಣಿ ಮಾಡಿದ್ದೇವೆ ಎಂದು ಹೇಳಿ ನಮ್ಮೂರಿನ ಮಾರ್ಗದರ್ಶಕರೊಡನೆ ಮಾತಾಡ್ತಾ ಕೂತುಬಿಟ್ಟ. ಬಸ್ ಹೊರಟಿತು.

ನಮ್ಮ ಮಲೆನಾಡು ತರಹಾನೆ ಆ ಊರು. ಬೆಟ್ಟದ, ಗುಡ್ಡದ ಅಂಚಿನಲ್ಲೇ ರಸ್ತೆ. ಎಂಟ್ಹತ್ತು ಅಂತಸ್ತಿನ ಮನೆಗಳು. ಆ ಗುಡ್ಡಗಳ ಮೇಲೇನೇ. ಎತ್ತರವಾಗಿ ಬೆಳೆದಿದ್ದ ಮರಗಳು. ಫರ್ಲಾಂಗಿಗೊಂದು ಸಣ್ಣ ಸೇತುವೆ. ಕೆಳಗೊಂದು ನಾಲೆ. ಎಲ್ಲಾ ದಕ್ಷಿಣ ಕನ್ನಡದ ತರಹಾನೆ! ಅದೇ ಸೊಗಸು, ಅದೇ ಚೆಂದ.

ಪೇಟೆ ದೊಡ್ಡ ರಸ್ತೆ ಸಿಕ್ಕಿತು. ಎದುರು-ಬದುರು, ನಾಲ್ಕು-ನಾಲ್ಕು ಮೋಟಾರು ಬಸ್ಸುಗಳು ಎದೆಗೆ ಎದೆ ಸಮಗೂಡಿಸಿ ಹೋಗಬಹುದಾದ ರಸ್ತೆ. ಮಧ್ಯದಲ್ಲೆಲ್ಲೋ ರಸ್ತೆ ಎಡಕ್ಕೆ ಬಸ್ಸು ನಿಂತಿತು. ಎಲ್ಲರೂ ಇಳಿದೆವು. ಪ್ಯಾಲೆಸ್ ಹೋಟೇಲ್ ಅಂತ ದೊಡ್ಡ ವಿದ್ಯುತ್ ಹಲಗೆ ಮಿಣುಕುತ್ತಿತ್ತು.

ಹೋಟಲೊಳಕ್ಕೆ ಕಾಲಿಟ್ಟೆವು. ಮೊದಲು ಹೋದ ಧಡಿಯ ಸ್ವಲ್ಪ ಜಾರಿದ. ಜಾರಿದವ ಬೇಗ ಎಚ್ಚೆತ್ತು ಸಗಣಿ ಮೇಲೆ ನಡೆಯೋನ ಹಾಗೆ ಮೆಲ್ಲಮೆಲ್ಲಗೆ ಖಾಲಿ ಇದ್ದ ಕುರ್ಚಿ ಬಳಿಗೆ ಹೋಗಿ ಕುಳಿತ. ಇದನ್ನು ನೋಡುತ್ತಿದ್ದಾಗ ನಾನು ಬಾಗಿಲ ಹತ್ತಿರವಿದ್ದ ಕಾಲ್ಹಾಪೆ ಮೇಲೆ ನಿಂತಿದ್ದೆ. ಹುಷಾರಾದೆ. ಹೆಜ್ಜೆಯ ಮೇಲೊಂದ್ಹೆಜ್ಜೆಯನಿಕ್ಕುತ, ಗೆಜ್ಜೆಯ ಕಾಲಶಬ್ದವ ಮಾಡದೆ, ಮೆಲ್ಲಗೆ ಹತ್ತಿರವಿದ್ದ ಕುರ್ಚೀನ ನಾನೂ ಹಿಡಿದು ಕೂತೆ. ಕೂತ ಮೇಲೆ ಬೂಡ್ಸಿನ ಅಂಗಾಲು ನೋಡಿದೆ,

ಸಿಡುಬೆದ್ದ ಕಲೆ ಅದಕ್ಕಿತ್ತು. ಅಷ್ಟು ಹೊತ್ತಿಗೆ ಸರ್ ಅಂತ ಹರಿದ ಶಬ್ದವಾಯಿತು. ಕಣ್ಣೆತ್ತಿದೆ. ಏನು ಕಂಡಿದ್ದು ಅಂತೀರಿ!

ನಾನು ಕೂತಿದ್ದ ಕಡೆಯಿಂದ ಎಡಭಾಗದಲ್ಲಿ ಇಪ್ಪತ್ತು ಹೆಜ್ಜೆ ಹಾಕಿದರೆ ಹೋಟೇಲಿನ ಕಚೇರಿ ವರ್ಗದವರು ಕೆಲಸ ಮಾಡುವ ದೊಡ್ಡ ಮೇಜು. ಬಲಭಾಗದಲ್ಲಿ ಇಪ್ಪತ್ತು ಹೆಜ್ಜೆ ನಡೆದರೆ ಮಹಡಿಗೆ ಹೋಗುವ ಎತ್ತೇಣಿಗಳ ಕೊಠಡಿ.

ಕಣ್ಣೆತ್ತಿ ನೋಡಿದಾಗ, ಎಡಗಡೆ ಕೌಂಟರಿನಿಂದ, ಬಲಗಡೆ ಎತ್ತೇಣಿ ಬಳಿಗೆ ನಲವತ್ತೂ ಗಜ ದೂರವನ್ನು ಸುರಸುಂದರಿಯೊಬ್ಬಳು "ಜಾರು"ತ್ತಿದ್ದಳು. ಸುಮಾರು ಆರಡಿ ಎತ್ತರವಿರಬಹುದು ಆಕೆ, ಆ ಊರಿನವರೆಲ್ಲರ ತರಹ! ಸೊಂಟಕ್ಕೆ ಅವಳೇನಾದರೂ ಪಟ್ಟಿ ಮಾಡಿಸಬೇಕಾದರೆ ಹನ್ನೆರಡು ಅಂಗುಲದ್ದೇ ಸಾಕಾಗ್ತಿತ್ತು. ಎಳೆ ಮುಖ. ಇನ್ನೂ ಚಿಗಳಿ ತಿಂದ ಕಳೇನೇ ಇರಲಿಲ್ಲ. ಚೂಪಾದ ಹಿಮ್ಮಡಿ ಇದ್ದ ಥಳಥಳಿಸುತ್ತಿದ್ದ ಷೂಗಳನ್ನು ಹಾಕಿಕೊಂಡಿದ್ದಳು. ಕೌಂಟರಿನ ಹತ್ತಿರ ಹೋಗಿ ತನ್ನ ಕೊಠಡಿಯ ಬೀಗದಕೈ ತೆಗೆದುಕೊಂಡಿದ್ದಳು. ಅವಸರದ ವಯಸ್ಸು, ಬೇಗ ತಿರುಗುತ್ತಿದ್ದಳು. ಆಗಲೇ ಹಿಮ್ಮಡಿಯ ಚೂಪು ನುಣುಪಾದ ನೆಲದಮೇಲೆ ಅಪ್ಪಾಲೆ ತಿಪ್ಪಾಲೆ ತಿರುಗಿತ್ತು. ಅದೇನೇನೋ ಸರ್ರ್! ಅಂತ ನನ್ನ ಎಚ್ಚರಗೊಳಿಸಿದ್ದು! ನೋಡ್ತಾನೇ ಇದೀನಿ. ಬಲಗಾಲನ್ನು ಮುಂದಿಟ್ಟಳು. ಜಾರಿದಳು. ಬಲಗಾಲು ಮುಂದ್ಹೋಯ್ತು. ಎಡಗಾಲು ಹಿಂದಾಯ್ತು. ಕತ್ತರಿ ತರಹ ಕೂತುಕೊಂಡಳು. ಅರೆಕ್ಷಣ ಚಿಮ್ಮಿ ನಿಂತಳು. ತಿರುಗಿ ನಾಲ್ಕು ಗಜ ಜಾರಿದಳು. ನಾಲ್ಕು ಸರ್ತಿ ಹೀಗೆ "ಕತ್ತರಿ ನಾಚು" ಮಾಡೋವೇಳೆಗೆ ಎತ್ತೇಣಿ ಬಾಗಿಲ ಹತ್ತಿರಕ್ಕೆ ಹೋಗಿದ್ದಳು. ಎತ್ತೇಣಿ ಬಾಗಿಲು ತೆಗೆದಿತ್ತು. ಅದನ್ನು ಸೇರಿಕೊಂಡಳು, ಮುಖ ಒರೆಸಿಕೊಂಡಳು. ಎತ್ತೇಣಿ ಬಾಗಿಲು ಮುಚ್ಚಿಕೊಂಡಿತು. ಆಗ ನಾನು ಮುಖ ಒರೆಸಿಕೊಂಡೆ. ಎಲ ಎಲ! ನನಗೆ ಹೀಗಾಗಿದ್ದರೆ! ನಾನು ಮೊದಲೇ ಹುಷಾರಾಗಿಲ್ಲದಿದ್ದರೆ ಇದ್ದುದೊಂದು ಷರಾಯನ್ನ ಹರಿದುಕೊಂಡು ಬಿಡ್ತಿದ್ದೆನಲ್ಲಾ! ದೇವರೇ ಕಾಪಾಡಿದ. ನೆಲನೋಡಿಕೊಂಡು ನಡೀಬೇಕು. ಈ ಹೋಟಲಲ್ಲಿ ಬಂದೋರು ಹೋದೋರನ್ನ ನೋಡ್ತಾ ಇದ್ದರೆ ಉಡುಪಿಗೆ ಊನ, ಅನ್ನೋ ವಿಷಯವನ್ನು ಮಂದಟ್ಟು ಮಾಡಿಕೊಂಡೆ.

"ಈ ಬೆಳಿಗ್ಗೇನೆ ಊರು ನೋಡಿಕೊಂಡು ಬರೋಣ! ಮಳೆ ಬರ್ತಾ ಇದೆ. ಆಸ್ಪತ್ರೆಗಳನ್ನು ನೋಡಲು ಈಗ ಸಾಧ್ಯವಿಲ್ಲ. ಬೇಗ ಫಲಾಹಾರ ಮುಗಿಸಿ" ಎಂದು "ಮಾರ್ಗ ಮಿತ್ರ" ಹೇಳಿದ. ಫಲಾಹಾರ ಅಂತಿದ್ದ ಹಾಗೇನೇ ಎಲ್ಲರೂ ಶಾಖಾಹಾರಿಗಳು ಧೌಡು ಓಡಿದೆವು, ಇದ್ದ ಬ್ರೆಡ್ಡು ಬೆಣ್ಣೆಗಳನ್ನೆಲ್ಲಾ ಲಪಟಾಯಿಸಿಬಿಟ್ಟರೆ ಆಮೇಲೆ ಹೇಗಾರೂ ಆಗಲಿ ಅಂತ. ನಮ್ಮ ಮೇಜಿನ ಬಳಿಗೆ ಬಂದ ಮಾಣಿ ಬಲು ಚೆನ್ನಾಗಿ ಇಂಗ್ಲೀಷ್ ಮಾತನಾಡುತ್ತಿದ್ದ. ೧೮-೨೦ರ ಚೆಂದುಳ್ಳಿ ಗಂಡು: ನಿಮ್ದು ಯಾವೂರಪ್ಪ ಯಾವ ಸೀಮೆಯೋನು ಎಂದು ಕೇಳಿದೆ. ಅವನಂದ, "ನಾನು ಇಂಗ್ಲೆಂಡಿನೋನು, ಲಂಡನ್ನೇ ಹುಟ್ಟೂರು. ಅಡಿಗೆ ಕೆಲಸ ಕಲಿತುಕೊಳ್ಳುಕ್ಕೆ ಅಂತ ಮೂರನೆ ವರ್ಷದ ವ್ಯಾಸಂಗಕ್ಕೆ ನಮ್ಮನ್ನ ಹೊರದೇಶಗಳಿಗೆ ಕಳಿಸ್ತಾರೆ; ನನ್ನ ಇಲ್ಲಿಗೆ ಕಳಿಸಿದರು. ಶಾಖಾಹಾರದ ಪ್ರವೀಣತೆಗೆ ನಾನು ವ್ಯಾಸಂಗ ಮಾಡ್ತಾ ಇದೀನಿ ಅಂದ. "ಹಾಗಾರೆ ನಮಗೆ ಒಳ್ಳೇದೇ ಆಯಿತು. ಏನಡಿಗೆ ಇವತ್ತು ನಿಮ್ಮನೇಲಿ? ನಮಗೆ ಸಪ್ಪೆ ಅಂದರೆ ಸೇರುಲ್ಲ ನೋಡಪ್ಪ! ಕಡೆಗೆ ಉಪ್ಪಿನಕಾಯೋ, ಚಟ್ನಿಪುಡೀನೋ ಇದ್ದರೆ

ಸಾಕು" ಎಂದೆ. ಅವ ನಕ್ಕ. ಹೊರಟುಹೋದ ಏನೇನೋ ತಂದು ಬಡಿಸಿದ. ಬಡಿಸಿದ ಊಟಕ್ಕಿಂತ ಹಾಕಿದ ತಟ್ಟೆ ಎಷ್ಟು ಲಕ್ಷಣವಾಗಿತ್ತು, ಅಂತ, ಹೊಳೀತಾ ಇತ್ತು.

ಒಂದು ಚಮಚ ಬಾಯಿಗೆ ಹಾಕಿಕೊಂಡೆ. ತಬ್ಬಲಿ ರುಚಿ. ಅಸಹ್ಯ ಆಗೋ ಹಾಗೇನಿತ್ತಿಲ್ಲ. ಆದರೆ ಅದಕ್ಕೆ ತಂದೆ ತಾಯಿ ಇತ್ತಿಲ್ಲ. ಗೋತ್ರ ಪ್ರವರ ಇತ್ತಿಲ್ಲ. ಎಲ್ಲೋ ಹುಟ್ಟಿ ಹೇಗೋ ಬೆಳೆದು, ಬೇಯಿಸಿಕೊಂಡು ಬಿದ್ದಿತ್ತು ನಮ್ಮ ಮುಂದೆ. ಬ್ರೆಡ್ಡು ಚೂರನ್ನು ತೆಗೆದುಕೊಂಡೆ. ಅದೇತಾನೇನೆ ಆ ದೇಶಗಳಲ್ಲಿ ಜೀವನದ ಊರುಗೋಲು!

ಅಷ್ಟು ಹೊತ್ತಿಗೆ ಆ ಇಂಗ್ಲೀಷ್ ಮಾಣಿ ಬಂದ. ಒಂದು ಸಣ್ಣ ಡಬ್ಬೀನ ತಂದಿದ್ದ. ಅದನ್ನು ನನ್ನೆದುರಿಗೆ ಇಟ್ಟ. "ಲಂಡನ್ನನಲ್ಲಿದ್ದಾಗ ದೇವರಾಯ ಸಮುದ್ರದವರು ಒಬ್ಬರು ಸಂಸಾರ ಮಾಡಿಕೊಂಡಿದ್ದರು. ಅವರ ಮನೆಗೆ ಆಗಾಗ್ಗೆ ಹೋಗ್ತಾ ಇದ್ದೆ. ಅವರ ಮನೇಲಿ ಹಿಟ್ಟನ್ನು ಉಬ್ಬಿಸಿ ಬನ್ ತರಹ ತಿಂಡಿ ಮಾಡ್ತಾ ಇದ್ದರು. ಈ ಪುಡೀನ ಅದಕ್ಕೆ ಹಾಕಿಕೊಂಡು ಬೆಣ್ಣೆ ಸವರಿ ತಿಂದರೆ ರುಚಿ ಏರುತ್ತಿತ್ತು. ಅವರಿಂದಲೇ ನಾನು ಒಂದು ಪುಟ್ಟಡಬ್ಬ ಇಸುಕೊಂಡು ಈ ಊರಿಗೆ ಬಂದೆ ಬೇಜಾರಾದಾಗ ಕೈನೆರವಾಗಿರಲಿ ಅಂತ. ನಿಮ್ಮನ್ನು ನೋಡಿದಾಗ, ಕೊಡೋಣ ಸ್ವಲ್ಪ ಅನ್ನಿಸ್ತು" ಅಂದ. ಕರಿಬೇವಿನಸೊಪ್ಪು, ಮೆಂತ್ಯ, ಹುರಿಗಡಲೆ, ದಿಟವಾಗಲೂ ಅಂಥ ಚಟ್ನಿಪುಡೀನ ನಮ್ಮೂರಲ್ಲಿದ್ದಾಗಲೂ ತಿಂದಿರಲಿಲ್ಲ. ಏನು ತಂದು ಬಡಿಸಿದ್ದನೋ ಅದಕ್ಕೆಲ್ಲ ಇದನ್ನು ಕಲೆಸಿ ತಿಂದೆ, ತೇಗಿದೆ. 'ಅನ್ನದಾತಾ ಸುಖೀಭವ' ಅಂತ ಹೇಳಿ ಆ ಮಾಣಿಗೆ 'ದೀರ್ಘಾಯುಷ್ಯಮಸ್ತು' ಅಂತ ಸಂಸ್ಕೃತದಲ್ಲೇ ಆಶೀರ್ವಾದ ಮಾಡಿದೆ.

ಅಲ್ಲಿಂದ ಬಸ್ಸಿನಲ್ಲಿ ಎಲ್ಲರೂ ಕುಳಿತೆವು. ಮಾರ್ಗಮಿತ್ರ ತನ್ನ ವರದಿಯನ್ನು ರಷ್ಯಾದಲ್ಲಿನಂತೆಯೇ ಶುರುಹಚ್ಚುತಾನೆ ಅಂತಿದ್ದೆ. ಆದರೆ ಅವನು ನಾಲಿಗೇನು ಛೂಬಿಟ್ಟಾಗ, ಅದಕ್ಕೇನು ಅಂಕೆ ಶಿಕ್ಷೆ ಇದ್ದ ಹಾಗಿರಲಿಲ್ಲ. ಸರ್ಕಾರ, ಅಧಿಕಾರಗಳು ಅನ್ನೋ ಭಯವೇ ಇರಲಿಲ್ಲ. "ನಮ್ಮದು ಸಮತಾ ಸಮಾಜ. ನಮ್ಮ ನೆರೆಯವರದು—" ಅಂತ ಪೂರ್ವದ ಕಡೆಗೆ ಬೆರಳತೋರಿಸಿ, "ಕಮ್ಯೂನಿಸಂ! ನಮ್ಮಲ್ಲೂ ಕಮ್ಯೂನಿಷ್ಟರು ಇದಾರೆ. ಸಾಕಷ್ಟು ಇದಾರೆ. ಆದರೆ ಪ್ರಜೆಗಳ್ಯಾರೂ ಲಕ್ಷ್ಯವೇ ಮಾಡುಲ್ಲ. ಇವರಾದರೇನು, ಅವರಾದರೇನು, ಇಬ್ಬರೂ ಒಂದೇ ಮಾಡೋದು. ಅವರು ಮಾಡೋದು ಮಾಡಿ ಕೊಳ್ಳಲಿ. ನಮಗೆ ಮಾತನಾಡುಕ್ಕೆ ಸ್ವಾತಂತ್ರ್ಯ ಇದ್ದರೆ ಸಾಕು" ಎಂದು ಪೀಠಿಕೆ ಹಾಕುತ್ತ.

ಆ ಸ್ಥಳ, ಈ ಕಟ್ಟಡ, ದೊಡ್ಡ ನಾಲೆ, ಚಿಕ್ಕ ನಾಯಿ ಎಲ್ಲವನ್ನೂ ವಿವರಿಸ್ತಾ ವಿವರಿಸ್ತಾ, ನೀವೇನಾದರೂ ಕೇಳೋದಿದ್ದರೆ ಕೇಳಿ ಅಂತ ಹೇಳಿದ.

ಅಷ್ಟೊ ದೂರ ರಸ್ತೆಯ ಎರಡೂ ಕಡೆಗಳಲ್ಲಿ, ನಮ್ಮ ಹಳ್ಳಿ ಸಂತೇಲಿ ಗಾಡಿಗಳನ್ನು ಒಂದರ ಹಿಂದೆ ಒಂದು ಬಿಚ್ಚಿ ಬಿಟ್ಟಿರುಲ್ಲವೇ, ಹಾಗೆ, ಅಲ್ಲಿ ತರಹಾವಾರಿ ಮೋಟಾರುಗಳು ನಿಂತಿದ್ದುವು. ಒಂದು ರಸ್ತೇಲಿ ಸುಮಾರು ೬೦-೮೦. ಎಂಟಡಿ ಕಂಚಿ ಕಡಸಿನಿಂದ ಶುರುವಾಗಿ, ಹದಿನಾರಡಿ ಹುಲಿ, ಮೂವತ್ತಡಿ ತಿಮಿಂಗಿಲದ ತರಹ ಇದ್ದ ಮೋಟಾರು ಗಾಡಿಗಳು—ಇವನ್ನು ಕಂಡು ಹೊಟ್ಟೆಗಿಚ್ಚಾಗಿತ್ತು.

"ಇದೇನು ಇಷ್ಟು ಮೋಟಾರುಗಳು, ಈ ಊರಲ್ಲಿ! ಬಿಕೋ ಅಂತ ಬೀದಿ ಬಸವಗಳ ಹಾಗೆ ಬಿದ್ದಿವೆಯಲ್ಲಾ" ಎಂದು ಕೇಳಿದೆ.

ಮಾರ್ಗಮಿತ್ರ ರಸ್ತೇನ ನೋಡಿದ. "ನಿಮ್ಮ ಪ್ರಶ್ನೆ ಅರ್ಥವಾಯಿತು. ನಮ್ಮೂರಲ್ಲಿ ಆರು ಜನಕ್ಕೆ ಒಂದು ಮೋಟಾರುಕಾರು ಇದೆ. ಎಲ್ಲ ತರಹಾ ಕಾರುಗಳೂ ಇವೆ. ಮೂರು ಜನಕ್ಕೆ ಒಂದು ಮನೆ ಇದೆ. ಇಬ್ಬರಿದ್ದರೆ ಮನೆ; ಮೂರು ಜನ ಇದ್ದರೆ ಸಂತೆ ಅಲ್ಲವೇ? ಮೂರು ಹೆಂಗಸರಿದ್ದಾರೆ ಒಬ್ಬ ಗಂಡಸಿಗೆ. ಎಲ್ಲಾ ತರಹಾ ಹೆಂಗಸರೂ ಇದ್ದಾರೆ, ಎಲ್ಲಾರು ಸಂಪಾದಿಸ್ತಾರೆ. ಗಂಡಸರು ಖುಷಿಯಾಗಿದ್ದಾರೆ. ಅದಕ್ಕೇ ನೋಡಿ, ಜೋಡಿಗೊಂದು ಕಾರು ಬೇಕೇಬೇಕು. ಮನೆ ಮಡದಿ ಇದ್ದರೆ ಬೇಕೇಬೇಕು. ಮನೆ ಇಲ್ಲದೆ ಇದ್ದರೆ ಅತ್ಯವಶ್ಯಕ" ಎಂದ.

ನನಗೆ ಎರಡು ಕಾರಿದೆ ಆದರೆ ನನ್ನ ಹೆಂಡತಿಗೆ ಗೊತ್ತಿಲ್ಲ ಅಂತ ಕಣ್ಣು ಹೊಡೆದ. ೫೦ರ ಪ್ರಾಯ ಮಾರ್ಗಮಿತ್ರನಿಗೆ. ಈಗರ್ಥವಾಯ್ತು "ಸ್ಟಕ್ ಹೋಂ" ಅಂತ ಯಾಕೆ ಕರೀತಾರೆ ಅಂತ. ಸ್ಟಾಕ್ ಇಲ್ಲ ಹೋಂನಲ್ಲಿ ಪಾಪ! ಸ್ಟಕ್!

ಮಾರನೆಯ ದಿನ ಸ್ಟಾಕ್ ಹೋಂಇನ ಪ್ರಸಿದ್ಧ ಸೆರಾಫಿಂ ಆಸ್ಪತ್ರೆಗೆ ಯಾತ್ರೆ ಹೊರಟೆವು. ಪುಟಾಣಿ ರಾಜ್ಯದಂತಿರುವ ಈ ಅಗಾಧ ಆಸ್ಪತ್ರೆಯಲ್ಲಿ ಒಂದು ಕಡೆಯಿಂದ ಎದುರು ತುದಿಗೆ ಹೋಗಬೇಕಾದರೆ, ತಿರುಪತಿ ಬೆಟ್ಟ ಹತ್ತಿದಷ್ಟು ಸುಸ್ತಾಗುತ್ತದೆ. ವೈದ್ಯ ವಿಜ್ಞಾನದ ಎಲ್ಲ ಭಾಗಗಳೂ ಇಲ್ಲಿ ಅತ್ಯುತ್ತಮ ರೀತಿಯಲ್ಲಿ ಕೆಲಸ ಮಾಡುತ್ತಿವೆ. ವೈದ್ಯರೆಲ್ಲರೂ ಹೊಟ್ಟೆ ತುಂಬಿದ ಸಂತಸದಿಂದಿದ್ದವರಂತೆ ಕಾಣಿಸಿದರು. ರೋಗಿಗಳೂ ಹಾಗೆಯೇ. ಬಡವರು ಯಾರು ಶ್ರೀಮಂತರು ಯಾರು ಎಂದು ಆಸ್ಪತ್ರೆಯ ರೋಗಿಗಳಲ್ಲಿ, ಗುರುತಿಸುವುದು ಕಷ್ಟ ಕಂಡಿತು.

ಇಷ್ಟಕ್ಕೆಲ್ಲಾ ಆಗುವ ಖರ್ಚನ್ನು ಸರಕಾರ ಹೇಗೆ ವಹಿಸಲು ಸಾಧ್ಯ ಎಂದು ಅಚ್ಚರಿಪಟ್ಟೆ. ನಮ್ಮ ಜತೆಯಿದ್ದ ಸ್ವೀಡಿಷ್ ಡಾಕ್ಟರನ್ನು ಕೇಳಿದಾಗ ಆತ ವಿವರಣೆ ಕೊಟ್ಟ. "ಎಲ್ಲ ಪ್ರಜೆಗಳೂ ಆರೋಗ್ಯ ವಿಮೆಗೆ ಒಳಗಾಗಿದ್ದಾರೆ. ಆದುದರಿಂದ ಯಾರಾದರೂ ಕಾಯಿಲೆ ಬಿದ್ದರೆ, ವಿಮಾ ಕಂಪೆನಿಯು ಚಿಕಿತ್ಸಾ ವೆಚ್ಚವನ್ನೆಲ್ಲಾ ಹೊರುತ್ತದೆ. ಹಾಗಾಗಿ ಅತ್ಯುತ್ತಮ ವೈದ್ಯಕೀಯ ನೆರವನ್ನು ನೀಡಲು ಸುಲಭ" ಎಂದು.

ವೈದ್ಯಕೀಯ ವಿಜ್ಞಾನದ ನೊಬೆಲ್ ಪಾರಿತೋಷಕಗಳನ್ನು ನಿರ್ಣಯಿಸುವ ಸಂಸ್ಥೆಯ ಹಲವಾರು ಸದಸ್ಯರು ಈ ಆಸ್ಪತ್ರೆಯಲ್ಲಿ ಹಿರಿಯ ವೈದ್ಯರಾಗಿದ್ದಾರೆ. ಅಂದಮೇಲೆ ಆಸ್ಪತ್ರೆಯ ವೈದ್ಯ ವಿಜ್ಞಾನದ ಉನ್ನತ ಮಟ್ಟವನ್ನು ಸುಲಭವಾಗಿ ಊಹಿಸಬಹುದು.

ಸಾಮಾಜಿಕ ವೈದ್ಯ ನೆರವು, ಮತ್ತು ಆ ತೆರನಾದ ವಿಷಯಗಳ ಮೇಲೆ ಆಸ್ಪತ್ರೆಯ ವೈದ್ಯರುಗಳು ಭಾಷಣಗಳನ್ನಿತ್ತರು. ಸ್ವೀಡಿಷ್ ಭಾಷೆಯನ್ನು ಎಲ್ಲರೂ ಮಾತನಾಡುವುದಾದರೂ, ಸುಮಾರು ಜನರಿಗೆ ಇಂಗ್ಲಿಷ್ ಚೆನ್ನಾಗಿ ಗೊತ್ತು. ಹಾಗಾಗಿ ಭಾಷಾ ಬಹಿಷ್ಕಾರವನ್ನು ನಾವು ಅನುಭವಿಸಲಿಲ್ಲ.

ವೈದ್ಯ ಯಂತ್ರಗಳನ್ನು ತಯಾರಿಸುವ ಹಿರಿಯ ಸಂಸ್ಥೆಗೆ ಮಧ್ಯಾಹ್ನ ಭೇಟಿ ಏರ್ಪಡಿಸಲಾಗಿತ್ತು. ಸ್ಟೈನ್‌ಲೆಸ್ ಸ್ಟೀಲಿಗೆ ಹೆಸರಾದ ಸ್ವೀಡನ್ನಿನಲ್ಲಿ ಉತ್ತಮ ಶಸ್ತ್ರೋಪಕರಣಗಳನ್ನು ತಯಾರಿಸುವುದು ಸ್ವಾಭಾವಿಕ. ಆದರೆ ಮೋಜು ಕಂಡ ಒಂದು ವಿಷಯವೆಂದರೆ, ಜರ್ಮನಿಯ ಹೆಸರಾಂತ ಸಂಸ್ಥೆಯೊಂದರ ಪರವಾಗಿ ಇಲ್ಲಿ ಯಂತ್ರೋಪಕರಣಗಳನ್ನು ತಯಾರಿಸುತ್ತಿದ್ದರು. ಜರ್ಮನ್ ಸಂಸ್ಥೆಯ

ಗುರುತು ಚೀಟಿಯನ್ನು ಇಲ್ಲೇ ಲಗತ್ತಿಸುತ್ತಿದ್ದರು. ಮುಂದುವರೆದ ರಾಷ್ಟ್ರಗಳ ಪರಸ್ಪರ ಸಹಾಯದ ಮಾದರಿ ಇದು! ಹಿಂದುಳಿದ ರಾಷ್ಟ್ರಗಳ ಕಣ್ಣಿಗೆ ಮಣ್ಣೆರೆಚುವುದಕ್ಕೆ!!

ಸ್ಟಕ್‌ಹೋಮಿನ ಪ್ರಸಿದ್ಧ ಆಸ್ಪತ್ರೆಗಳಲ್ಲಿ ಕೆರೊಲಿನ್ಸ್ಕಾ ಅಗ್ರಸ್ಥಾನವನ್ನು ಹೊಂದಿದೆ. ಈ ಆಸ್ಪತ್ರೆಗೆ ಯಾತ್ರೆ ಹೋದಾಗ, ನಮ್ಮ ತಂಡದವರನ್ನು ಮೂರು ಭಾಗಗಳನ್ನಾಗಿ ಮಾಡಿ, ಒಂದೊಂದು ತಂಡದ ೨೦ ಜನರನ್ನು ಒಬ್ಬೊಬ್ಬ ವೈದ್ಯರು ಆಸ್ಪತ್ರೆಯ ವಿವಿಧ ಭಾಗಗಳ ಭೇಟಿಗೆ ಕರೆದುಕೊಂಡು ಹೋದರು. ನಮ್ಮ ತಂಡ ಮೊದಲು ಮಕ್ಕಳ ವಿಭಾಗಕ್ಕೆ ಹೋಯಿತು. ಎಂಟು ಮಹಡಿ ಇರುವ ಈ ಆಸ್ಪತ್ರಾ ವಿಭಾಗವು ಮಕ್ಕಳಿಗೆ ಮೀಸಲು. ನಾಲ್ಕು ಮಕ್ಕಳಿಗೆ ಒಂದು ವಾರ್ಡು. ಒಂದು ವಾರ್ಡಿಗೆ ಒಂದು ದಾದಿ. ಹನ್ನೆರಡು ವಾರ್ಡುಗಳು, ಡಾಕ್ಟರು, ದಾದಿಗಳ ಕೊಠಡಿಗಳು, ಪರೀಕ್ಷಾ ಕೊಠಡಿ, ಇಷ್ಟೂ ಒಂದು ಮಹಡಿಯಲ್ಲಿ. ಮಕ್ಕಳ ಶಸ್ತ್ರ ಚಿಕಿತ್ಸೆಗೆಂದೇ ಎರಡು ಮಹಡಿಗಳು ನಿಯಮಿತವಾಗಿದೆ. ಸ್ನಾತಕೋತ್ತರ ಅಭ್ಯಾಸಕ್ಕೆ ನಮ್ಮ ಭಾರತೀಯ ವೈದ್ಯನೊಬ್ಬ ಅಲ್ಲಿ ಕೆಲಸ ಮಾಡುತ್ತಿದ್ದ. ತೆಲುಗಿನಲ್ಲಿ ಅವನೊಡನೆ ಮಾತನಾಡಿದಾಗ, ಏನೋ ಐಶ್ವರ್ಯ ದೊರಕಿದವನಂತೆ ಆತ ಹಿಗ್ಗಿದ. ಏನೆಲ್ಲಾ ಕಲಿತೆ ಎಂದು ಕೇಳಿದೆ. ಮಕ್ಕಳ ಶಸ್ತ್ರ ಚಿಕಿತ್ಸೆಯ ಹಲವಾರು ಮುಖ್ಯ ವಿಷಯಗಳನ್ನು ಕಲಿತೆ. ಆದರೆ ನಮ್ಮೂರಿಗೆ ಹೋದಮೇಲೆ ಈ ಜ್ಞಾನವನ್ನು ಉಪಯೋಗಿಸಲು ಸಾಧ್ಯವಾಗಲಾರದು, ಅಲ್ಲಿನ ಪರಿಸ್ಥಿತಿಯೇ ಬೇರೆ ಇಲ್ಲಿನ ಪರಿಸ್ಥಿತಿಯೇ ಬೇರೆ. ಆದರೆ ಇಲ್ಲಿ ಕಲಿತು ಕಂಡುದನ್ನೆಲ್ಲಾ ಒಂದು 'ವರದಿ'ಯಲ್ಲಿ ಬರೆದು ನಮ್ಮ ಅಧಿಕಾರಿಗಳಿಗೆ ಕಳಿಸಿದರೆ ನನ್ನ ಭವಿಷ್ಯವಾದರೂ ಉತ್ತಮವಾಗಬಹುದು ಎಂದು ಹೇಳಿದ.

ಆನಂತರ X ray ವಿಭಾಗಕ್ಕೆ ಹೋದೆವು. ನಮ್ಮೂರಿನ ದೊಡ್ಡ ಆಸ್ಪತ್ರೆಯಷ್ಟು ಆ ವಿಭಾಗ. ಏನೆಲ್ಲಾ ಯಂತ್ರಗಳು! ಎಷ್ಟೆಲ್ಲಾ ಆಧುನಿಕವಾದ ಸಲಕರಣೆಗಳು! ಎಂತೆಂತಹ ಸೌಕರ್ಯಗಳು ರೋಗಿಗಳಿಗೆ!! ಎಲ್ಲೆಲ್ಲೂ ಟೆಲಿವಿಷನ್ ಸೌಕರ್ಯ!!

ಆರನೆ ಮಹಡಿಯಿಂದ ಕೆಳಗೆ ಇಳಿಯಲು ಐದು ಜನ ನಾವು ಮತ್ತು ಆಸ್ಪತ್ರೆಯ ಸಿಬ್ಬಂದಿಯೊಬ್ಬ ಎತ್ತೇಣಿಯಲ್ಲಿ ನಿಂತೆವು. ಎತ್ತೇಣಿ ಇಳಿಯಿತು. ನೆಲದ ಮಟ್ಟಕ್ಕೆ ಬಂದು ನಿಂತಿತು. ಆದರೆ (ಲಿಫ್ಟಿನ) ಎತ್ತೇಣಿಯ ಬಾಗಿಲನ್ನು ತೆಗೆಯಲಾಗಲಿಲ್ಲ. ಕಾರಣ, ನೆಲದ ಮಟ್ಟಕ್ಕಿಂತ ಮೂರು ಅಂಗುಲ ಕೆಳಕ್ಕೆ ಲಿಫ್ಟ್ ಇಳಿದಿತ್ತು. ನಾವೆಲ್ಲ ಎಷ್ಟು ಕೂಗಿದರೂ ಯಾರಿಗೂ ಕೇಳಿಸುತ್ತಿರಲಿಲ್ಲ. ಆಕಸ್ಮಿಕವಾಗಿ ಯಾರೋ ಬಂದು ಲಿಫ್ಟಿನ ಪುಟಾಣಿ ಕಿಟಕಿಯಲ್ಲಿ ನಮ್ಮನ್ನು ಕಂಡು ತಲೆ ಅಲ್ಲಾಡಿಸಿ ಹೋದರು.

ಒಂದು ಯುಗವಾಯಿತು. ನಾವೆಲ್ಲಾ ಬೆವತುಹೋಗಿದ್ದೆವು. ಉಸಿರು ಕಟ್ಟುತ್ತೇನೋ ಇನ್ನೊಂದು ಯುಗ ಆದರೆ, ಅನ್ನುವ ಹೆದರಿಕೆ ಬೇರೆ. ಕಡೆಗೆ ಮೆಲ್ಲ ಮೆಲ್ಲಗೆ ಲಿಫ್ಟ್ ಎದ್ದಿತು. ಅಂಗುಲ ಅಂಗುಲವಾಗಿ ಎದ್ದಿತು. ಲಿಫ್ಟಿನ ಬಾಗಿಲು ತೆಗೆಯುವಂತಾದಾಗ ಜಿಂಕೆಗಳಂತೆ ನಾವೆಲ್ಲಾ ಒಟ್ಟಿಗೆ ಹೊರಕ್ಕೆ ಹಾರಿದೆವು.

ಅತ್ಯಾಧುನಿಕ ಸಲಕರಣೆಗಳಿರುವ, ಅಷ್ಟೈಶ್ವರ್ಯವನ್ನು ಖರ್ಚು ಮಾಡುವ ಈ ಹೆಸರಾಂತ ಆಸ್ಪತ್ರೆಯಲ್ಲೂ, ನಮ್ಮೂರ ತರಹಾ 'ಲಿಫ್ಟ್' ತೊಂದರೆಗಳೇ!!

ಸೆಪ್ಟಂಬರ್ ತಿಂಗಳಿನಲ್ಲಿ ನಾವು ಸ್ಟಾಕ್ ಹೋಂನಲ್ಲಿದ್ದುದು. ರಾತ್ರಿ ಎಂಟು ಗಂಟೆಯಾಗಲೂ, ಇಲ್ಲಿ ಬೇಸಿಗೆಯ ಸಂಜೆ ಐದರ ಹೊತ್ತಿನಲ್ಲಿರುವಷ್ಟು ಬೆಳಕು. ರಾತ್ರಿ ಊಟವೆಲ್ಲಾ ಬಿಸಿಲಡಿಗೆ ಊಟವೇ! ಕೊಠಡಿಯ ಕಿಟಕಿಗಳಿಗೆಲ್ಲಾ ದಪ್ಪನಾದ ಮುಸುಕು ಹಾಕಿ ಮಲಗಬೇಕು. ಬೆಳಿಗ್ಗೆ ನಾಲ್ಕರ ಹೊತ್ತಿಗೆ ತಿರುಗಿ ಬಿಸಿಲು. ಇನ್ನೂ ಉತ್ತರಕ್ಕೆ ಹೋದರೆ ಆರು ತಿಂಗಳು ಹಗಲು. ಆರು ತಿಂಗಳು ರಾತ್ರಿಯಂತೆ. ಹೊಸ ಸ್ಥಳ. ಹೊಸ ಹೊಸ ಮುಖಗಳು, ಹೊಟ್ಟೆಯುರಿಸುವ ಆಸ್ಪತ್ರಾ ಸೌಕರ್ಯಗಳು, ಹೊಸ ತರಹಾ ಊಟ; ಹೊಸ ತರಹಾ ಬಿಸಿಲು; ನಿದ್ರೆಯೇ ಬರುತ್ತಿರಲಿಲ್ಲ. ಮೂರು ದಿನವೂ ಒಂದು ರೀತಿಯಾಗಿ ಶಿವರಾತ್ರೆ ಜಾಗರಣೆ ಮಾಡಿದಂತೆಯೇ ಆಯಿತು. ಒಂದಿಷ್ಟು ಬಿಲ್ವಪತ್ರೆ ಇದ್ದಿದ್ದರೆ, ಅದನ್ನಾರೂ ಅರ್ಚಿಸಿ, ಪುಣ್ಯ ಕಟ್ಟಿಕೊಳ್ಳಬಹುದಾಗಿತ್ತು. ಶಿವಾಲಯ ಇತ್ತೇ ಅಲ್ಲಿ ಎಂದು ಕೇಳಿದಿರಾ? ಶಿವನಿಲ್ಲದ ತಾವುಂಟೇ?

ಸೆಪ್ಟಂಬರ್ ಎರಡರಂದು ಸ್ಟಾಕ್ ಹೋಂನ ಬ್ರಾ ವಿಮಾನ ನಿಲ್ದಾಣದಲ್ಲಿ ಕೋಪನ್ ಹ್ಯಾಗನ್ನಿಗೆ ಪ್ರಯಾಣ ಹೊರಟೆವು.

■

# ಕೂಗು ಮಾರಿ ಕತೆ

**ಸ**ಕತ್ ಸನ್ನಿ ಬಂದವರು ಬಡ ಬಡ ಅಂತ ಅರ್ಥವಿಲ್ಲದ ಮಾತಾಡಿಕೊಳ್ಳುತ್ತಾರಲ್ಲ! ಅಂತಹವರು ಆಗ ಸತ್ತುಹೋದರೆ, ಕೂಗುಮಾರಿಯರಾಗುತ್ತರಂತೆ. ರಾತ್ರಿಹೊತ್ತು ಬಂದು ಬಾಗಿಲು ತಟ್ಟುತ್ತಾರಂತೆ. ಪೆಚ್ಚುಪೆಚ್ಚಾಗಿ ಬಾಗಿಲು ತೆಗೆದರೆ ಒಳಕ್ಕೆ ಬಂದು ಮನೇಲಿ ಸೇರಿಕೊಂಡು ಯಾರನ್ನಾದರೂ ಹಿಡಿದುಕೊಂಡು ಬಿಡ್ತಾರಂತೆ. ಆದರೆ ಬಾಗಿಲಮೇಲೆ ಮೂರುನಾಮ ಬಳಿದು ನಾಳೆ ಅಂತ ಬರೆದರೆ, ಕೂಗು ಮಾರಿ ಬಂದು ಬಾಗಿಲ ತಟ್ಟುಕ್ಕೆ ಮುಂಚೆ, ಬರೆದಿದ್ದನ್ನು ಓದುತ್ತಂತೆ. ಓಹೋ! ನಾಳೆ ಅಂತ ಬರೆದಿದ್ದಾರೆ, ನಾಳೆ ಬಂದು ಬಾಗಿಲು ತಟ್ಟಿದರೆ ಬಾಗಿಲು ತೆಗೆಯುತ್ತಾರೆ ಅಂತ ತಿಳಿದುಕೊಂಡು, ಬಾಗಿಲು ತಟ್ಟದೆ ಹೊರಟು ಹೋಗುತ್ತಂತೆ.

ಇಂದಾನೊಂದು ಕಾಲದಲ್ಲಿ ಬಾಳಪೇಟೆಯ ಮೂರನೆ ಅಡ್ಡರಸ್ತೆಯಲ್ಲಿ ಹಳೆ ಕಾಲದ ಏಂಟಂಕಣದ ಮನೆ ಒಂದಿತ್ತಂತೆ. ಆ ಮನೆ ಬಾಗಿಲ ಮೇಲೆ ನಾಮವನ್ನೂ ಹಾಕಿತ್ತಿಲ್ಲವಂತೆ. ನಾಳೆ ಅಂತ ಬರೆದೂ ಇತ್ತಿಲ್ಲವಂತೆ. ರಾತ್ರಿಯಲ್ಲಿ ಬಂದ ಕೂಗು ಮಾರಿ ಬಾಗಿಲು ತಟ್ಟಿದಾಗ, ಮನೆಯ ಮೊದಲನೆಯ ಮಗನೇ ಹೋಗಿ ಬಾಗಿಲು ತೆಗೆದನಂತೆ. ಕೂಗು ಮಾರಿಗೆ ಬಲು ಖುಷಿಯಾಯ್ತಂತೆ. ಅವನನ್ನು ನಗುತಾ ತಬ್ಬಿಕೊಂಡು, ಕಡೆಗೆ ಮೆಟ್ಟಿಕೊಂಡಿತಂತೆ. ಯಾರೂ ಬಾಗಿಲ ಹೊರಗೆ ಇದ್ದುದನ್ನು ಕಾಣದೆ ಮನೆಯ ಮಗ ಬಾಗಿಲು ಹಾಕಿಕೊಂಡು, ಮಲಗಲು ಹಿಂತಿರುಗಿದಾಗ ಅವನ ತಲೆ ಸ್ವಲ್ಪ ಹಗುರಾದುದನ್ನು ಗಮನಿಸಿದನಂತೆ. ಬಾಗಿಲು ತೆಗೆದಾಗ ಥಂಡಿಯ ಹೊರಗಿನ ಗಾಳಿ ಬಡಿದು ಹೀಗಾಗಿರಬಹುದು ಎಂದು ಮನಸ್ಸಿನಲ್ಲಿಯೇ ಅಂದುಕೊಂಡನಂತೆ.

ಬೆಳಗಾಗಿ ಎದ್ದು ಎಲ್ಲರ ಜತೆಯಲ್ಲೂ ಕಾಫಿ ತಿಂಡಿಗೆ ಕುಳಿತಾಗ, "ಏನಮ್ಮಾ ಇದು, ಉಪ್ಪಿಟ್ಟಿಗೆ ಇಷ್ಟು ತುಪ್ಪ ಹಾಕಿದೀಯಲ್ಲಮ್ಮಾ; ಇಷ್ಟು ಜಿಡ್ಡುತಿಂದರೆ ಅಪ್ಪನಿಗೆ ರಕ್ತದ ಒತ್ತಡ ಹೆಚ್ಚಾಗುತ್ತಲ್ಲಮ್ಮಾ!" ಎಂದು ಶುರುಮಾಡಿದನಂತೆ. "ನಿಮ್ಮಪ್ಪನಿಗೆ ಬಡಿಸಿದ ಉಪ್ಪಿಟ್ಟಿಗೆ ತುಪ್ಪ ಹಾಕಿಲ್ಲ, ಮಗೂ, ನಿನಗೆ ಜಿಡ್ಡು ಇಷ್ಟ ಅಂತ ನಿನಗೆ ಬಡಿಸಿದ ಉಪ್ಪಿಟ್ಟಿಗೆ ಮಾತ್ರ ಬೆಣ್ಣೆಕಾಯಿಸಿದ ಘಂ ಅಂತಿರುವ ತುಪ್ಪವನ್ನು ಹೆಚ್ಚಾಗಿ ಕಲಸಿದೆ ಕಣಪ್ಪಾ!" ಎಂದು ಅಮ್ಮ ಸಮಾಧಾನ ಹೇಳಿದರೆ, "ನನಗೆ ರಕ್ತದ ಒತ್ತಡ ಬಂದರೂ ಪರವಾಗಿಲ್ಲ, ನಾವು ಐದುಜನ ಗಂಡು ಮಕ್ಕಳು: ಆದರೆ ಒಬ್ಬನೇ ಗಂಡ, ಅವನಿಗೆ ರಕ್ತದ ಒತ್ತಡ ಬರಬಾರದು ಅಂತಲೇನಮ್ಮಾ" ಎಂದು ವಿತಂಡಾವಾದವನ್ನು ಮುಂದು ಮಾಡಿದನಂತೆ.

"ಏನೋ, ಪ್ರೀತಿ ನಿನಗೆ ಅಂತ ತುಪ್ಪ ಕಲಿಸಿ ಉಪ್ಪಿಟ್ಟು ಬಡಿಸಿದರೆ ಸನ್ನಿ ಬಡಬಡಿಸೋ

ಹಾಗೆ ಏನೇನೋ ಅಂತೀಯಲ್ಲೋ, ಮಂಕು ಮುಂಡೇದೇ! ತೆಪ್ಪನೆ ಕೂತುಕೊಂಡು ತಿನ್ನು. ಬೇಡದೆ ಇದ್ದರೆ ಎದ್ದು ಹೋಗು" ಅಂತ ಅಪ್ಪ ಗದರಿಸಿಕೊಂಡರಂತೆ.

"ಇದ್ದ ವಿಷಯಾನ ಇದ್ದ ಹಾಗೆ ಹೇಳಿದರೆ, ಅದರ ಅರ್ಥ ಹೀಗಿರಬಹುದು ಎಂದು ವಿಚಾರ ಮಾಡಿ ಹೇಳಿದರೆ, ಕಂಡದ್ದನ್ನು ಕಂಡ ಹಾಗೇ ಹೇಳಿದರೆ, ನೀವ್ಯಾಕೆ ಕೆಂಡದ ಹಾಗೆ ಕೋಪಿಸ್ಕೋತೀರಪ್ಪ!" ಎಂದನಂತೆ ಮಗ.

"ಏನಾಗಿದೆಯೇ ನಿನ್ನ ಮಗನಿಗೆ, ಹುಚ್ಚು ಹುಚ್ಚಾಗಿ ಬಡಬಡಿಸ್ತಾ ಇದ್ದಾನೆ. ನೀನು ಮಾಡಿದ ಮುದ್ದಿನ ಫಲ ಇದು. ಎರಡು ತಪರಾಕು ಹಾಕಿ ಒದ್ದು ಬುದ್ಧಿಕಲಿಸಬೇಕು" ಅಂತ ಹೇಳುತ್ತಾ ಅಪ್ಪ ಎದ್ದರಂತೆ.




ಅಪ್ಪ ಅಜಾನುಬಾಹು. ಗರಡಿ ಮಾಡಿದ ಆಳು. ಮಗ ಅಮ್ಮನ್ನ ಹೋತುಕೊಂಡಿದ್ದ. ಅಮ್ಮ ಕಂಚಿಕಡಸನ್ನು ಹೋತುಕೊಂಡಿದ್ದಳು. ಅಂದಮೇಲೆ ಅಪ್ಪ ಎದ್ದು ಒದೆಯಕ್ಕೆ ಅಂತ ಕಾಲಿಗೆ ಝೋಕು ಕೊಟ್ಟಾಗ ಮಗ ಅಲ್ಲಿಂದ ಕಂಬಿಕಿತ್ತನಂತೆ. ಆ ಮನೆಯಿಂದಲೇ ಓಡಿ ಹೋದನಂತೆ.

ಹೋದೋನು ನಾಲ್ಕು ಜನರು ಸೇರಿದ್ದ ಕಡೆಯೆಲ್ಲಾ ಬಡಬಡಿಸುಕ್ಕೆ ಶುರುಮಾಡಿದನಂತೆ. ಇವನು ಹೇಳಿದ್ದು ಯಾರಿಗೂ ಅರ್ಥವಾಗದೆ ಇದ್ದರೂ, ಬಹಳ ಚೆನ್ನಾಗಿ ಮಾತನಾಡ್ತಾನಲ್ಲ, ಸ್ವಲ್ಪಾ

ತಡವರಿಸುವುದಿಲ್ಲವಲ್ಲ! ಇವನು ಹೇಳೋದರಲ್ಲಿ ಸತ್ಯ ಇರಬೇಕು ಎಂದು ಜನರು ಹೇಳುಕ್ಕೆ ಶುರುಮಾಡಿದರಂತೆ.

ಪಾಪ! ಅವರಿಗ್ಯಾರಿಗೂ ಗೊತ್ತಿಲ್ಲ. ಕೂಗು ಮಾರಿ ಅಮರಿಕೊಂಡಿದೆ ಇವನನ್ನ ಅಂತ.

ಜನದ ಬಾಯನ್ನು ಕಟ್ಟುಕ್ಕೆ ಸಾಧ್ಯವೇ? ಬಹಳ ಶಹಣ. ಬಹಳ ವಿಚಾರ ಮಾಡಿ ತರ್ಕಹೂಡಿ ಮುಂದಾಗುವುದನ್ನು ಇಂದೇ ಊಹಿಸಿ ಹೇಳ್ತಾನೆ, ಅಂತ ಜನರು ಅನ್ನುಕ್ಕೆ ಶುರು ಮಾಡಿದರು. ಅನ್ನುಕ್ಕೆ ಶುರು ಮಾಡಿದವರು ನೀನೇ ನಮ್ಮ ನಾಯಕ ಕಣಪ್ಪಾ ಅಂತ ಆರಿಸಿಯೂ ಬಿಟ್ಟರು. ಕಡೆಗೆ ರಾಜ್ಯದ ಆಡಳಿತವನ್ನು ಅವನ ಕೈಗೆ ಕಂಕಣ ಕಟ್ಟಿದ ಹಾಗೆ ಕಟ್ಟೇಬಿಟ್ಟರು.

ರಾಜ್ಯದ ಆಡಳಿತವನ್ನು ಸುಸೂತ್ರವಾಗಿ ನೆರವೇರಿಸಬೇಕಾದರೆ ಏನೇನು ಗುಣಗಳಿರಬೇಕೋ ಅವುಗಳಲ್ಲಿ ಒಂದಾದರೂ ಇವನಿಗಿತ್ತಿಲ್ಲ. ಪಾಪ, ಅವನೇನು ಮಾಡಬೇಕು? ರಾಜ್ಯ ಪುರೋಹಿತರನ್ನು ಕರೆಸಿ, ಜಾತಕ ನೋಡಿ ಹೇಳಿ ಮುಂದೆ ಹೇಗೆ ಎಂದು ಕೇಳಿದನಂತೆ. ರಾಜ್ಯ ಪುರೋಹಿತರು ಜಾತಕ ನೋಡಿದರು. ಕವಡೆ ಹಾಕಿ ನೋಡಿದರು. ಎಲ್ಲವೂ ತಿಳಿಯಿತು. "ಮಹಾರಾಯರೇ? ನಿಮಗೆ ಕೆಲವು ಕಾಲದ ಹಿಂದೆ ಕೂಗು ಮಾರಿ ಅಮರಿಕೊಂಡಿತು. ಅವತ್ತಿನಿಂದಲೇ ನೀವು ಭಾಷಣಪ್ರವೀಣರಾದುದು, ಸನ್ನಿ ಬಂದವರ ಹಾಗೆ ಮಾತನಾಡಿ ಜಯಿಸಿರೋದು. ಈಗ ಆಡಳಿತ ಮಾಡಬೇಕು. ಕೂಗು ಮಾರಿಯಿಂದ ಇದು ಸಾಧ್ಯವಿಲ್ಲ. ಅದಕ್ಕೋಸ್ಕರ ಕೂಗು ಮಾರೀನ ಬಿಡಿಸಬೇಕು. ಅದಕ್ಕೆ ಒಂದೇ ದಾರಿ: ನಾಮ ಹಾಕೋದು. "ನಾಳೆ" ಅಂತ ಮಂತ್ರ ಉಚ್ಚರಿಸುವುದು" ಎಂದು ರಾಜ್ಯ ಪುರೋಹಿತರು ಹೇಳಿದರಂತೆ.

ಅವತ್ತಿನಿಂದ ರಾಜ್ಯಭಾರ ಸುಸೂತ್ರವಾಗಿ ನಡೆಯಿತಂತೆ. ಕಂಡವರಿಗೆಲ್ಲಾ ಬಂದವರಿಗೆಲ್ಲಾ ನಾಮ ಹಾಕೋದು: "ನಾಳೆ" ಆಗಲಿ, "ನಾಳೆ" ನೋಡೋಣ, "ನಾಳೆ" ಪರಿಶೀಲಿಸುತ್ತೇನೆ, "ನಾಳೆ" ಮಾಡಿಕೊಡುತ್ತೇನೆ, ಇತ್ಯಾದಿ ನಾಳೆ ಮಂತ್ರವನ್ನು ಜಪಿಸಲಾರಂಭಿಸಿದನಂತೆ.

ಈಗರ್ಥವಾಯ್ತೇ ಮಗು, ನಾಳೆ ಅಂತ ಯಾಕೆ ಮುಂದೂಡ್ತಾ ಕಾಲ ಹಾಕ್ತಾರೆ; ಕೂಗು ಮಾರಿ ಬಡಿದು ಮೇಲಕ್ಕೆ ಬಂದವರೆಲ್ಲಾ, ನಾಳೆ ಮಂತ್ರೋಚ್ಚಾರಣೆ ಮಾಡಿ ಬಾಳ್ತಾರೆ, ಅಂತ ನವ್ವ ಅಡುಗೂಲಜ್ಜಿ ಕೂಗು ಮಾರಿ ಕತೆ ಹೇಳಿದಳಂತೆ.



# ತಿಗಣೆ ಸೊಸೆ ಕತೆ

**ಬಾ**ಳಪೇಟೇಲಿ ಹೊಸದಾಗಿ ಕಟ್ಟಿರೋ ಮನೆ ಚೆನ್ನಾಗಿದೆ ಅಂತ ಹೊಸದಾಗಿ ಸಂಸಾರ ಹೂಡಿದ ರಾಮಯ್ಯ ಆ ಮನೇನ ಬಾಡಿಗೆಗೆ ತೆಗೆದುಕೊಂಡನಂತೆ. ಅಮ್ಮನ್ನ ಮತ್ತು ಹೆಂಡತೀನ ಆ ಮನೆಗೆ ಕರೆದುಕೊಂಡು ಹೋದನಂತೆ. ಒಬ್ಬನೇ ಮಗ, ಹೇಳಿದಹಾಗೆ ಕೇಳಬೇಕು, ಇಲ್ಲದೆ ಇದ್ದರೆ ಕೋಟೆ ಒಳಗಿನ ಸ್ವಂತಮನೇಲೆ ಇರಬಹುದಾಗಿತ್ತು, ಎಂದು ಅಂದುಕೊಂಡು ರಾಮಯ್ಯನ ತಾಯಿ ಅರೆಮನಸ್ಸಿನಿಂದಲೇ ಬಂದಳಂತೆ. "ಕೋಟೆ ಒಳಗಿನ ಇವರ ಮನೇಲಿ ಗಾಳಿ ಬರುಲ್ಲ. ಬೆಳಕು ಇಣಿಕಿಕೂಡ ನೋಡುಲ್ಲ, ಅವೇಳೆಯಲ್ಲಿ ಕೈಕಾಲು ತೊಳೆದುಕೊಳ್ಳುಕ್ಕೆ ಲಾಂದ್ರ ಹಿಡಿದುಕೊಂಡು ಅರ್ಧ ಫರ್ಲಾಂಗ್ ನಡೀಬೇಕು. ಇದನ್ನು ಬಿಟ್ಟು ಹೊಸ ಮನೆಗೆ ಹೋಗೋಣ ಅಂದ್ರೆ" ಅಂತ ಹೆಂಡತಿ ರಾತ್ರಿಂ ರಾತ್ರಿಯೂ ಅಹವಾಲು ಸಲ್ಲಿಸಿದ ಮೇಲೆ ರಾಮಯ್ಯನಿಗೂ ಅದೇ ನ್ಯಾಯ ಅಂತ ಅನ್ನಿಸಿತಂತೆ. ಅಂದಮೇಲೆ ಕುಣಿಯೋ ಹೆಜ್ಜೆ ಹಾಕ್ತಾ ಸೊಸೆ ಹೊಸಮನೆಯ ಹೊಸಲು ದಾಟಿದಳು ಅಂತ ಹೇಳಬೇಕೇ? ಹೋದ ಎರಡು ವಾರದಲ್ಲಿ ಗಾಜಿನಮಣಿಯ ಪರದೆಗಳನ್ನು ಕಿಟಕಿ ಬಾಗಿಲುಗಳಿಗೆ ಹಾಕಿದಳು ಸೊಸೆ. ಚಾಪೆ, ಜಮಖಾನ ತೆಗೆದು ಕುರ್ಚಿ ಮಂಚಗಳನ್ನು ತರಿಸಿ ಹಾಕಿದಳು.

ಅತ್ತೆಮ್ಮ ಹಳೆ ಕಾಲದವಳು. ಮಂದಲಿಗೆ ಮೇಲೆ ಬಾಳು ನಡೆಸಿದವಳು. "ನನ್ನ ಮಗ ಸಂಪಾದಿಸಿದ ಹಣವನ್ನೆಲ್ಲಾ ಈ ಬಿನ್ನಾಣಿ ಹೀಗೆಲ್ಲಾ ಪೋಲು ಮಾಡ್ತಾಳಲ್ಲ" ಅಂತ ಒಂದು ಕಡೆ ದುಃಖ. "ಇವಳು ಹಾಡಿದ ಹಾಗೆ, ಮೂಗು ದಾರ ಹಾಕಿದ ಕರಡಿ ಹಾಗೆ, ಇವ ಕುಣೀತಾನಲ್ಲ" ಅಂತ ಇನ್ನೊಂದು ಕಡೆ ದುಃಖ. "ದೊಡ್ಡೋಳು ನಾನು, ನನ್ನ ಒಂದು ಮಾತು ಕೇಳಿಬಿಟ್ಟು, ಹೂ ಅಂತ ಅನ್ನಿಸಿಕೊಂಡು ಮಾಡೋದನ್ನು ಮಾಡಲಿಲ್ಲವಲ್ಲ" ಅಂತ ಮತ್ತೊಂದು ಕಡೆ ದುಃಖ. ಹೀಗೆ ಮೂರೂ ತರಹಾ ದುಃಖಗಳು ಅತ್ತೆಮ್ಮನನ್ನು ಕಾಡಲು ಶುರುಮಾಡಿದ ಮೇಲೆ, "ಅಯ್ಯೋ! ನನ್ನ ಗಂಡನ ಜತೆಗೆ ಹೀಗೆ ಪ್ರಾಯದಲ್ಲಿ ಸಂಸಾರ ಮಾಡಿಕೊಂಡು ಇರಲು ಆಗಲಿಲ್ಲವಲ್ಲ" ಅಂತ ಹೊಟ್ಟೆ ಉರಿಯಕ್ಕೆ ಶುರುವಾಯ್ತಂತೆ.

ಹೊಟ್ಟೆ ಉರಿಯುತ್ತಿರುವ ಅತ್ತೆಮ್ಮ ಸೊಸೆ ಮೇಲೆ ತಾನೆ ಬೆಂಕಿ ಕಾರಬೇಕು! ನಿಂತರೆ ತಪ್ಪು, ಕೂತರೆ ಮೈಲಿಗೆ, ಓಡಾಡಿದರೆ ಬೈಗಳು, ತೆಪ್ಪಗೆ ಬಿದ್ದುಕೊಂಡಿದ್ದರೂ ಲೊಟಗುಟ್ಟುವುದು ಹೀಗೆ ಸೊಸೇನ ಕಾಡುಕ್ಕೆ ಶುರುಮಾಡಿದಳಂತೆ.

ರಾಮಯ್ಯ ತನ್ನ ಕೆಲಸದ ನಿಮಿತ್ತ ಒಂದು ವಾರ ಬೇರೆ ಊರಿಗೆ ಹೋಗಿದ್ದನಂತೆ. ಆ ಅವಕಾಶವನ್ನು ಕಳೆದುಕೊಳ್ಳಬಾರದು ಅಂತ ಅತ್ತೆಮ್ಮ ಸೊಸೆಯನ್ನು ಹುರಿದು ಮುಕ್ಕಕ್ಕೆ

ಶುರುಮಾಡಿದಳಂತೆ. ಪಾಪ! ಬಯಕೆ ಹತ್ತಿದೆ ಸೊಸೆಗೆ ಅನ್ನೋದನ್ನೂ ಲಕ್ಷಿಸದೆ, ಚಟ್ಟಣೆಪುಡಿ ಕುಟ್ಟು, ಹಪ್ಪಳ ಒತ್ತು, ಗುಳಪಾವಟೆ ಮಾಡು, ಅಕ್ಕಿ ಆರಿಸು, ಅಂತ ಬೆಳಗಿನಿಂದ ಸಂಜೆತನಕ ಸೊಸೆಗೆ ಕೆಲಸ ಹಚ್ಚಿದ್ದೂ ಹಚ್ಚಿದ್ದೆ. ಹೂವು ಬತ್ತಿ ಮಾಡ್ತಾ ತಾನು ಅಂಗಳದಲ್ಲಿ ಉಸ್ತುವಾರಿ ನೋಡ್ತಾ ಕೂತುಕೊಂಡು, ಟೀಕೆ ಮಾಡಿದ್ದೂ ಮಾಡಿದ್ದೆ.

ಎರಡು ದಿನ ಬಿಡುವಿಲ್ಲದೆ ಸೊಸೆ ಹೀಗೆ ದುಡಿದಮೇಲೆ ರಾತ್ರಿ ಹುಶ್ಯಪ್ಪಾ ಅಂತ ಮಲಗಿಕೊಂಡಳಂತೆ. ಬೆಳದಿಂಗಳು ಹೊರಗೆ ಬಿದ್ದಿತ್ತಂತೆ. ಕಿಟಕಿಯಿಂದ ಹಾದುಬಂದ ಬೆಳದಿಂಗಳ ಕೋಲು ಇವಳ ತೋಳುಮೇಲೆ ಬಿದ್ದಿತ್ತಂತೆ. ಸುಸ್ತಾಗಿದ್ದ ಸೊಸೆಗೆ ಬೆಳದಿಂಗಳಿಂದ ಏನುತಾನೆ ಆಗಬೇಕು? ನಿದ್ರೆ ಹತ್ತಬೇಕು. ಝೋಂಪು, ಅನ್ನೋ ಹೊತ್ತಿನಲ್ಲಿ ತೋಳನ್ನು ಯಾರೋ ಗಿಳ್ಳಿದ ಹಾಗೆ ಆಯ್ತಂತೆ. ಇವರು ಯಾವ ಮಾಯದಲ್ಲಿ ಬಂದರು ಅಂತ ಸೊಸೆ ಕಣ್ಣು ಬಿಟ್ಟು ನೋಡಿದಳಂತೆ. ದಢೂತಿ ತಿಗಣೆಯೊಂದು ಅವಳ ತೋಳಮೇಲೆ ಕೂತು ಕುಕ್ಕಿ ರಕ್ತ ಹೀರ್ತಾ ಇತ್ತಂತೆ. "ದರಿದ್ರಮುಂಡೇದೇ ನಿನಗಿಂತ ನಮ್ಮತ್ತೇನೆ ವಾಸಿ. ಆಕೆ ನಿನ್ನ ಹಾಗೆ ಕುಕ್ಕುತಾಳೆ, ಕಟಕಾರಿಸ್ತಾಳೆ, ಆದರೆ ಇದ್ದ ರಕ್ತಾನ ಬಾಯಿಹಾಕಿ ಹೀರುಲ್ಲ, ತಡಿ ನಿನಗೆ ಮಾಡ್ತೀನಿ, ಶಾಸ್ತೀನ" ಅಂತ ಎಡಗೈ ಎತ್ತಿದಳಂತೆ, ಹೊಡೆದು ಅಪ್ಪಚ್ಚಿ ಮಾಡುಕ್ಕೆ.

ತಿಗಣೆ ಆಗ ಬಾಯಿಬಿಟ್ಟು "ಅಮ್ಮಾ! ನಿನ್ನ ಹಾಗೆಯೇ ನಾನೂ ಎರಡು ಜೀವಿ. ಪ್ರಾಣಭಿಕ್ಷೆ ಬೇಡ್ತೀನಿ. ನನ್ನ ಉಳಿಸು, ನನ್ನ ಕೈಲಾದ ಸಹಾಯವನ್ನು ಮಾಡ್ತೇನೆ, ಕೇಳು" ಎಂದು ಬೇಡಿತಂತೆ.

ಸೊಸೆ ನಗುಕ್ಕೆ ಶುರು ಮಾಡಿದಳಂತೆ. ಮೊದಲಾಗಿ ಮಾತಾಡೋ ತಿಗಣೇನ ಅವಳು ನೋಡೇ ಇತ್ತಿಲ್ಲ. ಅದಕ್ಕೇ ನಗು; ಎರಡನೆಯದಾಗಿ ತಿಗಣೆ ಏನು ಸಹಾಯವನ್ನು ತಾನೆ ಮನುಷ್ಯರಿಗೆ ಮಾಡಬಲ್ಲದು? ಆಗ ತಿಗಣೆ "ಸಿಂಹ ಇಲಿ ಕತೆ ಕೇಳಿಲ್ಲವೇ ತಾಯಿ. ಅದರ ಹಾಗೇನೇ. ನಿನ್ನ ಕಷ್ಟ ಏನು ಹೇಳು, ನನ್ನಿಂದ ಏನಾದರೂ ಸಹಾಯ ಆಗುವ ಹಾಗಿದ್ದರೆ ಮಾಡ್ತೀನಿ" ಅಂತ ತಿರುಗಿ ಹೇಳಿತಂತೆ.

ತನ್ನ ಮನಸ್ಸಿನ ಉದ್ವೇಗವನ್ನೂ ಅಳಲನ್ನೂ ಹೇಳಿಕೊಳ್ಳುಕ್ಕೆ ಈ ತಿಗಣೆಯಾದರೂ ಸಿಕ್ಕಿತಲ್ಲ ಅಂತ ಸೊಸೆ "ನೋಡಮ್ಮಾ ಬಸುರಿ! ನಮ್ಮತ್ತೆ ಹೀಗೆ ಗೋಳು ಹುಯ್ದುಕೊಳ್ಳುತ್ತಾಳೆ. ಎರಡು ದಿವಸದಿಂದ ಅನಕ, ಇವರು ಬೇರೆ ಊರಿಗೆ ಹೋದಮೇಲೆ ಅದೇನೆಲ್ಲಾ ಕಿರಕುಳ ಕೊಡ್ತಾಳೆ ಅಂತೀ! ತಡೆಯುಕ್ಕಾಗುಲ್ಲ. ಬಾವೀಗೆ ಬಿದ್ದು ಪ್ರಾಣ ಕಳೆದುಕೊಳ್ಳಲೇ ಅಂತ ಒಂದೊಂದು ಸರ್ತಿ ಅನ್ನಿಸುತ್ತೆ" ಅಂತ ಹೇಳಿಕೊಂಡು ಅತ್ತಳಂತೆ.

"ಅಯ್ಯೋ! ಪೆಚ್ಚು ಮುರವಿ, ಇದಕ್ಕೆ ಯಾಕೆ ಹೀಗೆ ಕೊರಗ್ತಿ. ಅತ್ತೆಮ್ಮ ಈ ಮನೆಬಿಟ್ಟು ಹೋಗೋ ಹಾಗೆ ನಾನು ಮಾಡ್ತೀನಿ. ಹದಿನೈದು ದಿವಸ ತಡಕೋ, ಆಮೇಲೆ ನನ್ನ ಸಾಮರ್ಥ್ಯ ನೋಡುವಿಯಂತೆ" ಎಂದು ತಿಗಣೆ ಅಭಯ ಕೊಟ್ಟಿತಂತೆ.

ಬಸುರಿ ತಿಗಣೆ ಯಾರು ಗೊತ್ತೆ? ಆ ಮನೆಯ ಗೋಡೆಯ ತಳದಲ್ಲಿದ್ದ ತಿಗಣೆ ರಾಜ್ಯದ ರಾಣಿ. ತಿಗಣೆ ರಾಜ್ಯದಲ್ಲಿ ಅರಸುತನ ನಡೆಸೋದು ರಾಣಿಯೇ! ಒಂದು ತರಹಾ ಸ್ತ್ರೀ ಮಲಯಾಳ. ರಾಣಿ ಹಿಂತಿರುಗಿದಾಗ ಒಂದು ಫರ್ಮಾನ್ ಹೊರಡಿಸಿದಳಂತೆ. ಹೀಗೆ ನನ್ನ ಪ್ರಾಣವನ್ನು ಈ ರಾತ್ರಿ ಮನೆ ಸೊಸೆ ಉಳಿಸಿದಳು. ಅವಳತ್ತೆ ಆಕೇನ ಗೋಳು ಹುಯ್ದು ಕೊಳ್ಳುತ್ತಿದ್ದಾಳೆ. ನಮ್ಮ ಸೈನಿಕರೆಲ್ಲಾ

ಅತ್ತೆಮ್ಮನ ಮೇಲೆ ಲಗ್ಗೆ ಹೂಡಬೇಕು. ಒಂದು ವಾರದಲ್ಲಿ ಬಾವಿಗೆ ಬಿದ್ದರೆ ಚೆನ್ನು ಅಂತ ಆಕೆಗೆ ಅನ್ನಿಸಬೇಕು ಅಂತ ಹುಕುಂ.

ಮಾರನೆ ದಿನದಿಂದ ನೋಡಿ, ಅತ್ತೆಮ್ಮ ತನ್ನ ಜತೆಯವರೊಂದಿಗೆ ಮಾತಾಡ್ತಾ ಕುಳಿತರೆ, ಹಾಡು ಹಗಲಿನಲ್ಲಿ ತೊಡೆಯನ್ನೇ ಕಚ್ಚುವುದಕ್ಕೆ ಶುರುಮಾಡಿದವಂತೆ ತಿಗಣೆಗಳು. ಕಚ್ಚಬಾರದ ಕಡೆಯೆಲ್ಲಾ ಕಚ್ಚಿದವಂತೆ. ಅರಳು ಹಿಟ್ಟಿನ ಡಬ್ಬತೆಗೆದರೆ ಅಲ್ಲಿ ನಾಲ್ಕು ತಿಗಣೆ. ಅವಲಕ್ಕಿ ಚಬರಿ ತೆಗೆದರೆ ಅಲ್ಲಿ ನಾಲ್ಕು ತಿಗಣೆ. ಸ್ನಾನಮಾಡುವಾಗ ಸೀಗೆಕಾಯಿಪುಡಿ ಕೈಗೆ ಹಾಕಿಕೊಂಡರೆ ಅದರಲ್ಲಿ ನಾಲ್ಕು ತಿಗಣೆ. ಹೀಗಾಗಿ ಎಚ್ಚರವಾಗಿದ್ದಾಗಲೆಲ್ಲಾ ತಿಗಣೆಗಳ ಕಾಟ. ಸ್ವಲ್ಪ ಜೋಂಪು ಬಂದರೆ, ತಿಗಣೆ ಸ್ವಪ್ನ. ಮಕ್ಕಳ ಹಾಗೆ ಕಿರಿಚಿಕೊಂಡು ಅತ್ತೆಮ್ಮ ಏಳುತ್ತಿದ್ದಳಂತೆ. ತಿಗಣೆಗಳು ಕಚ್ಚೀಕಚ್ಚೀ ಅತ್ತೆಮ್ಮನ ಮೈಯಲ್ಲಾ ತೊಂಡೆಹಣ್ಣಿನ ತರಹ ಕೆಂಪು ಬಾಸುಂಡೆಗಳಿಂದ ತುಂಬಿದುವಂತೆ. ಈ ಹಾಳು ಮನೇಗೆ ಕರಕೊಂಡು ಬಂದೆಯಲ್ಲೇ ಅಂತ ಹಿಡಿಶಾಪ ಹಾಕಿದರೆ, ಸೊಸೆ, ತಿಗಣೆಗಳೇ ಇಲ್ಲವಲ್ಲಮ್ಮಾ! ಒಂದಾದರೂ ನನಗೆ ಸಿಕ್ಕಿಲ್ಲವಲ್ಲಮ್ಮಾ ಅಂತ ಹೇಳ್ತಾ ಇದ್ದಳಂತೆ.

ಒಂದು ವಾರ ಆಯಿತು. ರಾಮಯ್ಯ ಹಿಂತಿರುಗಿದ. ಬಂದ ಕ್ಷಣದಲ್ಲೇ "ಮಗೂ! ಈ ಹಾಳು ಮನೇಲಿ ಇರುಕ್ಕೆ ಸಾಧ್ಯವಿಲ್ಲಪ್ಪಾ! ನೀನು ಹೋದ ಮೇಲೆ ಅರೆಕ್ಷಣ ನಿದ್ದೆ ಮಾಡುಕ್ಕಾಗಿಲ್ಲ. ತಿಗಣೆಯ ಗೂಡೇ ಎದ್ದಿದೆ. ನಿನ್ನ ತಂಗಿ ಮನೆಗೆ ಹೋಗ್ತೀನಪ್ಪಾ, ಇವತ್ತೇ ಹೋಗ್ತೀನಪ್ಪಾ. ಸಾಮಾನೆಲ್ಲಾ ಕಟ್ಟಿಟ್ಟಿದೀನಿ" ಎಂದು ಬಡಬಡಿಸಿದಳಂತೆ.

"ಅಷ್ಟು ಇಷ್ಟಪಟ್ಟರೆ ನಾನ್ಯಾಕೆ ಬೇಡ ಅನ್ನಲಿ. ಇನ್ನರ್ಧ ಗಂಟೆಗೆ ತಂಗಿ ಊರಿಗೆ ಬಸ್ಸು ಹೊರಡುತ್ತೆ, ನಾನು ಬಂದ ಜಟ್ಕಾ ಇಲ್ಲೇ ಇದೆ. ಅದರಲ್ಲೇ ಬಸ್‌ಸ್ಟಾಂಡಿಗೆ ಹೋಗೋಣ" ಅಂತ ಮಗ ಹೇಳಿ, ತಾಯಿಯನ್ನು ಮಗಳ ಮನೆಗೆ ಸಾಗಿಹಾಕಿಬಿಟ್ಟು ಬಂದನಂತೆ.

ಆ ರಾತ್ರಿ ಪೌರ್ಣಮಿ. ಉಂಡು ಮಲಗಿದ ಮೇಲೆ "ಲೇ! ಎಷ್ಟು ತಂಪಾಗಿದೆಯೇ ಬೆಳದಿಂಗಳು" ಎಂದನಂತೆ ರಾಮಯ್ಯ. "ಅಲ್ಲವೇ ಅಂದ್ರೆ, ಎಷ್ಟು ಶಾಂತವಾಗಿದೆ, ಎಷ್ಟು ಪ್ರಶಾಂತವಾಗಿದೆ" ಎಂದಳಂತೆ ಹೆಂಡತಿ. ಬೆಳದಿಂಗಳ ಕೋಲು ರಾಮಯ್ಯನ ತೋಳಿನ ಮೇಲೆ ಬಿತ್ತು. ಕಿರು ಬೆವರುತ್ತಿದ್ದ ಅವನಿಗೆ ಜೋಂಪು ಹತ್ತಿತ್ತು. ತೋಳನ್ನು ಯಾರೋ ಹಗೂರಾಗಿ ಚಿವುಟಿದಂತಾಯ್ತು. ಎಚ್ಚೆತ್ತು ಪಕ್ಕಕ್ಕೆ ತಿರುಗಿದ. ಹೆಂಡತಿ ಕೈಮುಗಿದುಕೊಂಡು ಕೂತಿದ್ದಳು. ಮತ್ತೆ ಚಿವುಟಿದವರು ಯಾರು? ಅಂತ ತೋಳನ್ನ ನೋಡಿದ. ತಿಗಣೆ! ಅಂಗೈ ಎತ್ತಿದ ರಾಮಯ್ಯ ತಿಗಣೆ ಸಂಹಾರಕ್ಕೆ. ಕೂತಿದ್ದ ಹೆಂಡತಿ, ಗಂಡನ ಎತ್ತಿದ ಕೈಯನ್ನು ಹಿಡಿದುಕೊಂಡಳು. "ತಿಗಣೇನ ಕೊಲ್ಲಬೇಡಿ ಅಂದ್ರೆ; ಹೀಗೆ ಹೀಗೆ ಆಯಿತು" ಅಂತ ಆದುದ್ದನ್ನೆಲ್ಲಾ ಹೇಳಿದಳಂತೆ.

ಹೀಗೇನೆ ಅಂತ ರಾಮಯ್ಯ ಗಲ್ಲ ಹಿಡಿದನಂತೆ.

* * * * *

ಗೊತ್ತಾಯ್ತೆ ಮಗು, ಯಾವ ಬೇನೆಗೆ ಯಾವ ವಿಷ ಔಷಧವಾಗುತ್ತೋ? ಅಲ್ಲವೇ, ಅಂತ ನವ್ಯ ಅಡುಗೂಲಜ್ಜಿ ತಿಗಣೆ ಸೊಸೆ ಕತೆ ಹೇಳಿದಳಂತೆ.

■

# ಗೆದ್ದು ಬಿದ್ದ ಹುಂಜದ ಕತೆ

**ಇಂ**ದಾನೊಂದು ಕಾಲದಲ್ಲಿ ಊರಿನ ಅಂಚಿನಲ್ಲಿ ಕೆಲವು ಬಡವರ ಗುಡಿಸಿಲುಗಳು ಇದ್ದುವಂತೆ. ಗುಡಿಸಿಲುಗಳ ದೂರದ ಹಿತ್ತಲಿನಲ್ಲಿ ಒಂದು ತಿಪ್ಪೆಗುಂಡಿ ಭರ್ಜರಿಯಾಗಿ ಬೆಳೆದಿತ್ತಂತೆ. ಕೇರಿ ಕೇರಿಯ, ಊರು ಊರಿನ ತಿಪ್ಪೆಯನ್ನೆಲ್ಲಾ ಮುನಿಸಿಪಾಲಿಟಿಯವರು ಗಾಡಿಯಲ್ಲಿ ಹೊಡೆದುಕೊಂಡು ಬಂದು ಆ ತಿಪ್ಪೆಗುಂಡಿಯ ಬಳಿ ಹಾಕುತ್ತಿದ್ದರಂತೆ. ಹಾಗಾಗಿ ಆ ತಿಪ್ಪೆಗುಂಡಿ ಭರ್ಜರಿಯಾಗಿ ಸರ್ಕಾರದ ಸಾಲದಂತೆ ಮೇಲಕ್ಕೇರುತ್ತಂತೆ.

ಆ ತಿಪ್ಪೆಗುಂಡಿಯ ಬಳಿ ಒಂದು ಹುಂಜ ವಾಸವಾಗಿತ್ತಂತೆ. ಹಳ್ಳಿ ಸ್ಕೂಲಿಗೆ ಹೋಗಿ ಓದುವಾಗ ಇತರ ಹುಡುಗರ ಜತೆ ಕಾದಾಡಿ, ಗುದ್ದಾಡಿ, ಬಲಾಢ್ಯವಾಯಿತಂತೆ. ಹಾಯ್‌ಸ್ಕೂಲಿಗೆ ಹೋಗಿ ಓದುವಾಗ ಅಲ್ಲಿಗೆ ಬರುತ್ತಿದ್ದ ಹೆಣ್ಣು ಮಕ್ಕಳನ್ನು ಕೀಟಲೆ ಮಾಡುವುದು, ಸೀಟಿ ಹೊಡೆಯುವುದು, ಹೀಗೆ ಬಾಳ ರೀತಿ ನೀತಿಗಳನ್ನು ಕಲಿತುಕೊಂಡಿತಂತೆ. ಆದರೆ ಓದಿನಲ್ಲಿ ಯಶಸ್ವಿಯಾಗಲಿಲ್ಲ. ಕಾಲೇಜಿಗೆ ಹೋಗಲು ಅವಕಾಶವಾಗಲಿ ಅರ್ಹತೆಯಾಗಲಿ ದೊರೆಯಲೇ ಇಲ್ಲವಂತೆ.

ಓದಿ ತಲೆಗೆ ಕಿರೀಟ ಹಾಕುವುದೇನು? ದೇವರು ಕೊಟ್ಟ ಕುಚ್ಚಿನ ಕಿರೀಟವೇ ಸಾಕು, ಎಂದುಕೊಂಡು ಆ ಹುಂಜ ತಿಪ್ಪೆಗುಂಡಿಯ ಬಳಿಯಲ್ಲೇ ತನ್ನ ಬಿಡಾರವನ್ನು ಕಟ್ಟಿಕೊಂಡಿತಂತೆ. ಕಳ್ಳತನದಲ್ಲಿ ಅಲ್ಲಿ ಇಲ್ಲಿ ಹೋಗಿ ಕೆಲವು ಹೇಂಟೆಗಳನ್ನೂ ಲಪಟಾಯಿಸಿಕೊಂಡು ಬಂದು, ಅರಬ್‌ಷೇಕರ ತರಹ ಮೋಜಿನ ಜೀವನ ನಡೆಸುತ್ತಿತ್ತಂತೆ. ಊರಿನ ಮೂಲೆ ಮೂಲೆಗಳಿಂದಲೂ ಬಂದು ಬೀಳುತ್ತಿದ್ದ ತಿಪ್ಪೆಗುಂಡಿಯಲ್ಲಿ, ಹುಂಜಕ್ಕೂ ಅದರ ಜನಾನಾಕ್ಕೂ ಸಾಕಷ್ಟು ಪುಷ್ಟಿಯಾದ ಆಹಾರ ಸಿಗುತ್ತಿತ್ತಂತೆ. ಚೆನ್ನಾಗಿ ತಿಂದಮೇಲೆ ಮೆಚ್ಚಿದ ಹೇಂಟೆಯನ್ನು ಅಟ್ಟಿಸಿಕೊಂಡು ಹೋಗಿ, ಅದರ ಕಿವಿಯಲ್ಲಿ ಕುಕ್ಕುಟೇಕುರ್‌ರ್ ಅಂತ ಪ್ರೇಮದಿಂದ ಕೂಗಿ, ಅಪ್ಪಿ ಆಲಿಂಗಿಸಿ ಅಮರು ಶತಕವನ್ನು ಹೇಳುತ್ತಿತ್ತಂತೆ. ತಿಪ್ಪೆಗುಂಡಿಯಲ್ಲಿ ಅದಕ್ಕೆ ಬಾದಾಮಿ ಸಿಕ್ಕುತ್ತಿತ್ತೋ ಅಥವಾ ಬಹುಬೀಜ ಫಲವೇ ದೊರೆಯುತ್ತಿತ್ತೋ, ಕುಕ್ಕುಟವಾಹನನೇ ಬಲ್ಲ. ಆದರೆ ಇದು ಮಾತ್ರ ಖಂಡಿತ. ದಿನ ಬೆಳಗಾದರೆ ೨೦-೩೦ ಮೊಟ್ಟೆಗಳನ್ನು ಹುಂಜ ಗೂಡುಗಳಲ್ಲಿ ಎಣಿಸುತ್ತಿತ್ತಂತೆ. ಸೊರುಬಿಡುಕ್ಕೆ ಕರುವನ್ನು ಹಸುವಿನ ಬಳಿ ಬಿಟ್ಟು ನಂತರ ಹಾಲುಕರೆದುಕೊಳ್ಳುಲ್ಲವೇ ಮನುಷ್ಯರು; ಅದೇ ರೀತಿ ಈ ಹುಂಜ ಕೂಡ, ಹೇಂಟೆಗೆ ಒಂದರಂತೆ ತಿಂಗಳಿಗೆ ಒಂದೊಂದು ಮೊಟ್ಟೆಯನ್ನು ಬಿಟ್ಟು ಮಿಕ್ಕವನ್ನೆಲ್ಲಾ ಮಾರುಕಟ್ಟೆಗೆ ತೆಗೆದುಕೊಂಡು ಹೋಗಿ ಮಾರಿ, ಲಾಭ ಪಡೆಯುತ್ತಿತ್ತಂತೆ. ಕೆಲವೇ ದಿನಗಳಲ್ಲಿ ಆ ಹುಂಜನ ಕೈಯಲ್ಲಿ ಹಣ ಕುಣಿದಾಡುಕ್ಕೆ ಶುರುವಾಯ್ತಂತೆ. ಆಮೇಲೆ ಕೇಳಬೇಕೆ?

ಈಚಲ ಮರದ ಕೆಳಗಿನ ಕ್ಲಬ್ಬಿಗೆ ಹೋಗಿ ಸೋಮರಸ ಕುಡಿದ ಋತ್ವಿಕ್ಕುಗಳ ತರಹ ಸಾಮಗಾನವನ್ನು ಹಾಡಲು ಶುರುಮಾಡಲಾರಂಭಿಸಿತಂತೆ. ಜನಾನಾನ ದೊಡ್ಡದು ಮಾಡಿಕೊಳ್ಳಬೇಕು. ಆಗ ಬಾಳಿನಲ್ಲಿ ವೈವಿಧ್ಯತೆ ದೊರಕಿದಂತೆ, ಸಂಪಾದನೆಯೂ ಹೆಚ್ಚಾಗುತ್ತದೆ. ಮುಪ್ಪಿನ ಕಾಲ ಬಂದಾಗ ಸಂಪಾದನೆ ಕಡಿಮೆಯಾಗಿ ಖೋತಾ ಬಿದ್ದಾಗ, ನೆರವಾಗಲಿ ಅಂತ ಸ್ವಲ್ಪ ಹಣವನ್ನು ಬ್ಯಾಂಕಿನಲ್ಲಿಡಬೇಕು ಎಂದು ಯೋಚಿಸಿತಂತೆ. ಸರಿ! ಇದಕ್ಕೆ ಏನಾದರೂ ಮಾರ್ಗವನ್ನು ಹುಡುಕಬೇಕು ಎಂದು ಯೋಚನೆ ಮಾಡುತ್ತಾ, ಒಂದು ತರಹ ಗುಂಗಿನಲ್ಲೇ ತಿಪ್ಪೆಗುಂಡಿಯ ಬಳಿಯ ತನ್ನ ಮಹಲಿಗೆ ನಡೆಯಿತಂತೆ ಒಂದು ಬೆಳಗಿನ ಝಾವ.

ಇನ್ನೇನು ತಿಪ್ಪೆಗುಂಡಿ ಕಾಣಿಸಿತು. ನಾಲ್ಕು ಬಾರಿ ಕುಪ್ಪಳಿಸಿದರೆ ಮಹಲು ಸಿಗುತ್ತೆ, ಅಷ್ಟರಲ್ಲೇ ಅವನ ಹೇಂಟೆಯೊಂದು ಕೆಟ್ಟ ಕೆಟ್ಟದಾಗಿ ಕೂಗುತ್ತ ಸರ್ ಪರ್ ಅಂತ ಓಡಿ ಬಂತು. ಅದರ ಹಿಂದೆಯೇ ಒಂದು ಅಪರಿಚಿತ ಹುಂಜ ಅಟ್ಟಿಸಿಕೊಂಡು ಬರುತ್ತಿದೆ.

ನಮ್ಮ ಹುಂಜನಿಗೆ ತತ್‌ಕ್ಷಣ ಈಚಲ ಅಮಲೆಲ್ಲಾ ಇಳಿಯಲಾರಂಭಿಸಿತು. ಜನಾನವನ್ನು ಬಡಾಯಿಸಿ, ಐದು ಚೈತ್ರಗಳ ಪ್ಲಾನು ನಾನು ಹಾಕುತ್ತಾ ಬಂದರೆ, ನನ್ನ ಜನಾನಾದಿಂದಲೇ, ಹಕ್ಕಿಯನ್ನು ಹಾರಿಸಿಕೊಂಡು ಹೋಗಲು ಈ ಹುಂಜ ಬಂದಿದೆಯಲ್ಲಾ! ಇದಕ್ಕೆ ತಕ್ಕಶಾಸ್ತಿ ಮಾಡಬೇಕು! ನಾನಿಲ್ಲದೆ ವೇಳೆಯಲ್ಲಿ ಎಷ್ಟು ದಿವಸಗಳಿಂದ ಈ ಹುಂಜ ಹೀಗೆ ಬರುತ್ತಿದೆಯೋ ಏನೋ? ನನಗೆ ಕಾಣದ ಹಾಗೆ ಇನ್ನು ಯಾವ ಯಾವ ಪಡ್ಡೆಹುಂಜಗಳು ಬಂದು ಹೋಗುತ್ತಿವೆಯೋ ಏನೋ? ಎಂದು ರೇಗಿತಂತೆ ನಮ್ಮ ಹುಂಜ. ಈಚಲ ಅಮಲು ಪೂರ್ತಿ ಇಳಿದುಹೋಯಿತು. ಛಲದ ಅಮಲು ಏರಿತು.

ಅಪರಿಚಿತ ಹುಂಜವನ್ನು ಕಾಳಗಕ್ಕೆ ಕರೆಯಿತು, ನಮ್ಮ ಹುಂಜ. ಆ ಹುಂಜ ಮಾತ್ರ ತೆಪ್ಪಗಿರುತ್ತೇ? "ಕೆರೆ ನೀರಿಗೆ ದೊಣ್ಣೆ ನಾಯಕನ ಅಪ್ಪಣೆಯೇನೋ? ನೀನು ಯಾರೋ ಕೇಳುಕ್ಕೆ! ನಮ್ಮದು ಸೋಷಿಯಲಿಸ್ಟಿಕ್ ಪ್ಯಾಟರ್ನ್, ಎಲ್ಲವೂ ಎಲ್ಲರಿಗೂ ಸಿಕ್ಕಬೇಕು, ನಿನ್ನ ಪುಕ್ಕ ಹರೀತೀನಿ, ಹತ್ತಿರ ಬಂದರೆ, ನಿನ್ನ ಕುಚ್ಚು ಕೀಳುತ್ತೀನಿ, ಕಾಲು ಮುರಿದು ಕೊಕ್ಕಿಗೆ ತೂರುತ್ತೀನಿ" ಎಂದು ರಣಕಹಳೆಯನ್ನು ಬಾರಿಸಿತಂತೆ.

ನಮ್ಮ ಹುಂಜ ಸುಮ್ಮನಿರುತ್ತೇ? ಅದೂ ರಣಕಹಳೆ ಬಾರಿಸಿತು. ಶಂಖವನ್ನು ಊದಿತು. ತೊಡೆ ತಟ್ಟಿಕೊಂಡಿತು.

ಈ ಸಮರ ಕಹಳೆಯನ್ನು ಕೇಳಿ ಮಹಲಿನಲ್ಲಿದ್ದ ಹೇಂಟೆಗಳೆಲ್ಲವೂ ದೂರದಲ್ಲಿ ನಿಂತು ಕಣ್ಣು ಹಾರಿಸದೆ ನೋಡತೊಡಗಿದುವು. ಈ ಕಹಳೆಯು ಆಕಾಶ ವಾಣಿಯಲ್ಲಿ ಪ್ರಸಾರವಾದ ಕಾರಣ, ಕೇರಿಯ ಎಲ್ಲೆಲ್ಲಿನ ಹಿತ್ತಿಲುಗಲಿಂದಲೂ ಹೇಂಟೆಗಳು ಶೃಂಗಾರ ಮಾಡಿಕೊಂಡು, ನೈಲಾನ್ ಪುಕ್ಕಗಳನ್ನು ತೊಟ್ಟುಕೊಂಡು ಅಖಾಡಾದ ಸುತ್ತಲೂ ಬಂದು ನಿಂತವು.

ಹುಂಜಗಳ ಕಾಳಗ ಶುರುವಾಯಿತು. ಕೊಕ್ಕಾ ಕೊಕ್ಕು, ಕುಚ್ಚಾ ಕುಚ್ಚು, ಪುಕ್ಕಾ ಪುಕ್ಕಗಳ ಜಿದ್ದಾಜಿದ್ದಿ ಕುಸ್ತಿ ಪ್ರಾರಂಭವಾಯಿತು. ನ ಭೂತೋ ನ ಭವಿಷ್ಯತಿ, ಆ ತರಹ ಕಾಳಗ ನಡೆಯಿತು. ಅಖಾಡದಲ್ಲೆಲ್ಲ ಸಣ್ಣ ಪುಟ್ಟ ಪುಕ್ಕಗಳು ಹಾರಿಸಲ್ಪಟ್ಟಂತಾಯಿತು. ಅಲ್ಲೆಲ್ಲಾ ರಕ್ತದ ಹನಿಗಳು ಬಿದ್ದು

ರಂಗೇರಚಿದಂತೆ ಕಾಣಿಸಿತು. ತಿಪ್ಪೆಗುಂಡಿಯ ಧೂಳು ಹಾರಿ, ಮಂಜು ಬಿದ್ದಂತೆ ಕಾಣಿಸತೊಡಗಿತು. ಅತ್ತೆ ಸೊಸೆಯರ ಕಾಳಗದಷ್ಟೇ ಭೀಕರವಾಗಿತ್ತು.

ಕಡೆಗೊಮ್ಮೆ ಎಲ್ಲ ಹೇಂಟೆಗಳೂ ನೋಡುತ್ತಲೇ ಇವೆ, ಆದರೆ ಯಾವ ಮಾಯದಲ್ಲೋ ಅಪರಿಚಿತ ಹುಂಜ ಕುಚ್ಚು ಬಗ್ಗಿಸಿಕೊಂಡು, ಓಡಿ ಹೋಗಿ ಬಿಟ್ಟಿತು. ವೀರೋಚಿತ ಜಯಕಾರವನ್ನು ಎಲ್ಲಾ ಹೇಂಟೆಗಳೂ ಮಾಡಿದುವು. ನಮ್ಮ ಹುಂಜನ ಬಳಿಗೆ ಬಂದು, ಬಿಸಿನೀರನ್ನು ಕಾಲು ತೊಳೆಯಲು ಕೊಟ್ಟು, ಕೆನೆವಾಲಂ ಕುಡಿಯಲೀಯಲು ಮುಂದಾದುವು.

ಆದರೆ ನಮ್ಮ ಹುಂಜನಿಗೆ ಎದುರಾಳಿಯನ್ನು ಉರುಳಿಸಿ ಗೆದ್ದ ಅಮಲು ಏರಿತ್ತು. ಆಗ ಹೆಣ್ಣುಗಳ ಉಪಚಾರ ಮುಖ್ಯವಲ್ಲ. ಆಗ ಲೋಕಕ್ಕೇ ತನ್ನ ಜಯವನ್ನು ಪ್ರಚಾರಮಾಡುವ ತೀವ್ರ ಆಸೆ. ಕಾರಣ, ಮೈಕೊಡವಿಕೊಂಡು, ಉಳಿದಿದ್ದ ರೆಕ್ಕೆ ಪುಕ್ಕಗಳನ್ನು ಬಿಚ್ಚಿ ಹಾರಿ, ತಿಪ್ಪೆಗುಂಡಿಯ ಮೇಲಕ್ಕೆ ಏರಿಹೋಯಿತು. ಅಲ್ಲಿ ತುಟ್ಟ ತುದಿಯಲ್ಲಿ ನಿಂತು ಜಯಘೋಷಮಾಡಿತು. "ಕೊ ಕ್ಕೋ ಕೋ" ಅಂತ.

ಕಹಳೆ ಬಾಯಿಗೆ ಮುತ್ತು ಕೊಟ್ಟಹಾಗಾಯಿತು, ನಮ್ಮ ಹುಂಜ ಹಾಕಿದ ರೇಂಕಾರ. ಆ ರೇಂಕಾರ ಕೇರಿ ಕೇರಿಗಳಿಗೆಲ್ಲಾ ಕೇಳಿಸಿತು. ಊರಿಗೂ ಕೇಳಿಸಿತು. ಊರಿನಲ್ಲಿದ್ದ ವರಮಾನ ತೆರಿಗೆ ಇಲಾಖೆಗೂ ಕೇಳಿಸಿತು. ಅಲ್ಲಿದ್ದ ಅಧಿಕಾರಿ ಕಿವಿ ಬಿಚ್ಚಿ ಕೇಳಿದ. ನಂತರ ಧ್ವನಿ ಬಂದ ದಿಕ್ಕಿಗೆ ಸಿಬ್ಬಂದಿಯೊಡನೆ ಓಡೋಡಿ ಬಂದ.

ತಿಪ್ಪೆಗುಂಡಿಯ ಶಿಖರದಲ್ಲಿ ತಲೆಯೆತ್ತಿ ಕುಚ್ಚು ಆಡಿಸುತ್ತಾ ನಿಂತಿದ್ದ ಹುಂಜನನ್ನು ನೋಡಿದ. ಇಷ್ಟು ಮಸ್ತು ಇರಬೇಕಾದರೆ ಈ ಹುಂಜನ ವರಮಾನ ಭರ್ಜರಿ ಇರಬೇಕು. ಇವ ತೆರಿಗೆಯ ಪಟ್ಟಿಯಲ್ಲೇ ಇಲ್ಲ. ಈಗ ಹಿಡಿದು ಇವನ ತೌಡು ಹರಿಯಬೇಕು, ಎಂದು ಅವ ತನ್ನ ಆಯುಧಗಳನ್ನು ಹರಿತಮಾಡಿಕೊಂಡು ಸಿಬ್ಬಂದಿಯೊಡನೆ ಹುಂಜವನ್ನು ಘೇರೋಮಾಡಿದ.

ಮೊಟ್ಟೆಗಳ ಲೆಕ್ಕ ಇಟ್ಟಿಲ್ಲ. ಖರ್ಚಿನ ತಪಶೀಲು ತಿಳಿಯದು, ಬಂದ ವರಮಾನದ ವಿವರ ಗೊತ್ತಿಲ್ಲ, ಇತ್ಯಾದಿ ಹುಂಜ ಏನೇನೋ ನೆಪ ಹೂಡಿತು. ಆದರೆ ಆ ಕಟುಕ ಅಧಿಕಾರಿ ಕೇಳಬೇಕಲ್ಲ!

ಬ್ಯಾಂಕಿನ ಚೆಕ್ ಬುಕ್ ಸಿಕ್ಕಿತು. ಹುಂಜನ ಬ್ಯಾಂಕ್ ಹಣವನ್ನೆಲ್ಲಾ ಮುಟ್ಟುಗೋಲು ಹಾಕಿಕೊಂಡರು. ಇನ್ನುಮೇಲೆ ಕಳೆದ ಎಂಟೂ ವರ್ಷಗಳ ಲೆಕ್ಕವನ್ನೆಲ್ಲ ತಿಳಿಸು, ಇಲ್ಲದೆ ಇದ್ದರೆ ಅಂದಾಜು ಮೇಲೆ ನಾವೇ ತೆರಿಗೆ ಹಾಕುತ್ತೇವೆ; ಎಂದ ಆ ಅಧಿಕಾರಿ.

ಹುಂಜದ ಕುಚ್ಚು ಈ ವೇಳೆಗೆ ಕಳಚಿ ಬಿದ್ದಿತ್ತು. ಕ್ಲೈಬ್ಯ ಅವನನ್ನು ಮುತ್ತಿತ್ತು. ಆದ ಕಾರಣ ಸುತ್ತಲೂ ಕಂಡ ಹೇಂಟೆಗಳೆಲ್ಲಾ ಅವನ ಮನಸ್ಸಿನ ಮೇಲೆ ಯಾವ ಪ್ರತಿಕ್ರಿಯೆಯನ್ನೂ ಮಾಡಲಿಲ್ಲ. ಹೀಗಾಯಿತಲ್ಲ ಎಂದು ಎದೆ ಒಡೆದು ಹುಂಜ ತೀರಿಕೊಂಡನಂತೆ.

ಆದಕ್ಕೇ ಮೊಮ್ಮಕ್ಕಳಿರಾ! ಜಯಗಳಿಸಿದಾಗ ಕೊ ಕ್ಕೋ ಕ್ಕೋ ಮಾಡಬೇಡಿ, ಹಣಬಂದಾಗ ಎಲ್ಲರಿಗೂ ಕಾಣುವಂತೆ ದಾನ ಧರ್ಮ ಮಾಡಬೇಡಿ, ಇಲ್ಲದೆ ಇದ್ದರೆ ತೆರಿಗೆ ಮಾವ ಬಂದು ಸುಲಿದುಬಿಡುತ್ತಾನೆ,

ಎಂದು ನಮ್ಮ ಅಡುಗೂಲಜ್ಜಿ ಗೆದ್ದು ಬಿದ್ದ ಹುಂಜದ ಕತೆಯನ್ನು ಹೇಳಿದಳು.

■

# ಗುಬ್ಬಚ್ಚಿ-ಫೋಟೋ ಕತೆ

ಇಂದಾನೊಂದು ಕಾಲದಲ್ಲಿ ಕೇರಿಯ ಅಂಚಿನಲ್ಲಿ ದೊಡ್ಡದೊಂದು ಆಲದ ಮರವಿತ್ತಂತೆ. ಅದರ ಮೇಲೆ ಗುಬ್ಬಚ್ಚಿ ದಂಪತಿಗಳು ಗೂಡು ಕಟ್ಟಿಕೊಂಡಿದ್ದುವಂತೆ. ೨೦-೩೦ ಗುಬ್ಬಚ್ಚಿ ಗೂಡುಗಳಿಗೂ ಒಂದು ಗಡವಾ ಗುಬ್ಬಚ್ಚಿ ಯಜಮಾನ್ಯವನ್ನು ವಹಿಸಿಕೊಂಡಿತ್ತಂತೆ. ಅದರ ದೇಹ ರಚನೆಗೆ ಹೆದರಿಯೋ, ಅದರ ಕೊಕ್ಕಿನ ರಭಸಕ್ಕೆ ಬೆದರಿಯೋ ಏನೋ, ಉಳಿ ಗಂಡು ಗುಬ್ಬಚ್ಚಿಗಳೆಲ್ಲಾ ಎಷ್ಟೇ ಅವಮಾನ ಆದರೂ, ಏನೇ ಸಂಶಯ ಬಂದರೂ ತೆಪ್ಪಗೇ ಇರುತ್ತಿದ್ದುವಂತೆ. ಅದೇ ಕಾರಣಗಳಿಂದಾಗಿ ಆ ವಠಾರದ ಸಂಸಾರವಂದಿಗ ಹೆಣ್ಣು ಗುಬ್ಬಚ್ಚಿಗಳೂ ಕೂಡ ತೋರ ನಡವಳಿಕೆಯಲ್ಲಿ ಹೆದರಿಕೊಂಡಂತೆ ಆಡುತ್ತಿದ್ದುವಂತೆ. ಆದರೆ ಆಳಮನಸ್ಸಿನ ಒಂದು ಅಂಚಿನಲ್ಲಿ ಗಡವಾ ಗುಬ್ಬಚ್ಚಿಯನ್ನು ಮೆಚ್ಚಿಕೊಂಡೂ ಇದ್ದುವಂತೆ. ಹೀಗಾಗಿ ಗಡವಾ ಗುಬ್ಬಚ್ಚಿಯು ಸಂಸಾರ ವಂದಿಗರ ಆ ವಠಾರದಲ್ಲಿ ಅರಬ್ಬಿದೇಶದ ಷೇಕ್‌ನ ತೆರನಾಗಿ ಕ್ಷಣಿಕವಾದರೂ ಮೋಜಿನ ಜೀವನ ನಡೆಸುತ್ತಿತ್ತಂತೆ.

ಅದೇ ಕೇರಿಯ ಹಳೆ ಪಾಳೆಯಗಾರನ ಮನೆಯ ಹೊರ ಛಾವಣಿಯಲ್ಲಿ ಕೆಲವು ಊರ ಗುಬ್ಬಚ್ಚಿಗಳು ವಾಸವಾಗಿದ್ದುವಂತೆ. ಹರಕಲು ಚಾಪೆಕಡ್ಡಿಗಳು, ಮುರುಕಲು ಕಸ ಪರಿಕೆಗಳು, ಹಳೆ ಹಾಸಿಗೆಯ ಹತ್ತಿ ತುಣುಕುಗಳು ಇವನ್ನೆಲ್ಲಾ ಶೇಖರಿಸಿಟ್ಟು ಅವುಗಳು ತಂತಮ್ಮ ಗೂಡುಗಳನ್ನು ರಚಿಸಿಕೊಂಡಿದ್ದುವಂತೆ. ಗೂಡು ಬಡವಾದರೂ ಕೇರಿ ಹಕ್ಕಿಗಳಲ್ಲವೇ? ಆದುದರಿಂದ ತಮ್ಮ ಮರಿ ಗುಬ್ಬಚ್ಚಿಗಳಿಗೆ ಆಟ ಪಾಠ, ನೃತ್ಯ ಸಂಗೀತ, ಇವೆಲ್ಲವನ್ನೂ ಕಲಿಸುತ್ತಿದ್ದುವಂತೆ. ಒಂದು ಬಡಗುಬ್ಬಚ್ಚಿ ಸಂಸಾರದಲ್ಲಿ ಒಂದೇ ಹೆಣ್ಣು ಮಗಳು ಉಳಿದುಕೊಂಡಿದ್ದಳಂತೆ. ಮಿಕ್ಕವೆಲ್ಲಾ ಮೊಟ್ಟೆಯ ಹಂತದಲ್ಲೇ ಅವರಿವರ ಪಾಲಾದವಂತೆ. ಹಾಗಾಗಿ ತಾಯ್ತಂದೆ ಗುಬ್ಬಚ್ಚಿಗಳು ಹೆಣ್ಣುಮರಿಯನ್ನು ಬಲು ಅಕ್ಕರೆ ಯಿಂದ ಮುದ್ದುಮಾಡಿ ಮಾಡಿ ಬೆಳೆಸಿದುವಂತೆ. ಆ ಹೆಣ್ಣು ಮರಿಗೆ ನೃತ್ಯ ಅಂದರೆ ಆಸೆ. ನಾಟಕ ಅಂದರೆ ಪ್ರೀತಿ. ಹೀಗಾಗಿ ಕೇರಿಯ ಕೇಂದ್ರ ಗುಬ್ಬಚ್ಚಿ ಕಾಲೇಜಿನಲ್ಲಿ ಅವಳ ಪರಿಚಯಕ್ಕಾಗಿ ಮಿಕ್ಕೆಲ್ಲ ಹುಡುಗ ಗುಬ್ಬಚ್ಚಿಗಳೂ ಹಾತೊರೆಯುತ್ತಿದ್ದುವಂತೆ. ಕ್ಷಣಕಾಲ ನಿನ್ನೊಡನಿದ್ದರೆ ಕೃತಾರ್ಥರು ಎಂದು ಭಾವಿಸುತ್ತೇವೆ ಎಂದು ಹೇಳುತ್ತಿದ್ದರಂತೆ.

ಕೇಂದ್ರ ಕಾಲೇಜಿನ ವಾರ್ಷಿಕೋತ್ಸವವನ್ನು ವೈಭವದಿಂದ ಆಚರಿಸಲು ಪ್ರಾಚಾರ್ಯ ಗುಬ್ಬಚ್ಚಿ ತೀರ್ಮಾನಿಸಿತಂತೆ. ಸಚಿವರನ್ನೇ ಆಹ್ವಾನಿಸಿತಂತೆ, ಅಧ್ಯಕ್ಷತೆ ವಹಿಸಲು. ಊರೂರ ಹಿರಿಯರಿಗೆಲ್ಲಾ ವಾರ್ಷಿಕೋತ್ಸವದ ಆಹ್ವಾನವನ್ನು ಗುಬ್ಬಚ್ಚಿ ವಾಣಿಯ ಮೂಲಕ ಕಳಿಸಿಕೊಡಲಾಯಿತಂತೆ.

ಗಡವಾ ಗುಬ್ಬಚ್ಚಿಗೂ ಆಹ್ವಾನಪತ್ರಿಕೆ ಹೋಯಿತು. ತನ್ನ ವಠಾರದ ನೋಡಿದ ಮುಖಗಳನ್ನೇ

ನೋಡಿ ನೋಡಿ ಗಡವಾ ಗುಬ್ಬಚ್ಚಿಗೂ ಬೇಜಾರು ಬಂದಿತ್ತು. ಕೇರಿಯ ಕಾಲೇಜಿನ ವಾರ್ಷಿಕೋತ್ಸವಕ್ಕೆ ಹೋಗೋಣ, ಅವರೇನಾದರೂ ಚಂದಾ ಹಣಕ್ಕೆ ಕೈಒಡ್ಡಿದರೆ ತೆತ್ತುಬಿಡೋಣ ಎಂದು ನಿರ್ಧರಿಸಿತಂತೆ.

ಗರಿಗಳನ್ನೆಲ್ಲಾ ಪಾಲೀಷ್‌ಮಾಡಿ, ಕೊಕ್ಕನ್ನು ಚೂಪುಮಾಡಿ, ಕೊರಲನ್ನು ಸರಿಪಡಿಸಿಕೊಂಡು, ಸೀಟಿ ಹಾಕುತ್ತ ಗಡವಾ ಗುಬ್ಬಚ್ಚಿ ಕಾಲೇಜಿಗೆ ಹೋಯ್ತಂತೆ. ಸ್ವತಃ ಪ್ರಾಚಾರ್ಯರೇ ಸ್ವಾಗತಿಸಿ ಎದುರು ಸಾಲಿನಲ್ಲಿ ಕೂರಿಸಿದರಂತೆ. ನೃತ್ಯಮಾಡುಕ್ಕೆ ತರುಣಿ ಗುಬ್ಬಚ್ಚಿ ಬಂದು, ಹಾಡುತ್ತಾ ಕುಣಿದಾಗ, ಇವಳೇನು ಗುಬ್ಬಚ್ಚಿಯೋ, ಕೋಗಿಲೆಯೋ ಎನ್ನುವಂತೆ ಗಡವಾ ಗುಬ್ಬಚ್ಚಿಗೆ ಅನುಮಾನ ಬಂತಂತೆ. ಗರಿಗಳ ವೈಖರಿ, ಒಡಲಿನ ಥಳಥಳಿ, ಕಂಗಳ ಸಿರಿಸಿರಿ, ಎಲ್ಲವೂ ಗಡವಾ ಗುಬ್ಬಚ್ಚಿಯ ಹೃದಯವನ್ನು ಕುಕ್ಕಿದುವಂತೆ. ಇಂತಹ ತರುಣಿ ಗುಬ್ಬಚ್ಚಿ ಕೇರಿಯಲ್ಲಿದೆ ಅಂತಲೂ ತಿಳಿಯದಲ್ಲ ನನಗೆ. ಅಪ್ಪ ಇದ್ದ ಆಲದ ಮರವನ್ನೇ ನೆಚ್ಚಿಕೊಂಡು, ಬಾಳನ್ನು ವ್ಯರ್ಥಮಾಡಿಕೊಂಡೆನಲ್ಲ, ಎಂದು ಪೇಚಾಡಿತಂತೆ.

ವಾರ್ಷಿಕೋತ್ಸವ ಮುಗಿದಮೇಲೆ ಪ್ರಾಚಾರ್ಯರನ್ನು ಗಡವಾ ಗುಬ್ಬಚ್ಚಿ ಬಲು ಹೊಗಳಿತಂತೆ. ತರುಣಿ ಗುಬ್ಬಚ್ಚಿಯ ನೃತ್ಯವನ್ನು ನೀವೇ ಕಲಿಸಿರಬೇಕು ಎಂದೂ ಹೇಳಿತಂತೆ. “ನಾನೇನೂ ನೃತ್ಯ ಕಲಿಸಲಿಲ್ಲ ಆದರೆ ಸಲಹೆಗಳನ್ನು ಕೊಟ್ಟಿದ್ದುಂಟು” ಎಂದು ಪ್ರಾಚಾರ್ಯ ಗುಬ್ಬಚ್ಚಿಯೂ ಸಂಕೋಚ ಪಡುತ್ತಾ ಸುಳ್ಳು ಹೇಳಿತಂತೆ. “ನಿಮ್ಮಂತಹ ಗಣ್ಯರು ಮೆಚ್ಚುಗೆಯನ್ನು ತರುಣಿ ಗುಬ್ಬಚ್ಚಿಗೇ ಹೇಳಿದರೆ ಎಷ್ಟೋ ಉತ್ತೇಜನ ಕೊಟ್ಟಹಾಗಾಗುತ್ತದೆ” ಎಂದೂ ಅಂದರಂತೆ. “ಅದಕ್ಕೇನು, ಸಿದ್ಧ” ಅಂದನಂತೆ ಗಡವಾ.

ತರುಣಿ ಗುಬ್ಬಚ್ಚಿಯನ್ನು ಬಾಯಿತುಂಬ ಹೊಗಳಿ, “ಬಾಯಿಯವರೇ! ನಮ್ಮ ಮನೆಗೆ ನಾಳೆ ಉಪಾಹಾರಕ್ಕೆ ಬನ್ನಿ, ಎಂದು ಆಹ್ವಾನಿಸಿತಂತೆ ಗಡವಾ ಗುಬ್ಬಚ್ಚಿ. ತನ್ನ ಪರಿಚಯದ, ವಿಳಾಸವಿದ್ದ ಕಾರ್ಡನ್ನೂ ಕೊಟ್ಟಿತಂತೆ. ಗಡವಾ ಗುಬ್ಬಚ್ಚಿಯನ್ನು ತರುಣಿ ನೋಡಿದಾಗ

ಭಾರಿ ಜರದ ವಾರೆ ರುಮ್ಮಾಲ ಸುತ್ತೀಕೊಂಡಾವ
ತುಂಬು ಮೀಸಿ ತೀಡಿಕೋತ ಹುಬ್ಬುಹಾರಿಸಾಂವ

ಎಂದು ಹಾಡಿಕೊಂಡ ಮಾನವ ಹೆಣ್ಣಿಗೆ ಹೇಗಾಗುತ್ತಿತ್ತೋ ಹಾಗಾಯಿತಂತೆ.

ಮಾರನೆ ಸಂಜೆಹೊತ್ತಿಗೆ ಆಲದಮರದ ಗಡವಾ ಗುಬ್ಬಚ್ಚಿಯ ಗೂಡಿಗೆ ತರುಣಿ ಗುಬ್ಬಚ್ಚಿ ಹಾರಿ ಬಂದಳಂತೆ. ಹುರಿದ ಕಡಲೆ, ಖಾರದ ಬಟಾಣಿ, ಹಸಿ ಎರೆಹುಳು ಎಲ್ಲವನ್ನೂ ತರುಣಿಗೆಂದು ಗಡವಾ ತರಿಸಿಟ್ಟಿದ್ದನಂತೆ. ತರುಣಿ ಬುಟ್ಟಿಗೆ ಬಿದ್ದಳಂತೆ.

ತರುಣಿ ಗುಬ್ಬಚ್ಚಿಯ ತಾಯ್ತಂದೆಯರು “ಬೇಡ! ಮಗಳೇ! ಹಳ್ಳಿಗಾಡಿನ ಜನ, ಒರಟು, ನಲಿಗಿ ಹೋಗ್ತೀ ನೀನು” ಅಂತ ಎಷ್ಟೋ ಹೇಳಿದರಂತೆ. “ಅವರ ಮನೆ ಎಷ್ಟು ಪಸಂದಾಗಿದೆ. ಕಲ್ಲು ಹೊಡೆಯೋ ಹುಡುಗರಾರೂ ಅಲ್ಲಿ ಇಲ್ಲ. ಅವರನ್ನೇ ಮದುವೆಯಾಗ್ತೀನಿ” ಎಂತ ತರುಣಿ ಹಟ ಹಿಡಿದಳಂತೆ. ಮದುವೆಯಾಗಲೇಬೇಕು, ಹಾಗೆ ಮಾಡಿಕೊಂಡು ಬಂದಿದ್ದೀನಿ ಎಂದೂ ಹೆದರಿಸಿದಳಂತೆ.

ಮದುವೆಯಾದ ಮೇಲೆ ಎರಡು ದಿನ ಸುಖವಾಗಿದ್ದರಂತೆ, ನವದಂಪತಿಗಳು, ಆಲದಮರದಲ್ಲಿ. ವಠಾರದ ಗಂಡು ಗುಬ್ಬಚ್ಚಿಗಳೆಲ್ಲಾ ಗಡವನ ಕಾಟ ಇನ್ನು ತಪ್ಪಿತು ಎಂದು ಸಂತೋಷಪಟ್ಟುವಂತೆ.

ವಠಾರದ ಹೆಣ್ಣು ಗುಬ್ಬಚ್ಚಿಗಳು, "ಕೆಮ್ಮಿದರೆ ಕೆಳಗೆ ಬೀಳೋ ಹಾಗಿದೆ ಈ ಗುಬ್ಬಿ, ಇದನ್ನ ಏನಂತ ಗಡವಾ ಮೆಚ್ಚಿಕೊಂಡಿತೋ" ಎಂದು ಅಸೂಯೆಪಡುತ್ತಾ ಮೂದಲಿಸಿ ಮಾತನಾಡಿಕೊಂಡುವಂತೆ.

ತರುಣಿ ಗುಬ್ಬಚ್ಚಿಗೆ ನಾಲ್ಕು ತಿಂಗಳಾದಾಗ ಬಲು ಕಾಂತಿಯುತಳಾದಂತೆ. ಅವಳನ್ನೇ ನೆಟ್ಟದೃಷ್ಟಿಯಲ್ಲಿ ಗಡವಾ ನೋಡುತ್ತಿದ್ದನಂತೆ. ಪುಕ್ಕಗಳನ್ನು ಸೆರಗಿನ ತರಹ ಸೆಳೆದುಕೊಂಡು ತರುಣಿ ಹೇಳಿದಳಂತೆ "ಅಲ್ಲಾ ಅಂದ್ರೆ! ಕಾಡು ಗುಬ್ಬಿಗಳ ತರಹ ಅಹನ್ಯಹನಿ ಕಾಲಕ್ಷೇಪ ಮಾಡುವ ಬದಲು, ಕೇರಿಯಲ್ಲಿ ಒಂದು ಹುಲ್ಲುಕಡ್ಡಿ, ಹಿಸಿದ ಹತ್ತಿ ಗಡಂಗ್ ಇಡಬಾರದೇ? ಕೇರಿ ಗುಬ್ಬಚ್ಚಿಗಳೆಲ್ಲಾ ಗಿರಾಕಿಗಳಾಗ್ತಾರೆ. ಬೇಗ ಶ್ರೀಮಂತರಾಗಬಹುದು" ಎಂದು.

"ಸೈ" ಅಂದನಂತೆ ಗಡವಾ. ತರುಣಿ ಏನಾದರೂ ಆಗ ಬೆಂಕಿಗೆ ಬೀಳಿ ಎಂದಿದ್ದರೆ ಸಂತೋಷವಾಗಿ ಗಡವಾ ಬೀಳುತ್ತಿದ್ದ. ಹಾಗಾಗಿತ್ತು ಅವನ ಪಾಡು.

ಮಾರನೆ ದಿನವೇ ಕೇರೀಗೆ ಹೋಗಿ ಗಡಂಗನ್ನು ತೆಗೆದ. ಬೆಳಗಿನ ಝಾವ ಚಿಲಿಪಿಲಿ ಅಂತ ಹಾಡ್ತಾ ಹೋದೋನು, ಸಂಜೆ ಮುಂದೆ ಗಡಂಗಿನ ಬಾಗಿಲು ಹಾಕಿ ಸುಸ್ತಾಗಿ ಹಿಂತಿರುಗುತ್ತಿದ್ದನಂತೆ. ಗಡಂಗಿಗೆ ಬೇಕಾದ ಸಾಮಾನುಗಳನ್ನು ಅಲ್ಲಿ ಇಲ್ಲಿ ಹುಡುಕಿ ತರೋದು, ಸಾಲ ಮಾಡೋದು, ಲೆಕ್ಕ ಬರೆಯೋದು, ಸಾಲ ವಸೂಲಿಮಾಡೋದು, ಒಂದೇ ಎರಡೇ ಕೆಲಸ!! ದಣಿದು ಬಂದು ಬಿದ್ದುಕೊಂಡರೆ ಸಾಕಪ್ಪಾ ಅಂತ ಮಲಗುತ್ತಿದ್ದನಂತೆ.

ಹೀಗೆ ಕಾಲ ಸಾಗಿತು. ಆರು ತುಂಬಿತು ತರುಣಿ ಗುಬ್ಬಚ್ಚೀಗೆ, ಅವಳ ಲೆಕ್ಕದಲ್ಲಿ. ಧನುರ್ಮಾಸ ಬಂದಿತ್ತು. ವಾದ್ಯಾರುಗಳೆಲ್ಲಾ ಶ್ಲೋಕ ಪಠಣ ಮಾಡೋಹೊತ್ತಿಗೆ ಅಭ್ಯಾಸ ಬಲದಿಂದ ಗಡವಾ ಎದ್ದು ಗೂಡಿನಿಂದ ಹೊರಬಿದ್ದ. ಇನ್ನೂ ನಿದ್ರಿಸುತ್ತಿದ್ದ ಬಸುರಿ ಹೆಂಡತಿಯ ಮುಖವನ್ನು ನೋಡಿದ. ಏನು ಕನಸು ಬೀಳುತ್ತಿದ್ದಳೋ! ಮಂದಹಾಸ ಮೂಡಿತ್ತು ಅವಳ ಮುಖದಲ್ಲಿ. ಬಲು ಅಂದವಾಗಿತ್ತು ಮುಖ. ಯಾರ ಕನಸು ಬೀಳ್ತಾ ಇರಬಹುದು ಎಂಬ ಅನುಮಾನ ಹೆಡೆಯಾಡಿಸಿತು. ಗಡಂಗಿಗೆ ಹೋಗಬೇಕಲ್ಲ! ಮೃದುವಾಗಿ ಕೊಕ್ಕಿಗೆ ಕೊಕ್ಕು ತಾಕಿಸಿ ಸದ್ದಿಲ್ಲದೆ ಕೇರಿಯ ಕಡೆಗೆ ರೆಕ್ಕೆಬಿಚ್ಚಿ ಹಾರಿಹೋದನಂತೆ.

ಅನುಮಾನ ಕಾಡುತ್ತಲೇ ಇತ್ತು. ವಠಾರದ ಗಂಡು ಗುಬ್ಬಿಗಳಿಗೆ ನಾನು ಕೋಡುಜೋಡಿ ಮೂಡಿಸಿದಂತೆ, ಅವುಗಳಲ್ಲಿ ಯಾವುದಾದರೂ ನನಗೆ ಮೂಡಿಸಿವೆಯೇ ಎಂದುಕೊಂಡನಂತೆ. ಅಷ್ಟು ಧೈರ್ಯ ಆ ಮುಂಡೇವಕ್ಕೆ ಎಲ್ಲಿ ಬರಬೇಕು ಅಂತ ಸಮಾಧಾನ ತಂದುಕೊಂಡನಂತೆ. ಧನುರ್ಮಾಸ! ಕೊಕ್ಕು ಕಟಕಟ ಮಾಡುತ್ತಿತ್ತು. ಗೂಡಿನಲ್ಲೇ ಬೆಚ್ಚಗೆ ಮಲಗಿದ್ದರೆ ಎಷ್ಟು ಹಿತವಾಗಿರುತ್ತಿತ್ತು. ಬೆಚ್ಚಗಿರುವ ಹಾಸಿಗೆಯಲ್ಲಿ ಬೆಚ್ಚಗೆ ತಬ್ಬಿಕೊಂಡು ಮಲಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎನ್ನಿಸಿತಂತೆ. ಯಾಕಾರ ಗಡಂಗಿಟ್ಟೆ? ಯಾವ ಶ್ರೀಮಂತಿಕೆಗೆ? ಎನ್ನಿಸಿತಂತೆ. ಅವಳ ಸಲಹೆಯೇ ಇದು. ನಾನು ಗೂಡು ಬಿಟ್ಟು ಹೋಗುವಂತೆ ಮಾಡಲು ಈ ಉಪಾಯ ಹೂಡಿದಳೋ ಎಂದು ಅನುಮಾನದ ನಾಲಿಗೆ ನುಡಿಯಿತಂತೆ. "ಛೇ! ಅಂತಹವಳಲ್ಲ! ಮೇಲೆ ಬಿದ್ದು ಮದುವೆ ಮಾಡಿಕೊಂಡಿದ್ದಾಳೆ, ಅವಳು ಯಾಕಾರೂ ಮೋಸ ಮಾಡ್ತಾಳೆ" ಎಂದು ಸಮಾಧಾನದ ನಾಲಿಗೆ ನುಡಿಯಿತಂತೆ.

ಅಂಗಡಿ ಸಾಮಾನುಗಳನ್ನು ಅಲ್ಲಿ ಇಲ್ಲಿ ಶೇಖರಿಸಿ ಗಡಂಗಿಗೆ ಹೋದ. ಅಷ್ಟು ಹೊತ್ತಿಗೆ ಸುಮಾರು ಹತ್ತರ ಸಮಯ. ಘೋಷಣೆಗಳು ಕೇಳಿ ಬಂದುವಂತೆ.

"ಗುಬ್ಬಿ ಮೇಲೆ ಮನುಷ್ಯ ಪಿಶಾಚಿಗಳು ಬ್ರಹ್ಮಾಸ್ತ್ರ ಉಪಯೋಗಿಸಿವೆ
ಗುಬ್ಬಿ ಪೇಟೆ ಬಂದ್, ಗುಬ್ಬಿ ಕೇರಿ ಬಂದ್, ಇವತ್ತು ಹರತಾಳ"

ಅಂತ ಪಿಲ್ಲು ಗುಬ್ಬಿಗಳೆಲ್ಲಾ ಘೋಷಣೆ ಮಾಡುತ್ತಾ ಬಂದುವಂತೆ. ಗಡಂಗಿನ ಬಾಗಿಲನ್ನು ಮುಚ್ಚಿಸಿದುವಂತೆ.

ಗಡವಾ ಗುಬ್ಬಚ್ಚಿಗೆ ಬೇಜಾರಾಯಿತಂತೆ. ಹುಡುಗುಪಾಳ್ಯಕ್ಕೆ ಹೆದರಿ ಗಡಂಗ್ ಮುಚ್ಚೋ ಹಾಗಾಯಿತಲ್ಲ! ಅಂತ. ಮನೆಗೆ ಹಿಂತಿರುಗಿತಂತೆ.

ಕೊರಗುತ್ತಾ ಹಿಂತಿರುಗುತ್ತಿತ್ತಂತೆ. ಸದ್ದಿಲ್ಲ. ಗದ್ದಲವಿಲ್ಲವಂತೆ. ಆಲದ ಮರದ ತನ್ನ ಗೂಡಿನಿಂದ "ಪ್ಯಾರ್ ಕರೂಂ" ಅಂತ ಗುಬ್ಬಿ ಹಾಡು ಕೇಳಿಸಿತಂತೆ. ಗೂಡಿನ ಬಾಗಿಲು ತೆಗೆದಿತ್ತಂತೆ. ಹಜಾರದಲ್ಲೇ ಹೆಂಡತಿ ಕೂತಿದ್ದಳಂತೆ.

ಬೆನ್ನು ಬಾಗಿಲ ಕಡೆಗೆ ಇದೆ. ಅವಳೆದುರಿಗೆ ೧೮-೨೦ರ ಪ್ರಾಯದ, ಕಿರುಮೀಸೆಯ ಯುವಕ ಗುಬ್ಬಿಯ ಫೋಟೋ. ಫೋಟೋ ನೋಡುತ್ತಾ ಪ್ಯಾರ್ ಕರೂಂ ಅಂತ ಕಿರು ದನಿಯಲ್ಲಿ ಹಾಡುತ್ತಿದ್ದಾಳಂತೆ. ಚಿತ್ರದ ಕೊಕ್ಕಿಗೆ ತನ್ನ ಕೊಕ್ಕನ್ನು ಹಗೂರಾಗಿ ತೀಡ್ತಾ ಇದ್ದಳಂತೆ.



ತಡೆಯುಕ್ಕಾಗಲಿಲ್ಲವಂತೆ, ಗಡವಾ ಗುಬ್ಬಿಗೆ. "ಯಾರದೇ ಚಿತ್ರ ಅದು" ಅಂತ ಕಿರುಚಿದನಂತೆ. ತರುಣಿ ಗುಬ್ಬಚ್ಚಿ ಬೆದರಿದಳಂತೆ. ತರುಣಿ ಗುಬ್ಬಚ್ಚಿಯ ಕೊಕ್ಕು ಫೋಟೋ ಹರಿದು ಪಟದ ಆಚೆಕಡೆಗೆ ಹೋಯಿತಂತೆ. ಫೋಟೋ ಛಿದ್ರ ಛಿದ್ರವಾಯಿತಂತೆ.

"ಯಾರದೇ ಫೋಟೋ ಅದು! ಪ್ಯಾರ್ ಕರೂಂ ಫೋಟೋ! ಸಂಜೆಗೆ ಗಂಡ ಬರ್ತಾನೆ ಅನ್ನೋ ಧೈರ್ಯದಿಂದ ಮೋಜುಮಾಡ್ತಾ ಇದ್ದೀಯೇನೆ! ಬೇಗ ಬಂದಿದ್ದಕ್ಕೆ ನಿನ್ನ ಚಿಲ್ಮೀಷ ಗೊತ್ತಾಯಿತು" ಎಂದು ಗಡವಾ ಗುಬ್ಬಿ ರೇಗಿದನಂತೆ.

ಫೋಟೋ ಕಟ್ಟಿನಿಂದ ತಲೆಯನ್ನು ತರುಣಿ ಗುಬ್ಬಚ್ಚಿ ಹೊರತೆಗೆದಳಂತೆ. ಕೋಕಿಲ ಕಂಠದಲ್ಲಿ ನುಡಿದಳಂತೆ.

"ನೋಡಿ ಅಂದ್ರೆ, ಬೆಳಗಾಗುವ ಮುಂಚೆ ಎದ್ದು ಹೋಗ್ತೀರಿ. ಸಂಜೆ ಮುಂದೆ ಸುಸ್ತಾಗಿ ಬರ್ತೀರಿ. ನಿಮ್ಮ ಮುಖವನ್ನು ಹಗಲಿನಲ್ಲಿ ಕಂಡು ಎಷ್ಟೋ ಯುಗಗಳಾದುವು. ನನ್ನ ಕೈಗೆ ಸಿಗೋದು ಈ ಫೋಟೋ ಒಂದೆ. ನಿಮ್ಮ ಮದುವೇಲಿ ತೆಗೆಸಿದ ಫೋಟೋ ಅದು. ಅಕ್ಕ ಅದನ್ನು ನನಗೆ ಕೊಟ್ಟುಹೋದಳು. ಆ ಫೋಟೋಗೆ ಮುತ್ತು ಕೊಟ್ಟೆ. ನೀವು ಕಿರುಲಿದಾಗ ಗಾಬರಿಯಾಗಿ ಆ ಚಿತ್ರಾನೂ ಹರಿದುಹೋಯಿತು" ಎಂದು.

ಗಡವಾ ಗುಬ್ಬಚ್ಚಿಯ ಮನಸ್ಸು ತಿಳಿಯಾಯ್ತಂತೆ. "ನನ್ನ ಮೊದಲ ಹೆಂಡತಿ ದಿಟವಾಗಲೂ ನನ್ನನ್ನು ಪ್ರೀತಿಸ್ತಾ ಇದ್ದಳು. ತೌರಿನ ಮೋಹ ಹೆಚ್ಚಾಯಿತು ಅಂತ ಕಾಣುತ್ತೆ. ನೀನು ಬಂದಮೇಲೆ ತೌರಿಗೆ ಹೋಗ್ತೀನಿ ಅಂತ ಹೋದವಳು ಹಿಂತಿರುಗಿ ಬರಲೇ ಇಲ್ಲ" ಎಂದು ಹೇಳಿದನಂತೆ.

ತಿರುಗಿ ಕೊಕ್ಕಾಟ, ತಿಕ್ಕಾಟ.

ಹರಿದು ಹೋಗಿದ್ದ ಫೋಟೋದಲ್ಲಿ ಯಾರ ಬಿಂಬ ಮೂಡಿತ್ತೋ? ಗಂಡನಿಗಂತೂ ತಿಳಿಯದು. ದೇವರಿಗೆ ಏನಾದರೂ ಗೊತ್ತೋ ಏನೋ? ಎಂದು ನವ್ಯ ಆಡುಗೂಲಜ್ಜಿ ಗುಬ್ಬಚ್ಚಿ-ಫೋಟೋ ಕತೆಯನ್ನು ಮೊಮ್ಮಕ್ಕಳಿಗೆ ಹೇಳಿದಳಂತೆ.

■

# ಕಪ್ಪೆ ಮತ್ತು ರಾಜಕುಮಾರಿ ಕತೆ

ಇಂದಾನೊಂದು ಕಾಲದಲ್ಲಿ ಒಬ್ಬ ರಾಜ ಇದ್ದನಂತೆ. ತುಂಬಾ ಹಣವಿತ್ತಂತೆ ಅವನಿಗೆ. ತುಂಬಾ ಜನ ಹೆಂಡಿರೂ ಇದ್ದರಂತೆ. ಆದರೂ ಅವನಿಗೆ ಒಬ್ಬಳೇ ಮಗಳಿದ್ದಳಂತೆ. ತಾಯಿ ಚಿಕ್ಕಮ್ಮಂದಿರ ಪೋಷಣೆಯಲ್ಲಿ ರಾಜಕುಮಾರಿ ಸಿಂಧಿಹಸು ಬೆಳೆದಹಾಗೆ ಬಾಲ್ಯದಲ್ಲೇ ಬೆಳೆದಿದ್ದಳಂತೆ. ಅರಮನೆ ಅಂಗಳದಲ್ಲಿ ಒಂದು ದಿವಸ ರಾಜಕುಮಾರಿ ಚೆಂಡನ್ನಿಟ್ಟುಕೊಂಡು ಪುಟಹೊಡೆಯೊ ಆಟ ಆಡುತ್ತಾ ಇದ್ದಳಂತೆ. ಆ ಚೆಂಡು ಒಂದು ಸರ್ತಿ ಇವಳು ಬಾರಿಸಿದ ರಭಸಕ್ಕೆ ಅರಮನೆ ಆಚೆಗೆ ಹೋಗಿಬಿಡ್ತಂತೆ. ರಾಜಕುಮಾರಿ ಅದರ ಹಿಂದೇನೇ ಓಡಿದಳಂತೆ. ಚೆಂಡು ಸ್ವಲ್ಪ ದೂರ ಹೋದಾಗ ಎದುರಿಗೆ ಸಿಕ್ಕ ಬಾವೀಲಿ ಬಿದ್ದಹೋಯ್ತಂತೆ.

ಬಾವಿಕಟ್ಟೆ ಹತ್ತಿರ ನಿಂತುಕೊಂಡು "ನನ್ನ ಚೆಂಡು ಕಳೆದುಹೋಯ್ತು" ಅಂತ ರಾಜಕುಮಾರಿ ಅಳುತ್ತಾ ಇದ್ದಳಂತೆ.

ಬಾವಿ ಒಳಗೆ ಒಂದು ಕಪ್ಪೆ ಇತ್ತಂತೆ. ರಾಜಕುಮಾರಿ ಅತ್ತಿದ್ದು ಅದಕ್ಕೆ ಕೇಳಿಸಿತಂತೆ. ಬಾವಿಯಿಂದ ಹೊರಕ್ಕೆ ಅದು ಕುಪ್ಪಳಿಸಿಕೊಂಡು ಬಂದು "ರಾಜಕುಮಾರಿ! ಯಾಕೆ ಅಳ್ತಾ ಇದ್ದಿ" ಎಂದು ಕೇಳಿತಂತೆ. "ಹೀಗೆ, ನನ್ನ ಚೆಂಡು ಬಾವೀಲಿ ಬಿದ್ದುಹೋಯ್ತು" ಎಂದು ರಾಜಕುಮಾರಿ ಹೇಳಿದಳಂತೆ. "ಅದಕ್ಕೆ ಯಾಕೆ ಅಳ್ತಿ, ನಾನು ಚೆಂಡು ತಂದುಕೊಡ್ತೀನಿ, ಆದರೆ ನನ್ನನ್ನು ನೀನು ಮದುವೆ ಮಾಡಿಕೋಬೇಕು" ಎಂದಿತಂತೆ ಕಪ್ಪೆ.

"ಓಹೋ ಅದಕ್ಕೇನು ಆಗಬಹುದು" ಎಂದಳಂತೆ ರಾಜಕುಮಾರಿ. ರಾಜರಾಗಲೀ ರಾಜ್ಯಾಡಳಿತ ನಡೆಸೋರಾಗಲೀ ರಾಜಕುಮಾರಿಯರಾಗಲಿ, ಆಡಿದ ಮಾತಿನಂತೆ ಯಾವಾಗತಾನೆ ನಡೆದುಕೊಂಡಿದ್ದಾರೆ! ಅಲ್ಲದೆ ಕಪ್ಪೇನ ಯಾರಾದರೂ ಮದುವೆ ಮಾಡಿಕೊಳ್ಳುತ್ತಾರೆಯೇ? ರಾಜ್ಯದ ಯಾವ ಶಾಸನ ತಾನೆ ಅದಕ್ಕೆ ಸಮ್ಮತಿ ಕೊಡುತ್ತದೆ?

ಕಪ್ಪೆ ಬಾವಿಗೆ ಕುಪ್ಪಳಿಸಿತಂತೆ. ಚೆಂಡನ್ನು ಬಾಯಲ್ಲಿ ಕಚ್ಚಿಕೊಂಡು ಬಂದು ರಾಜಕುಮಾರಿಗೆ ಕೊಟ್ಟಿತಂತೆ. ಚೆಂಡು ಕೈಗೆ ಸಿಕ್ಕಿದ ತಕ್ಷಣ ರಾಜಕುಮಾರಿ ಅರಮನೆಗೆ ಓಡಿಬಿಟ್ಟಳಂತೆ. ಬಿಡಬಾರದು ಇವಳನ್ನ ಅಂತ ಕಪ್ಪೆ ಕುಪ್ಪಳಿಸುತ್ತಾ ಅರಮನೆಗೆ ಬಂದಿತಂತೆ. ರಾಜನ್ನ ಕಂಡಿತಂತೆ. "ಹೀಗೆಲ್ಲಾ ಆಯಿತು ಇವತ್ತು. ನಿನ್ನ ಮಗಳು ನನ್ನನ್ನು ಮದುವೆ ಮಾಡಿಕೊಳ್ಳುತ್ತೇನೆ ಎಂದು ಭಾಷೆಕೊಟ್ಟು, ಮೋಸಮಾಡಿದಳು" ಎಂದು ಅಹವಾಲು ಹೇಳಿಕೊಂಡಿತಂತೆ.

ರಾಜ ಮಗಳನ್ನು ಕರೆಸಿ ಕೇಳಿದನಂತೆ. ಹ್ಞೂ ಅಪ್ಪ ಅಂತ ಅವಳು ಹೇಳಿದಳಂತೆ. ಸರಿ! ಕೊಟ್ಟಮಾತಿಗೆ ತಪ್ಪಬಾರದು, ಸಿಕ್ಕ ವರವನ್ನು ಬಿಡಲುಬಾರದು ಎಂದು ಹೇಳಿ ರಾಜ ಮಗಳ

ಮದುವೆಗೆ ಏರ್ಪಾಡು ಮಾಡಿದನಂತೆ. ಕಪ್ಪೆ ಪಕ್ಕದಲ್ಲಿ ರಾಜಕುಮಾರಿ ಕೂತುಕೊಂಡಳಂತೆ. ಪುರೋಹಿತರು ಮಂತ್ರಾಕ್ಷತೆ ಚೆಲ್ಲಿದರಂತೆ.

ಏನಾಶ್ಚರ್ಯ! ಕಪ್ಪೆ ಮಾಯವಾಗಿ ಸ್ಫುರದ್ರೂಪಿಯಾದ ರಾಜಕುಮಾರ ಅಲ್ಲಿ ನಿಂತುಕೊಂಡನಂತೆ. ರಾಜನಿಗೆ ರಾಜಕುಮಾರಿಗೆ, ರಾಜಕುಮಾರಿಯ ಚಿಕ್ಕಮ್ಮಂದಿರಿಗೆ ಎಲ್ಲರಿಗೂ ಬಲು ಖುಷಿಯಾಯ್ತಂತೆ.



ಅಲ್ಲಿತನಕ ಹಳೆಯ ಕತೇನೇ. ಆದರೆ ಆ ರಾತ್ರಿ ಬೇರುಮನೆಯಲ್ಲಿ ರಾಜಕುಮಾರಿ ಗಂಡನ ಜತೆಗೆ ಚಕ್ಕಂದ ಆಡುಕ್ಕೆ ಕುಳಿತಳಂತೆ.

"ನೋಡಿ, ಅಂದ್ರೆ, ನಮ್ಮಪ್ಪನಿಗೆ ಪುಳಿಯೋಗರೆ ಅಂದರೆ ಪಂಚಪ್ರಾಣ. ನಮ್ಮ ನಾಲ್ಕನೇ ಚಿಕ್ಕಮ್ಮ ದೇವಸ್ಥಾನದಲ್ಲಿ ಹುಟ್ಟಿದೋಳು. ಆಕೆ ಪುಳಿಯೋಗರೆ ಮಾಡಿದ ದಿವಸ ನಮ್ಮಪ್ಪನಿಗೆ ಸ್ವರ್ಗಸುಖ. ನನಗೂ ಪುಳಿಯೋಗರೆ ಅಂದರೆ ಬಲು ಖುಷಿ. ನಾಳೆನಾಡಿದ್ದರಲ್ಲಿ ನಿಮಗೂ ಆಕೆ ಕೈಲಿ ಮಾಡಿಸಿಕೊಡ್ತೀನಿ."

"ನೋಡಿ ಅಂದ್ರೆ, ನಮ್ಮ ಅಮ್ಮನಿಗೆ ಸಕ್ಕರೆ ಪೊಂಗಲು ಅಂದರೆ ಬಲು ಇಷ್ಟ. ನನ್ನ ಎಂಟನೇ ಚಿಕ್ಕಮ್ಮ ಸಕ್ಕರೆಪೊಂಗಲು ಮಾಡಿದರೆ ಅರಮನೆಯೆಲ್ಲಾ ಘಂ ಅಂತ ತುಂಬುತ್ತೆ. ಮುಂದಿನ ಶುಕ್ರವಾರ ಆಕೆ ಕೈಲಿ ಮಾಡಿಸಿಕೊಡ್ತೀನಿ."

"ನಮ್ಮ ಕರುಹಟ್ಟಿಯಲ್ಲಿ ಒಂದು ಪುಟಾಣಿ ಹಸು ಇದೆ ಅಂದ್ರೆ, ಎಷ್ಟು ಮುದ್ದಾಗಿದೆ ಅಂತೀರಿ! ಅದು ಅಂಬಾ ಅಂದರೆ ತಾಯಿ ಕರೆದಹಾಗೆ ಆಗುತ್ತೆ ಅಂದ್ರೆ."

ಈ ರೀತಿ ಅವಳ ಅಪ್ಪನ ಮನೆ ವೈಭವವನ್ನೆಲ್ಲಾ ಕೊಚ್ಚಿಕೊಳ್ಳೋ ಹೊತ್ತಿಗೆ ಅವಳ ಗಂಡನಿಗೆ ನಿದ್ರೆ ಬಂದುಬಿಟ್ಟಿತ್ತಂತೆ.

ಕತೆಯನ್ನೆಲ್ಲಾ ಮುಗಿಸಿ ರಾಜಕುಮಾರಿ ಪಕ್ಕದಲ್ಲಿ ನೋಡ್ತಾಳೆ. ಗಂಡನಿಗೆ ನಿದ್ರೆ. 'ಸರ್ರಿ' ಅಂತ ಅವಳೂ ಮಲಗಿಕೊಂಡಳಂತೆ. ಮಾತಾಡಿ ಮಾತಾಡಿ ಸುಸ್ತಾಗಿತ್ತು. ಅವಳಿಗೂ ಬೇಗ ನಿದ್ರೆ ಬಂದಿತಂತೆ.

ಬೆಳಗಿನ ಝಾಮ ಅರಮನೆ ಅಳಿಯ ಎದ್ದನಂತೆ. ಪಕ್ಕದಲ್ಲಿ ಮಲಗಿ ನಿದ್ರಿಸುತ್ತಿದ್ದ ರಾಜಕುಮಾರೀನ ನೋಡಿದನಂತೆ. ಒಂದು ರಾತ್ರಿ, ಮೊದಲ ರಾತ್ರೀಗೆ ಹೀಗೆ ಬೇಜಾರಾಯಿತು. ಇವಳ ಜತೆ ಬಾಳು ನಡೆಸೋದು ನರಕ ಅಂತ ಅರ್ಥವಾಯ್ತಂತೆ.

ಬೆಳಗಿನ ಝಾಮ ನಸುಕಿನಲ್ಲೇ ಬೇರುಮನೆಯಿಂದ ಮೆಟ್ಟುಗಾಲಿನಲ್ಲಿ ನಡೆದು ಅರಮನೆ ಅಂಗಳಕ್ಕೆ ಹೋದನಂತೆ. ಅಲ್ಲಿಂದ ಮೆಲ್ಲಗೆ ಪರಾರಿಯಾಗೋಣ ಅಂತ. ಆದರೆ ಆ ಹೊತ್ತಿಗೆ ರಾಜ ಅಲ್ಲಿಗೆ ಬಂದನಂತೆ.

ಗಂಡು ಗಂಡಸರಲ್ಲಿ ಗುಟ್ಟೇನು ಬಂತು? ಮಾವನಿಗೆ ಹಿಂದಿನ ರಾತ್ರಿಯ ಅನುಭವವನ್ನೆಲ್ಲಾ ಹೇಳಿದನಂತೆ. ನಾನು ಮೊದಲು ರಾಜಕುಮಾರನಾಗಿದ್ದೆ. ಬಾವಿಕಟ್ಟೆಯ ಭೇತಾಳ ಮಾಟಮಾಡಿ ನನ್ನನ್ನು ಕಪ್ಪೆಯನ್ನಾಗಿ ಮಾಡಿತು. ಆಗ ಅದು ರಾಜಕುಮಾರೀನ ಮದುವೆಯಾದರೆ ಶಾಪ ವಿಮೋಚನೆಯಾಗುತ್ತೆ ಅಂತಲೂ ಹೇಳಿತ್ತು. ಕಪ್ಪೆಯಾಗಿದ್ದಾಗ ಬಾವೀಲಿ ನಾನು ವಟ ವಟ ಗುಟ್ಟಿದ್ದೇ ವಟ ವಟ ಗುಟ್ಟಿದ್ದು. ಎಷ್ಟೋ ಸರ್ತಿ ಆ ಭೇತಾಳನೆ ಬಂದು ನಿನ್ನ ವಟ ವಟ ಕೇಳುಕ್ಕಾಗುಲ್ಲ, ನಿನ್ನ ನಾಲಿಗೆ ಸೇದಿ ಹೋಗಬಾರದೆ ಅಂತ ಹೊಡಕೊಂಡಿದ್ದೂ ಉಂಟು. ನನಗೂ ಪ್ರಾಯ, ತೆರೆದ ಕೊರಲಿಂದ ಅಲವತ್ತುಕೊಳ್ಳುತ್ತಿದ್ದೆ.

ಆದರೆ ಮಾವಯ್ಯ, ನಿಮ್ಮ ಮಗಳು ವಟ ವಟ ಮಾತಾಡುಕ್ಕೆ ಶುರುಮಾಡಿದರೆ, ಅವಳ ಮುಂದೆ ನಾನು ಮೂಗ. ನನ್ನಿಂದ ಅವಳ ಜತೆ ಬಾಳುಕ್ಕೆ ಸಾಧ್ಯವಿಲ್ಲ. ಅದಕ್ಕೇ ಈಗಲೇ ಓಡಿಹೋಗಿ ಬಾವಿಕಟ್ಟೆ ಭೇತಾಳನಿಗೆ ಅಡ್ಡಬಿದ್ದು "ತಿರುಗಿ ಶಾಪ ಕೊಡು, ತಿರುಗಿ ಕಪ್ಪೆ ಆಗ್ತೀನಿ. ಒಂದು ಮಾತನ್ನೂ ಆಡುಲ್ಲ" ಎಂದು ಬೇಡಿಕೋತೀನಿ ಎಂದು ಹೇಳಿಕೊಂಡನಂತೆ.

"ನಿನ್ನ ಕಷ್ಟ ನನಗೆ ಅರ್ಥವಾಯ್ತು ಅಳಿಯಮೈಯ್ಯ. ಅವರಮ್ಮನ ಜತೇಲಿ ನಾನು ಏಗಿದ್ದೇನೆ. ಅದಕ್ಕೇ ಬೆಳಗಿನ ಝಾಮದ ಚಳಿಯಲ್ಲೂ ಇಲ್ಲಿಗೆ ಶಾಂತವಾಗಿರೋಣ ಅಂತ ನಡುಗ್ತಾ ಬಂದಿದ್ದೀನಿ. ಭೇತಾಳ ನಿನ್ನ ಬೇಡಿಕೆಯನ್ನು ಈಡೇರಿಸಲಿ" ಎಂದು ಹರಸಿ ಕಳಿಸಿದನಂತೆ.

ಅದಕ್ಕೆ ಈಗ ಬಾವೀಲಿ ಕಪ್ಪೆ ಇದ್ದರೂ ವಟ ವಟ ಕೇಳಿಸುಲ್ಲ. ಆದರೆ ತಾಯಿ ಮಗಳ ವಟ ವಟವನ್ನು ತಡೆಯಲಾರದೆ ರಾಜ ಒಂದೊಂದು ಸರ್ತಿ ತಲೆಮೇಲೆ ಕೈ ಇಟ್ಟುಕೊಂಡು ಬಾವಿಕಟ್ಟೆಯ ಮೇಲೆ ಕೊರಗ್ತಾ ಕೂತಿರ್ತಾನೆ.

ಎಂದು ನವ್ವ ಅಡುಗೂಲಜ್ಜಿ ಕಪ್ಪೆ ರಾಜಕುಮಾರಿ ಕತೇನ ಹೇಳಿದಳಂತೆ.

# ಕಾಗಕ್ಕ ಗುಬ್ಬಣ್ಣನ ಕತೆ

**ಬಾ**ಳಪೇಟೆಯ ಅಂಚಿನಲ್ಲಿ ಅಶ್ವತ್ಥಮರ ಒಂದಿತ್ತಂತೆ. ಆ ಮರದ ಪಕ್ಕದಲ್ಲೇ ಬೇವಿನಮರ ಒಂದಿತ್ತಂತೆ. ಅಶ್ವತ್ಥಮರದ ಮೇಲೆ ಕಾಗಕ್ಕ ಗೂಡು ಕಟ್ಟಿಕೊಂಡು ಗಂಡ, ಮಕ್ಕಳ, ಜತೆ ವಾಸಮಾಡಿಕೊಂಡಿತ್ತಂತೆ. ಓದಿದ ಹುಡುಗಿ ಕಾಗಕ್ಕ. ಬೆಡಗಿನ ಹೆಣ್ಣು ಕಾಗಕ್ಕ. ಹೀಗಾಗಿ ಸಂಸಾರ ವನ್ನು ನಿಭಾಯಿಸ್ತಾ ಇದ್ದರೂ, ಸಿನೀಮಾಗೆ ಹೋಗುವುದನ್ನಾಗಲೀ, ನಾಟಕ ನೋಡುವುದನ್ನಾಗಲೀ, ಸಂತೋಷ ಕೂಟಗಳಿಗೆ ಹೋಗುವುದನ್ನಾಗಲೀ ಯಾವುದನ್ನೂ ಬಿಟ್ಟಿರಲಿಲ್ಲವಂತೆ.

ಅವತ್ತು ಭಾನುವಾರ. ಕಾಗಕ್ಕ ಗಂಡನಿಗೆ ಹೇಳಿದಳಂತೆ, "ಇವತ್ತು ಎಲ್ಲರೂ ಹೋಟಲಿಗೆ ಹೋಗಿ ಊಟಮಾಡೋಣ ಅಂದ್ರೆ. ಕಡುಬು ತಿಂದು ತುಂಬಾ ದಿವಸಗಳಾಯ್ತು. ಮಧ್ಯಾಹ್ನ ಮ್ಯಾಟಿನಿ ಷೋ ನೋಡಿಕೊಂಡು ಸಂಜೆ ಮುಂದೆ ಹಿಂತಿರುಗೋಣ, ಇವತ್ತು ರಜಾ ಅಲ್ಲವೇ" ಅಂತ.

"ನನಗೆ ರಜಾ ಎಲ್ಲಿ ಬಂತೆ! ಇವತ್ತು ಸಜಾ. ನಮ್ಮ ಆಫೀಸರು ಮನೆಗೆ ಬಾ ಅಂತ ಹೇಳಿದ್ದಾರೆ. 'ಸರ್ಕಾರಕ್ಕೆ ವರದಿ ಒಪ್ಪಿಸಬೇಕು. ವಿಷಯಗಳನ್ನೆಲ್ಲಾ ಇವತ್ತು ರಜಾದಿನ ಕೂತುಕೊಂಡು ಸರಿಮಾಡಿ ಬಿಡೋಣ. ಆಫೀಸಿನಲ್ಲಿ ಬರೋರು ಹೋಗೋರು, ಇವರ ಕಾಟದಲ್ಲಿ ಕೆಲಸಮಾಡುಕ್ಕೆ ಆಗುಲ್ಲ' ಅಂತ ಹೇಳಿದ್ದಾರೆ. ಮಧ್ಯಾಹ್ನ ಊಟ ಮಾಡಿಕೊಂಡು ಹೊರಡಬೇಕು" ಅಂತ ಹೇಳಿದ ನಂತೆ.

"ಹಾಗೇ ಅಂದ್ರೆ! ಹಾಗಾದ್ರೆ ಮಕ್ಕಳಿಗೆಲ್ಲಾ ಎರದು ಬಿಡ್ತೀನಿ. ಒಂದು ಸಾರು, ಒಂದು ಹುಳಿ, ಒಂದ ಅನ್ನ ಬೇಯಿಸಿ ಬಿಡಿ. ಹನ್ನೊಂದಕ್ಕೆ ಊಟ ಮಾಡ್ಕೊಂಡು ಹೋಗೋರಂತೆ" ಅಂತ ಕಾಗಕ್ಕ ಕೊಕ್ಕಿಗೆ ಕೊಕ್ಕು ತಾಕಿಸಿ ಲೊಚಗುಟ್ಟಿದಳಂತೆ.

ಗಂಡ ಅಡಿಗೆ ಮನೇಲಿ ಒತೆ ಹತ್ತಿಸ್ತಾ ಇದಾನೆ. ಕಾಗಕ್ಕ ಮಕ್ಕಳಿಗೆ ಎಣ್ಣೆ ಒತ್ತುತ್ತಾ ಇದ್ದಳಂತೆ. ಬಾಗಿಲಲ್ಲಿ ಯಾರೋ ಕಾಗಕ್ಕ ಕಾಗಕ್ಕ ಅಂತ ಕೂಗಿದ ಹಾಗಾಯ್ತಂತೆ. ಎಣ್ಣೆ ಒತ್ತುತ್ತಾ ಇದ್ದ ಕಾಗಕ್ಕ ಅಲ್ಲಿಂದಲೇ "ಮಕ್ಕಳಿಗೆ ಎರೀತಾ ಇದೀನಿ, ಆಮೇಲೆ ಬಾಪ್ಪ" ಅಂತ ಕೂಗುಹಾಕಿದಳಂತೆ. ಅಡಿಗೆ ಮನೆಗೆ ಕೇಳಿಸೋಹಾಗೆ "ದೋಬಿ ಬರೋದಕ್ಕೆ ಈ ಮುಹೂರ್ತವನ್ನೇ ಕಾಯ್ತಾ ಇರ್ತಾನೆ, ಬೇಗ ಬೆಳಿಗ್ಗೆ ಬರಬಾರದೆ" ಎಂದು ಲೊಟಕಿದಳಂತೆ.

ಮಕ್ಕಳಿಗೆಲ್ಲಾ ಎರೆದಳಂತೆ. ಅಷ್ಟು ಹೊತ್ತಿಗೆ ಗಂಡ ಅಡಿಗೆ ಮಾಡಿ ಮುಗಿಸಿದ್ದನಂತೆ. ಗಂಡ ಮಕ್ಕಳನ್ನು ಎಲೆ ಹಾಕಿ ಕೂರಿಸಿ, ಕಾಗಕ್ಕ ಬಡಿಸುಕ್ಕೆ ಶುರುಮಾಡಿದಳಂತೆ. ಆಗ ತಿರುಗಿ ಕಾಗಕ್ಕ ಕಾಗಕ್ಕ ಅಂತ ಯಾರೋ ಬಾಗಿಲು ತಟ್ಟುತ್ತಾ ಕೂಗಿದರಂತೆ. "ಮಕ್ಕಳಿಗೆ ಬಡಿಸುತ್ತಾ ಇದೀನಿ,

ಆಮೇಲೆ ಬಾಪ್ಪ" ಅಂತ ಕಾಗಕ್ಕ ಉತ್ತರಿಸಿದಳಂತೆ. "ಬೆಣ್ಣೆ ಮಾರೋನು ಅಂತ ಕಾಣುತ್ತೆ. ಬೆಳಿಗ್ಗೆ ಬಾಪ್ಪ ಅಂತ ಎಷ್ಟು ಸರ್ತಿ ಹೇಳಿದ್ದೀನಿ, ಊಟದ ಹೊತ್ತಿಗೇ ಬರ್ತಾನೆ" ಅಂತ ಗಂಡ ಮಕ್ಕಳೆದುರಿಗೆ ಟೀಕೆ ಮಾಡಿದಳಂತೆ.



ಊಟ ಮಾಡಿಕೊಂಡು ಗಂಡ ಅಧಿಕಾರಿಗಳ ಮನೆಯತ್ತ ತಲೆಗೆ ಗುಡ್ಡೆ ಹಾಕಿಕೊಂಡು ಹೊರಟು ಹೋದನಂತೆ. ಎರಸಿಕೊಂಡಿದ್ದ ಮಕ್ಕಳೆಲ್ಲಾ ಹೊಟ್ಟೆ ತುಂಬಾ ಊಟಮಾಡಿದ್ದರಿಂದ ಮಲಗಿಕೊಳ್ಳಲು ಹೋದುವಂತೆ.

ಆಮೇಲೆ ಕಾಗಕ್ಕ ಅಡಿಗೆ ಮನೆಗೆ ಹೋಗಿ ಎರಡು ತುತ್ತು ಬಾಯಿಗೆ ಬೇಗ ಹಾಕಿಕೊಂಡು, ತನ್ನ ಕೊಠಡಿಗೆ ಹೋದಳಂತೆ. ಅಲ್ಲಿ ಬೇರೆ ಸೀರೆ ಉಟ್ಟು ಹೊಸ ರವಿಕೆ ತೊಟ್ಟುಕೊಂಡು ಶೃಂಗಾರ ಮಾಡಿಕೊಂಡಳಂತೆ.

ಅಷ್ಟು ಹೊತ್ತಿಗೆ ಪುನಃ ಕಾಗಕ್ಕ ಅಂತ ಬಾಗಿಲು ಬಳಿ ಯಾರೋ ಕೂಗಿದರಂತೆ.

ಕಾಗಕ್ಕನ ಶೃಂಗಾರ ಮುಗಿದಿತ್ತಂತೆ. ಬಾಗಿಲು ತೆಗೆದಳಂತೆ. ಹೊರಗೆ ಪಕ್ಕದ ಬೇವಿನ ಮರದಲ್ಲಿ ಗೂಡು ಕಟ್ಟಿಕೊಂಡಿದ್ದ ಗುಬ್ಬಣ್ಣ ನಿಂತಿದ್ದನಂತೆ. "ಬಾ! ಗುಬ್ಬಣ್ಣ, ಈಗ ಮ್ಯಾಟನೀಗೆ ಹೋಗೋಣ. ಸಂಜೆ ಐದರ ಹೊತ್ತಿಗೆ ತಿರುಗಿ ಗೂಡು ಸೇರಿಕೋಬೇಕು. ಮಕ್ಕಳು ಏಳುವ ಹೊತ್ತು.

ಅವರಿಗೆ ಕಾಫಿ ಕಾಯಿಸಿ ಕೊಡಬೇಕು" ಎಂದು ಹೇಳುತ್ತಾ, ರೆಕ್ಕೆಯ ಸೆರಗನ್ನು ಹಾರಿಸಿ ಪುರ್ರಂತ ಗುಬ್ಬಣ್ಣನ ಜತೆ ಮ್ಯಾಟಿನಿ ಸಿನಿಮಾಕ್ಕೆ ಹೋದಳಂತೆ.

ಕೇಳಿಸಿತೇ ಮಗು! ಕಾಗಕ್ಕ ಜಾಣ ಹೆಣ್ಣು. ಸಂಸಾರಾನೂ ನಿಭಾಯಿಸಿಕೊಂಡು ತನ್ನ ಮಜದ ಜೀವನಾನೂ ನಡೆಸಿಕೊಂಡಳು. ಅದಕ್ಕೇ ಮಗು! ಏನು ತೆಗೆದುಕೊಂಡರೂ, ಬದಲೀಗೆ ಅಂತ ಒಂದನ್ನು ಇಟ್ಟುಕೊಂಡಿರಬೇಕು ಎಂದು ನವ್ಯ ಆಡುಗೂಲಜ್ಜಿ ಕಾಗಕ್ಕ ಗುಬ್ಬಣ್ಣನ ಕತೆಯನ್ನು ಹೇಳಿದಳಂತೆ.

# ಗಣೇಶ ಉದ್ಭವಿಸಿದ

ಎದೆ ಸೀಳಿದರೆ ಎರಡು ಅಕ್ಷರ ಇತ್ತಿಲ್ಲ ಗೋವಿಗೆ. ಅದಕ್ಕೇ ಅವನು ಸಿಂಧಘಟ್ಟದ ಬಸ್ ನಿಲ್ದಾಣದಲ್ಲಿ ಸಾಮಾನು ಹೊರುವ ಕೆಲಸ ಮಾಡಿಕೊಂಡು ಸುಖವಾಗಿರುತ್ತಿದ್ದ. ಸಂಜೆಮುಂದೆ ಏನಿಲ್ಲ ಅಂದರೂ ನೂರು ನಯೆ ಪೈಸೆ ನೂರೈವತ್ತು ನಯೆ ಪೈಸೆ ಎಣಿಸಿಕೊಂಡು ಸಂತೋಷಪಡುತ್ತಿದ್ದ. ಹಿಂದಿನ ಕಾಲದಲ್ಲಿ ಎರಡು ಪಾವಲಿ, ಮುಕ್ಕಾಲು ರೂಪಾಯಿ, ಒಂದುಕಾಲು ದೀಡು ರೂಪಾಯಿ ಹೀಗೆ ಲೆಕ್ಕಾ ಹಾಕುತ್ತಾ ಇದ್ದವನು ಹೊಸ ಲೆಕ್ಕ ಬಂದ ಮೇಲೆ ಐವತ್ತು ನೂರು ನೂರೈವತ್ತು ಸಂಪಾದಿಸಿದೆ ಎಂದು ಸಂತೋಷಪಡುತ್ತಿದ್ದ.

ಮೊದಲು ನಾಲ್ಕು ಭಕ್ರಿ ತಿಂದು ತೇಗ್ತಾ ಇದ್ದೋನು ಈಗ ಸಂಪಾದಿಸಿದ ಹಣದಲ್ಲಿ ಎರಡೇ ಭಕ್ರಿ ಕೊಳ್ಳೋಹಾಗಿದ್ದರೂ ಸಂತೋಷಪಡ್ತಾನೇ ಇದ್ದ.

ಸಂತೋಷ ಪಡೋರನ್ನು ಕಂಡರೆ ದೇವರಿಗೆ ಹೊಟ್ಟೆ ಉರಿ ಅಂತ ಕಾಣುತ್ತೆ. ಟಾಂಗ್ ಕೊಟ್ಟು ಬೀಳಿಸ್ತಾನೆ!

ಬಸ್ ಛಾವಣಿಯಿಂದ ಟ್ರಂಕ್ ಇಳಿಸಿಕೊಡುತ್ತಿದ್ದಾಗ ಟ್ರಂಕು ಜಾರಿತು. ಗೋವಿ ಕೆಳಗೆ ನಿಂತು ಇಸುಕೊಳ್ತಿದ್ದ. ಅವನ ಎದೆಮೇಲೆ ಸರಿಯಾಗಿ ಟ್ರಂಕು ಜಾರಿ ಬಿತ್ತು. ಅದರ ಮೂಲೆ ಅಂಚೇ ಮೊದಲು ಬಿತ್ತು. ಚರ್ಮ ಹರಿಯಿತು. ಮಾಂಸ ತುಂಡಾಯ್ತು. ಮೂಳೆ ಕಾಣಿಸೋ ಹಾಗಾಯ್ತು. ಅವ ಮೂರ್ಛೆ ಹೋದ. ಟ್ರಂಕು ರಕ್ತದಿಂದ ತೋಯ್ದಿತ್ತು.

ಬಸ್ ಡ್ರೈವರು ಬೇಗ "ಪ್ರಥಮ ಚಿಕಿತ್ಸೆ"ಯ ಪೆಟ್ಟಿಗೆ ತೆಗೆದ. ಅದರಲ್ಲಿ ಐಯೊಡಿನ್ ಒಂದೇ ಇದ್ದುದು. ಅದನ್ನೇ ಧಾರಾಳವಾಗಿ ಗಾಯಕ್ಕೆ ಹಚ್ಚಿದ. "ಅಯ್ಯಯ್ಯಪ್ಪೋ!" ಎಂದು ಚೀತ್ಕಾರ ಕೇಳಿಸಿತು. ಬಸ್ ನಡುಗಿತು.

ಗೋವಿ ಎದ್ದು ಕೂತು ಬೋಲಬೋಲ ಮಾಡಿದ. ಉರಿ ನೋವು ಎಂದು ಬೊಬ್ಬೆ ಇಟ್ಟ. ಕಾಫಿ ತರಿಸಿ ಕುಡಿಸಿ ಬಾಯಿಗೆ ಬೀಡಿ ಇಟ್ಟು ಹಚ್ಚಿದಮೇಲೆ ಅವನು ಬೊಬ್ಬೆ ಕಡಿಮೆ ಮಾಡಿದ್ದು. ಅದೇ ಬಸ್ಸಿನಲ್ಲಿ ಅವನನ್ನು ಕೂರಿಸಿಕೊಂಡು ಹೆಬ್ಬಿಗುಬ್ಬಾಲೆಯಲ್ಲಿರುವ ದೊಡ್ಡ ದವಾಖಾನೆಗೆ ಕರೆದುಕೊಂಡು ಹೋದರು. ಅಲ್ಲಿ ಚಿಕಿತ್ಸೆ ಪಡೆಯುತ್ತ ಮೂರು ತಿಂಗಳು ಇದ್ದ. ಗಾಯ ಮಾಗಿತು. ಆದರೆ ಎದೆ ಮೇಲೆ ಮಧ್ಯದಲ್ಲಿ ಚರ್ಮ ಮಾಗುತ್ತಾ ಬಂದ ಹಾಗೆಲ್ಲಾ ಗಂಟುಕಟ್ಟಿಕೊಂಡಿತು. ಕಡೆಗೆ ಚರ್ಮದ ಗಂಟೂ ಬೆಳೆಯುತ್ತಾ ಬಂತು. ವಕ್ರವಕ್ರವಾಗಿ ಬೆಳೆಯಿತು.

ಆಸ್ಪತ್ರೆಯಿಂದ ಹಿಂದಕ್ಕೆ ಕಳಿಸುವ ಸಂಜೆ ಮುಂದೆ ಡಾಕ್ಟರು ಪರೀಕ್ಷೆ ಮಾಡಿ ಹೇಳಿದರು: "ಎಲ್ಲಾ ವಾಸಿಯಾಗಿದೆ. ಹೋಗಬಹುದು. ಆದರೆ ಚರ್ಮದ ಗಂಟು ಸ್ವಲ್ಪ ನವೆ ಕೊಡುತ್ತೆ.

ಅಭ್ಯಾಸವಾದರೆ ಅದೂ ಸರಿಹೋಗುತ್ತೆ. ನೋಡುಕ್ಕೇನೋ ಗಂಟು ಅವಲಕ್ಷಣ. ಆದರೆ ನಿನ್ನ ಎದೆಮೇಲೆ ಇದು ಗಂಟಿಕ್ಕಿರೋದು ಸಾಕ್ಷಾತ್ ಗಣಪತಿಯ ಮೂರ್ತಿಯ ಹಾಗೆಯೇ ಇದೆ. ಬೇಕಾದರೆ ಕನ್ನಡಿಯಲ್ಲಿ ನೋಡಿಕೋ! ನಿನ್ನ ಎದೆ ಮೇಲೆ ದೇವರು ಬಂದು ಪ್ರತ್ಯಕ್ಷವಾಗಿದಾನೆ" ಎಂದು ಹಾಸ್ಯಮಾಡುತ್ತಾ ಹೇಳಿದರು.

ಆಸ್ಪತ್ರೆಯ ಜವಾನ ಇದನ್ನು ಕೇಳಿಸಿಕೊಂಡ. ಅವನೂ ನೋಡಿದ. ಗೋವಿ ಎದೆ ಮೇಲೆ ಗಣಪತಿಯ ಸಾಕ್ಷಾತ್ ಉದ್ಭವಮೂರ್ತಿ!! ಯಾರಿಗೂ ಕಾಣದ ಹಾಗೆ ಕೆನ್ನೆ ಕೆನ್ನೆ ತಪ್ಪು ಹೊಡೆದುಕೊಂಡ. ನಮಸ್ಕಾರ ಮಾಡಿದ.

* * * * *

ಗೋವಿ ಹೆಬ್ಬಿಗುಬ್ಬಾಲೆಯ ಬಸ್ ನಿಲ್ದಾಣದ ಹತ್ತಿರಕ್ಕೆ ಅರಿವೆ ಹೊದ್ದುಕೊಂಡು ಹೋದ. ಅಲ್ಲೇ ಕುಳಿತಿದ್ದ. ಆಸ್ಪತ್ರೆ ಕೆಲಸ ಮುಗಿಸಿಕೊಂಡು ಜವಾನ ಮನೆಗೆ ಹೋಗುತ್ತಿದ್ದಾಗ ಬಸ್ ನಿಲ್ದಾಣದ ಹತ್ತಿರ ಗೋವಿಯನ್ನು ಕಂಡ. ಹತ್ತಿರ ಹೋದ. ಅಡ್ಡಬಿದ್ದ. "ದೇವರು ನಿಮ್ಮ ಮ್ಯಾಗೆ ಬಂದಾನ್ರೀ! ನೀವು ಮಹಾತ್ಮರ್ರೀ!" ಅಂದ. ಜನವೆಲ್ಲಾ ಗುಂಪು ಸೇರಿದರು. ಏನು ಎತ್ತ ಎಂದೆಲ್ಲಾ ಕೇಳಿದರು. ಆಸ್ಪತ್ರೆ ಜವಾನ ಎಲ್ಲವನ್ನು ವಿಶದವಾಗಿ ಹೇಳಿದ. ಎದೆ ಮೇಲಿನ ಅರಿವೆಯನ್ನು ಗೋವಿ ತೆಗೆಯಲೇಬೇಕಾಯ್ತು.

ಮಸು ಬೆಳಕಿನಲ್ಲಿ ಎದೆ ಮೇಲೆ ಗಣಪತಿಯ ವಿಗ್ರಹ ಸ್ಫುಟವಾಗಿ ಕಾಣಿಸುತ್ತಿತ್ತು. ಜನರೆಲ್ಲಾ ಅಡ್ಡಬಿದ್ದರು. ಹಣ್ಣುಕಾಯಿ ತಂದು ಇಟ್ಟು ಪೂಜಿಸಿದರು. ಕೆಲವರು ಊದುಕಡ್ಡಿ ಹಚ್ಚಿಟ್ಟು ಕರ್ಪೂರದಾರತಿ ಎತ್ತಿದರು. ರೂಪಾಯಿ ನಾಣ್ಯಗಳನ್ನೇ ಅರ್ಪಿಸಿದರು. ಬಿಸಿ ಬಾದಾಮಿ ಹಾಲು ತಂದುಕೊಟ್ಟರು ಕೆಲವರು.

ಗೋವೀಗೆ ಇದೊಂದೂ ಅರ್ಥವಾಗಲಿಲ್ಲ. ಮೊದಲೇ ಮಂಕ. ಈಗ ಮರುಳನಂತೆ ಕೂತ. ಆದರೂ ತುಟಿಯ ಛಟ. ಸೊಂಟದಿಂದ ಬೀಡಿ ಒಂದನ್ನು ತೆಗೆದು ಬಾಯಿಗಿಟ್ಟುಕೊಂಡ. ಇದನ್ನು ಕಂಡ ಒಬ್ಬ ತಕ್ಷಣ ಬೀಡಿ ತುದಿಗೆ ಬೆಂಕಿ ಹತ್ತಿಸಿ ಕೈಮುಗಿದ.

ಅವತ್ತಿನಿಂದ ಗೋವಿಗೆ ದೆಸೆ ಶುರುವಾಯ್ತು. ಸುಂಟರಗಾಳಿ ಬೀಸಿದಂತೆ ಅವನ ಕೀರ್ತಿ ಹರಡಿತು. ಊರೂರಿಂದೆಲ್ಲಾ ಜನ ಸಂಸಾರ ಸಮೇತ ಬಂದು ಪೂಜೆಮಾಡಿ ಹರಕೆ ಒಪ್ಪಿಸಿ ಹೋಗುತ್ತಿದ್ದರು.

* * * * *

ಮಹಾತ್ಮನೊಬ್ಬನ ಮೇಲೆ ಗಣೇಶನು ಪ್ರತ್ಯಕ್ಷವಾಗಿ ಉದ್ಭವಿಸಿರುವನೆಂಬ ಸುದ್ದಿ ರಾಜೀವಪುರಕ್ಕೂ ಬಂತು. ಅಲ್ಲಿ ನರಳುತ್ತಿದ್ದ ಕಾಟಂಕರರು, ಗೂಳರ್ಜರು, ಗಟ್ಟಿಗೆಯವರು ಇವರು ಮೂವರು ಸಿಂಧಘಟ್ಟಕ್ಕೆ ಬಂದರು. ಬಸ್ ನಿಲ್ದಾಣಕ್ಕೆ ಹೋದರು. ಈ ವೇಳೆಗೆ ಅಲ್ಲಿ ಸಣ್ಣ ಆಶ್ರಮವೇ ಬೆಳೆದು ಬಂದಿತ್ತು. ಗೋವಿಯನ್ನು ನೋಡಿದರು. ಅವನ ಎದೆ ನೋಡಿದರು. ಗಣೇಶನನ್ನು ಕಂಡರು. ಸಾಷ್ಟಾಂಗ ಬಿದ್ದರು.

"ಸ್ವಾಮೀಜಿ! ನೀವು ನನ್ನ ಹುಟ್ಟೂರು ಸಿಂಧಘಟ್ಟದ ಬಸ್ ನಿಲ್ದಾಣದಲ್ಲಿ ಇರುತ್ತಿದ್ದಿರಲ್ಲವೇ" ಎಂದರು. ಹ್ಞೂ ಎನ್ನುವಂತೆ ಸ್ವಾಮಿಜಿಯ ತಲೆದೂಗಿದರು.

"ನಿಮ್ಮ ಎದೆ ಮೇಲೆ ಅಲ್ಲವೇ ಟ್ರಂಕು ಬಿದ್ದಿದ್ದು" ಎಂದು ಕೇಳಿದರು. ಕೋಲೆಬಸವನ ತರಹ ಗೋವಿ ತಲೆಯಾಡಿಸಿದ.

"ಅಂದಮೇಲೆ ನಮ್ಮೂರಿನಲ್ಲೇ ದೇವರು ನಿಮ್ಮ ಮೇಲೆ ಪ್ರತ್ಯಕ್ಷವಾಗಲು ಶುರುವಾಗಿದ್ದು" ಎಂದು ಹರ್ಷದಿಂದ ಮೂವರು ಉದ್ಗಾರ ತೆಗೆದರು.

ಇವೀನ್ನೂಗೊ ತಲೆಯಾಡಿಸುತ್ತಲೇ ಇದ್ದ.

"ದೇವರು ಪ್ರತ್ಯಕ್ಷವಾದ ಊರಿಗೇ ತಾವು ಬಂದು ಆಶ್ರಮ ಕಟ್ಟಿಕೊಂಡಿರಬೇಕು. ಎಲ್ಲಾ ಖರ್ಚುವೆಚ್ಚಗಳನ್ನೂ ನಾವು ಕೊಡುವವರಿದ್ದೇವೆ" ಎಂದರು ಆ ಮೂವರು.

ಇದನ್ನೆಲ್ಲಾ ಹೆಬ್ಬಿಗುಬ್ಬಾಲೆಯ ಭಕ್ತರೆಲ್ಲ ಕೇಳಿದರು.

"ಅಲ್ಲಿ ಗಾಯವಾಯ್ತು, ಗೂನೆಯಾಯ್ತು ಅಷ್ಟೇ! ಆದರೆ ಬೇನೆತಾಪ ಕೊಟ್ಟು ದೇವರು ಪ್ರತ್ಯಕ್ಷವಾಗಿ ಉದ್ಭವಿಸಿದ್ದು ಹೆಬ್ಬಿಗುಬ್ಬಾಲೆಯಲ್ಲಿ. ಇಲ್ಲೇ ಇರಬೇಕು ಗುರುಗಳು", ಎಂದು ಆ ಊರ ಭಕ್ತರು ಹಠಹಿಡಿದರು.

ಗೋವಿ ಬಾಯಿತೆರೆದು ಏನನ್ನೂ ಅನ್ನಲಿಲ್ಲ. ಭಕ್ತಾದಿಗಳ ಜಗಳ ಅವನನ್ನು ತಾಕಲೇ ಇಲ್ಲ. ಬೆವರುಸುರಿಸಿ ದುಡಿದರೂ ಪೈಸೇಗಳಲ್ಲಿ ನೂರು ಕಾಣುವುದು ಕಷ್ಟವಾಗಿದ್ದ ಅವನಿಗೆ ಈಗ ಕೂತಲ್ಲೇ ಸುಖ ಭೋಜನಹಾಕಿ ಎದುರಿಗೆ ಸಾವಿರಾರು ರೂಪಾಯಿಗಳ ಸುರಿಮಳೆ ಬೀಳುವುದು ಬಲು ಹಿತವಾಗಿತ್ತು. ಇರಬೇಕು. ಇದರಲ್ಲೆಲ್ಲೋ ದೇವರ ಕೈವಾಡ. ಅವ ನನ್ನ ಹತ್ತಿರ ಬಂದಿರಲೇಬೇಕು. ಇಲ್ಲದೆ ಇದ್ದರೆ ಇದೆಲ್ಲಾ ಹೇಗೆ ಸಾಧ್ಯ ಎಂದೇ ಅವನ ಅರೆ ತಿಳಿವಳಿಕೆಯ ಮನಸ್ಸಿಗೆ ಅನ್ನಿಸಿತ್ತು. ಮೌನವಾಗಿಯೇ ಇದ್ದ ಹೆಬ್ಬಿ ಗುಬ್ಬಾಲೆಯ ಭಕ್ತರೆದುರಿಗೆ.... ರಾಜೀವಪುರದ ಮೂವರ ಹಠ ಸಾಗಲಿಲ್ಲ. ಅದಕ್ಕೆ ಅವರು ತಮ್ಮೂರಿಗೆ ಹೋಗಿ ದೊಡ್ಡ ಚಳುವಳಿಯನ್ನೇ ಹೂಡಿದರು. "ಹೆಬ್ಬಿಗುಬ್ಬಾಲೆಯು ಸಿಂಧಘಟ್ಟಕ್ಕೆ ಸೇರಬೇಕು. ದೀಡ್ ತಿಂಗಳಲ್ಲಿ ಆಗದಿದ್ದರೆ ಅಗಧಿ ಭಯಂಕರ ಚಳುವಳಿ ಹೂಡಲೇಬೇಕಾಗುತ್ತೆ. ದೇಶಾದ್ಯಂತ ಕರನಿರಾಕರಣೆ ಮಾಡ್ತೀವಿ. ಏಷ್ಯಾದಲ್ಲೆಲ್ಲಾ ಬೊಬ್ಬೆ ಹಾಕ್ತೀವಿ. ಪ್ರಪಂಚ ಸಂಸ್ಥೆ ಬಾಗಿಲಲ್ಲಿ ಬಾಯಿಬಡಿದುಕೊಳ್ಳುತ್ತೀವಿ. ಪ್ರಪಂಚದ ಸುತ್ತ ಸಾಟಲೈಟ್ ತಿರುಗಿಸಿ ಅದರಿಂದ ಚಳುವಳಿಯ ಬೊಬ್ಬೆಯನ್ನು ಪ್ರಸಾರಮಾಡ್ತೀವಿ."

ಎಂದೆಲ್ಲಾ ಹಾರಾಡಲು ಹೋರಾಡಲು ಆರಂಭಿಸಿದರು.

ಇತ್ತ ಹೆಬ್ಬಿ ಗುಬ್ಬಾಲೆಯ ಭಕ್ತರೂ ಪಣತೊಟ್ಟರು. "ನಮ್ಮ ಗುರುಗಳನ್ನು ಅದಾವ ಮಗ ಅಲ್ಲಾಡಿಸಾನು ನೋಡೇಬಿಡ್ತೀವಿ" ಅಂತ.

ಗುರು ಗೋವಿಯ ಬಾಯಿ ತೆರೆಯಲೇ ಇಲ್ಲ.

ಒಂದು ಸಂಜೆ, ಆಸ್ಪತ್ರೆ ದೊಡ್ಡ ಡಾಕ್ಟರಿನ ಚಿಕ್ಕ ಹೆಂಡತಿಯ ಮೊದಲ ಪುಟ್ಟ ಮಗುವಿಗೆ ಸಂದು ಬಂತು. ಆಸ್ಪತ್ರೆಯ ಡಾಕ್ಟರುಗಳೆಲ್ಲಾ ಮಗುವಿನ ಮೇಲೆ ಕೈಯನ್ನು ಸೂಜಿಯನ್ನು ಆಡಿಸಿದರು. ಮಗು ಮಂಕಾಗೇ ಇತ್ತು. ಆಗ ಆಸ್ಪತ್ರೆ ಜವಾನ ವೈದ್ಯರಿಗೆ ಸಲಹೆ ಮಾಡಿದ. "ಬಸ್ ನಿಲ್ದಾಣದ ಗುರುಗಳ ಆಶ್ರಮಕ್ಕೆ ಮಗುವನ್ನು ಕರೆದು ಒಯ್ಯಿರಿ, ದೇವರು ಒಳ್ಳೇದು ಮಾಡಾನು" ಅಂತ. ಚಿಕ್ಕ

ಹೆಂಡತಿಯ ಮಾತು ಕೇಳಿಕೊಂಡು ಮಗುವನ್ನು ಹೆಗಲಮೇಲೆ ಹಾಕಿಕೊಂಡು ಬಸ್ ನಿಲ್ದಾಣದ ಆಶ್ರಮಕ್ಕೆ ಬಂದರು ಡಾಕ್ಟರು. ಗುರುಗಳ ಕಾಲಬಳಿ ಮಗುವನ್ನು ಮಲಗಿಸಿದರು. ಗುರುಗಳು ಹೊದ್ದಿದ್ದ ಶಾಲು ತೆಗೆದು ಮಗುವಿಗೆ ಗಾಳಿ ಹಾಕಿದರು. ಮಗುವಿನ ಮಂಕು ಸ್ವಲ್ಪ ಕಡಿಮೆಯಾದಂತೆ ಕಾಣಿಸಿತು. ಇನ್ನು ಮೂರು ನಾಲ್ಕು ನಿಮಿಷ ಆಗಿರಬಹುದು. ಮಗು "ಅಮ್ಮ" ಎಂದಿತು. ಆಗ ಡಾಕ್ಟರು ಅವರ ಚಿಕ್ಕ ಹೆಂಡತಿ ಇಬ್ಬರೂ ಗುರುಗಳ ಕಡೆ ಕೈಮುಗಿದು ನೋಡಿದರು. ಎದೆ ಮೇಲೆ ಗಣೇಶ ಕಾಣಿಸಿತು. ಚರ್ಮದ ಗಂಟು ಅಂತ ಅವತ್ತು ಹಾಸ್ಯಮಾಡಿದೆ. ಗಣೇಶನ ಹಾಗೆ ಇದೆ ಎಂದು ಅಪಹಾಸ್ಯಮಾಡಿದೆ. ದಿಟವಾಗಲೂ ಗಜಾನನ ಮೂಡಿದ್ದಾನೆ ಅಂತ ತಿಳಿಯಲಿಲ್ಲ. ತಪ್ಪು ಮಾಡಿದೆ ಕ್ಷಮಿಸಿ ಎಂದು ಮಗುವಿನಿಂದ ಮುಂದಾರಿ ಕಾಣುವ ತಂದೆ ಡಾಕ್ಟರು ತಪ್ಪೊಪ್ಪಿಕೊಂಡು ಅಹಂಕಾರ ಕರಗಿ ಅಡ್ಡಬಿದ್ದರು.

■

# ಪ್ರಭಾವ ಬೀರಿದ ಪುಸ್ತಕಗಳು

ಬೇರೆ ಬೇರೆ ವರದಿಗಾರರಿಂದ

೧

"ಇಷ್ಟು ಚೆನ್ನಾಗಿ ಬಾಳಿಕೊಂಡಿದ್ದೀರಿ ಭೀಮಸಿಂಗರೇ! ನಿಮ್ಮ ಮಹಾರಾಷ್ಟ್ರ ಮಿಲಿಟರಿ ಹೋಟಲಲ್ಲಿ ದಿನಕ್ಕೆ ಏನಿಲ್ಲ ಅಂದರೆ ಮುನ್ನೂರು ರೂಪಾಯಿಗಳ ವ್ಯಾಪಾರ ನಡೆಯುತ್ತೆ. ಅಂದರೆ ತಿಂಗಳಿಗೆ ಐದಾರುಸಾವಿರ ರೂಪಾಯಿ ಲಾಭ ದೊರಕುತ್ತೆ. ಇಷ್ಟು ಅಣಿಯಾದ ವ್ಯವಸ್ಥೆಯನ್ನು ಮಾಡಿ ರುಚಿಯಾದ ಅಡಿಗೆಯನ್ನು ತಯಾರಿಸುತ್ತಿದ್ದೀರಿ. ಇಂತಹ ಸುವ್ಯವಸ್ಥ ಯೋಜನೆಯನ್ನು ಸಿದ್ಧಮಾಡಿ ಯಶಸ್ವಿಯಾಗಿ ಪ್ರಯೋಗಿಸಿದ ನಿಮಗೆ, ಸ್ಫೂರ್ತಿಯು ಯಾತರಿಂದ ಬಂತು" ಎಂದು ಕೇಳಿದೆ.

"ಪುಸ್ತಕ ಸ್ವಾಮಿ! ಪುಸ್ತಕ!! ಅಂತಹ ಸ್ಫೂರ್ತಿ ತುಂಬಿದ್ದು" ಅಂದರು ಭೀಮಸಿಂಗರು. ನನ್ನ ತಲೆತಿರುಗಿತು. ಮಿಲಿಟರಿ ಹೋಟಲನ್ನು ಲಾಭದಾಯಕವಾಗಿ ನಡೆಸುವ ವಿಧಾನಗಳನ್ನು ಬೋಧಿಸುವ ಪುಸ್ತಕ ಯಾವುದು ಎಂದು ಯೋಚಿಸಿದೆ. ಅಂತಹ ಪುಸ್ತಕವನ್ನು ನಾನು ಕಂಡಿದ್ದಿಲ್ಲ, ಕೇಳಿದ್ದಿಲ್ಲ.

"ಯಾವ ಪುಸ್ತಕ ಸ್ವಾಮಿ! ಅಂತಹ ಸ್ಫೂರ್ತಿಯನ್ನು ನಿಮಗೆ ದಯಪಾಲಿಸಿದುದು. ಅಷ್ಟು ಪ್ರಭಾವ ಬೀರಿದ ಹೊತ್ತಗೆ ಯಾವುದು" ಎಂದು ಕೇಳಿಕೊಂಡೆ.

"ಮನಸ್ಸಿಗೆ ಶಾಂತಿಯನ್ನು ಸಾಧಿಸಿಕೊಳ್ಳಬೇಕಾದರೆ, ದಿನಾಗಲೂ ಸಂಜೆ ಬೆಳಿಗ್ಗೆ ಅರ್ಧಗಂಟೆ ಹೊತ್ತು ಅರಗಿಳಿಗೆ ಮಾತನ್ನು ಕಲಿಸಬೇಕು. ಆಗ ಸಂಯಮ ತಾಳ್ಮೆ ಉಂಟಾಗುತ್ತದೆ. ಮನಸ್ಸಿಗೆ ಶಾಂತಿ ಪ್ರಾಪ್ತವಾಗುತ್ತದೆ ಎಂದು ಬರೆದಿತ್ತು ಆ ಪುಸ್ತಕದ ಹಾಳೆಯಲ್ಲಿ" ಅಂದ ಭೀಮಸಿಂಗ.

"ಆಮೇಲೆ" ಅಂತ ಪ್ರೇರೇಪಿಸಿದೆ.

ಆಮೇಲೆ ನನಗೆ ಸಿಕ್ಕಿದ ಹಾಳೆಯು ಯಾವ ಪುಸ್ತಕದಿಂದ ಬಂದಿದ್ದಿರಬಹುದು ಎಂದು ನಮ್ಮ ಸ್ವಾಮಿಗಳಲ್ಲಿ ಹೋಗಿ ವಿಚಾರಿಸಿದೆ.

"ವಾತ್ಸ್ಯಾಯನ ಬರೆದ ಕಾಮಸೂತ್ರ" ಅಂತ ಸ್ವಾಮಿಗಳು ಹೇಳಿದರು.

"ಆಮೇಲೆ" ಅಂತ ಕುತೂಹಲದಿಂದ ಕೇಳಿದೆ.

"ಆಮೇಲೆ ಏನುಬಂತು. ಪ್ರಭಾವ ಬೀರಿತು ನನ್ನ ಮೇಲೆ, ನಾನು ಓದದೇ ಇದ್ದ ಪುಸ್ತಕ. ಹೆಸರು ಕೇಳಿಯೇ ಸ್ಫೂರ್ತಿ ತುಂಬಿತು. ಹೇಗೂ ರಾಜಧಾನಿ; ಊರಲ್ಲೆಲ್ಲಾ ಹೊರ ಊರಿನ ವ್ಯಾಪಾರಸ್ಥರು ಒಂಟೊಂಟಿಯಾಗಿ ಓಡಾಡುತ್ತಿದ್ದರು. ಮಹಡಿಮನೆ ಬಾಡಿಗೆಗೆ ತೆಗೆದುಕೊಂಡೆ.

ಮಿಲಿಟರಿ ಹೋಟೆಲನ್ನು ಶುರುಮಾಡಿದೆ. ಮೇಲಿನ ಅಂತಸ್ತಿನಲ್ಲಿ ವಾತ್ಸ್ಯಾಯನವನ್ನೂ ಪ್ರಾರಂಭಿಸಿದೆ" ಎಂದು ಭೀಮಸಿಂಗ ಹೇಳಿದ. ಹೊಸ ಬೀಡಿಯೊಂದನ್ನು ಕಚ್ಚಿದ.

"ಆಮೇಲೆ" ಎಂದು ತಿರುಗಿ ಕೇಳಿದೆ.

ಇಷ್ಟು ಹೇಳಿದರೂ ಅರ್ಥವಾಗದೆ ಇದ್ದ ಬಕ್ರನಿಗೆ "ಆಮೇಲೆ" ಅಂತ ನಾನು ಎಷ್ಟು ಹೇಳಿದರೂ ಮಂಡೆಗೆ ಹತ್ತುಲ್ಲ. ಕಬಾಬ್ ಒಂದನ್ನು ಪುಕ್ಕಟ್ಟು ಉಂಡು ಹೋಗು ಅಂತ ನನ್ನನ್ನು ಅಟ್ಟಿಬಿಟ್ಟ.

೨

ಪೇಟೆ ಚೌಕದ ತುದಿಯಲ್ಲಿ ಅಹಮ್ಮದ್ ಕಾಕಾ ಒಂದು ಚಹಾ ಅಂಗಡಿಯನ್ನು ನಡೆಸುತ್ತಿದ್ದಾನೆ. ಪೇಟೆ ಮನೆಗಳಲ್ಲಿ ಬಿಸಿನೀರು ಕಾಯಿಸುಕ್ಕೆ ತವರದ ಪಾತ್ರೆ ಉಪಯೋಗಿಸುಲ್ಲವೇ ಅಂತಹ ತವರದ ಬಾಯಿಲರ್ ಒಂದನ್ನು ಇರಿಸಿಕೊಂಡಿದ್ದಾನೆ, ಚರಂಡಿ ಪಕ್ಕದಲ್ಲಿ. ಅದರಲ್ಲೇ ಚಹಾವನ್ನು ತಯಾರಿಸುತ್ತಾನೆ. ಬಕೇಟಿನಲ್ಲಿ ಗಾಜಿನ ಲೋಟಾಗಳನ್ನು ತೊಳೆಯುತ್ತಾನೆ. ಮೂರು ನಯಾಪೈಸೆಗೆ "ಘರಂ ಛ್ಹಾ" ಅಂತ ಹೆಸರಿಟ್ಟು ತೊಳೆದ ಲೋಟಾಗಳಲ್ಲಿ ಬಾಯಿಲರ್‌ನಿಂದ ಚಹಾವನ್ನು ಸರಬರಾಜು ಮಾಡುತ್ತಾನೆ. ಈ ರೀತಿ ಬೆಳಿಗ್ಗೆ ಮೂರು ಗಂಟೆ ಕಾಲ, ಸಂಜೆ ರಾತ್ರಿ ಆರು ಗಂಟೆ ಕಾಲ ಚಹಾ ಮಾರುತ್ತಾನೆ. ನೋಡುಕ್ಕೆ ಸಣಕಲು ಆಸಾಮಿ, ಬಾಯಿಲರು ಬಕಿಟು ಅಗ್ಗಿಷ್ಟಕೆ ಇಜ್ಜಲು ಚೀಲ ಇವೆಲ್ಲವನ್ನು ಅಂಗಡಿ ಮುಗಿದ ಮೇಲೆ ತಾನೇ ಹೊತ್ತು ಮಸೀದಿ ಬಳಿಗೆ ಹೋಗಿ ಮೂಲೆಯಲ್ಲಿ ಇರಿಸಿ ಹೊರ ವರಾಂಡದಲ್ಲಿ ಮಲಗುತ್ತಾನೆ. ಎಂಟು ಹತ್ತು ವರ್ಷದಿಂದ ಇದೇ ಅವನ ದಿನಚರಿ.

ಅವನು ಮೊನ್ನೆ ದಿವಸ ನಾನಿರುವ ಬಾಡಿಗೆ ಮನೆಯಾಚೆ ಇರುವ ಮೂರನೆ ಬಂಗಲೆಯನ್ನು ಕೊಂಡುಕೊಂಡ. ಅರವತ್ತು ಸಾವಿರ ರೂಪಾಯಿಗೆ. ಇದರ ಮರ್ಮ ಏನು ಎಂದು ತಿಳಿಯುವ ಆಸೆಯಾಯ್ತು.

ಮಸೀದಿಯ ಹೊರ ವರಾಂಡದಲ್ಲಿ ಅವನನ್ನು ರಾತ್ರಿ ಹನ್ನೆರಡಕ್ಕೆ ಭೇಟಿ ಮಾಡಿದೆ. ಅಹಮದ್ ಕಾಕಾ ಎಷ್ಟು ಚೆನ್ನಾಗಿ ಕನ್ನಡ ಮಾತಡ್ತಾನೆ ಅಂತೀರಿ? ಸರಕಾರದ ಗೆಜಟೆಡ್ ಅಧಿಕಾರಿಗಳಿಗೆ ಕೂಡಾ ಅವನ ತರಹ ಶುದ್ಧ ಕನ್ನಡದಲ್ಲಿ ಮಾತನಾಡುಕ್ಕೆ ಬರುಲ್ಲ. ಬೀಡಿಕೊಟ್ಟು ಭೇಟಿ ಶುರುಮಾಡಿದೆ. "ಅಮ್ಮದ್ ಕಾಕಾ! ಬಂಗಲೆ ಕೊಂಡೆಯಂತಲ್ಲಾ, ಅಷ್ಟು ಹಣಾನಾ ಚಹಾ ಅಂಗಡಿಯಲ್ಲೇ ಸಂಪಾದಿಸಿದೆಯಾ? ಮೂರು-ನಯಾಪೈಸೆ ಚಹಾ ಮಾರಿದರೆ ಏನುತಾನೆ ಲಾಭ ಬರುತ್ತೆ" ಎಂದು ಕೇಳಿದೆ.

"ಚಹಾ ಕುಡಿದಮೇಲೆ ಲೋಟಾನಾ ಇಸುಕೊಂಡು ಬಕೀಟಗೆ ಹಾಕುತ್ತೇನೆ. ಅದರಲ್ಲಿ ಬಿಸಿನೀರಿರುತ್ತೆ. ಬಕೆಟ್ ನೀರು ಬಗ್ಗಡ ಆದಾಗ ಅದನ್ನ ಚಹಾ ಬಾಯಿಲರಿಗೆ ಹಾಕುತ್ತೇನೆ, ಗಂಟೆಗೆ ಎರಡು ಹಸಿರು ಏಲಕ್ಕಿ ಕಾಯಿಗಳನ್ನು ಇನ್ನೊಂದೆರಡು ಮೂಲಿಕೆಗಳನ್ನು ಬಾಯಿಲರಿಗೆ ಹಾಕುತ್ತೇನೆ. ಬಾಯಿಲರಿಂದ ಬಡಿಸಿದ ಚಹಾ ಘರಮಾ ಘಂ! ಅಂತಿರುತ್ತೆ. ಅಹ್ಮದ್ ಚಾ ಅಂತ ಪ್ರಸಿದ್ಧಿಗೆ

ಬಂದಿರೋದು ಈ ಕಾರಣದಿಂದಲೇ! ಒಂದು ಲೋಟಾ ಚಹಾ ಮಾರಿದರೆ ಎರಡು ನಯೇಪೈಸೆ ನಿವ್ವಳ ಲಾಭ ಬರುತ್ತದೆ"- ಎಂದು ಹೇಳಿದ.

ಈ ವ್ಯಾಪಾರದಲ್ಲೇ ಆ ಬಂಗಲೆ ಕೊಳ್ಳುವ ಹಾಗಾಯ್ತು ಅಂತ ಕೇಳಿ ಮೂಗಿನ ಮೇಲೆ ಬೆರಳಿಟ್ಟುಕೊಂಡೆ.

"ಆ ಬಂಗಲೆಯ ಮುಂದೆ ಎಂಟು ಅಂಗಡಿಗಳನ್ನು ಕಟ್ಟಿಸಬಹುದು. ಅದಕ್ಕೇ ಅದನ್ನು ಕೊಂಡುಕೊಂಡೆ. ಆರೇಳು ತಿಂಗಳಲ್ಲಿ ಕಟ್ಟಿಸ್ತೀನಿ" ಎಂದ ಅಮ್ಮದ್ ಕಾಕಾ.

"ಇಷ್ಟೆಲ್ಲಾ ಹಣಾನಾ ಇಷ್ಟು ಚಿಕ್ಕ ವ್ಯಾಪಾರದಿಂದ ಸಂಪಾದಿಸಬಹುದು ಅಂತ ನಿಂಗೆ ಹೇಗೆ ಹೊಳೆಯಿತು" ಎಂದು ಕೇಳಿದೆ.

"ನಾನು ಓದಿದ ಒಂದೇ ಒಂದು ಪುಸ್ತಕದ ಮೊದಲನೇ ಪಾಠದ ಪ್ರಭಾವ" ಅಂತ ಅಹಮದ್ ಕಾಕಾ ಅತಿವಿನಯದಿಂದ ಹೇಳಿದ.

ಅವನು ಹೇಳಿದ್ದನ್ನು ನಂಬಲಿಲ್ಲ ನಾನು. ಬಿಡಿಸಿ, ಬಿಡಿಸಿ ಕೇಳಿದೆ. "ನೀನು ಓದಿದ ಪುಸ್ತಕದ, ನೀನು ಓದಿದ ಆ ಪುಸ್ತಕದ ಒಂದೇ ಒಂದು ಪಾಠವು ನಿನ್ನ ಮೇಲೆ ಪ್ರಭಾವಬೀರಿತು, ನಿನ್ನ ಜೀವನ ಮಾರ್ಗವನ್ನು ಹದಮಾಡಿಕೊಟ್ಟು ಸಾರ್ಥಕ್ಯ ದೊರಕಿಸಿತು ಅಂತಲೇ ನೀನು ಹೇಳಿದ್ದು ಅಮ್ಮದ್ ಕಾಕಾ!" ಅಂತ ಕೇಳಿದೆ.

"ಹ್ಞೂ" ಅಂದ.

"ಆ ಮಹಾ ಪುಸ್ತಕ ಯಾವುದು? ಮೊದಲ ಪಾಠದ ಜ್ಞಾಪಕ ಇದೆಯೇ? ನಿನ್ನ ಗುರುಗಳು ಯಾರು?" ಎಂದು ದೈನ್ಯವಾಗಿ ಸ್ಕಾಲರ್‌ಷಿಪ್ ಶಿಷ್ಯನಂತೆ ಕೇಳಿದೆ.

"ಮೊಯುದ್ದೀನ್ ಕುಟ್ಟಿ ನನ್ನ ತಂದೆ. ಅವನೇ ಗುರು ನನಗೆ. ಅವನು ಹಕೀಮ್ ಕೆಲಸ ಮಾಡ್ತಾ ಇದ್ದ. ಮೂರು ನಾಲ್ಕು ವರ್ಷ ವಯಸ್ಸಾದ್ದಾಗ ಅವನ ಜತೆ ಪಶ್ಚಿಮ ಕರಾವಳಿಯ ಬಳಿ ಹೋಗಿ ಗಿಡ ಮೂಲಿಕೆಗಳನ್ನು ತರುತ್ತಿದ್ದೆ. ಅದರಲ್ಲಿ ಅಮ್ಮ ಅಂಬಲಿಮಾಡಿ ಬಡಿಸ್ತಾ ಇದ್ದಳು. ಹೊಟ್ಟೆ ತಂಪಾಗಿ ತುಂಬಿರುತ್ತಿತ್ತು. ಕುಡಿಯೋವಾಗ ರುಚಿಯಾಗಿರುತ್ತಿತ್ತು. ಹಸಿವೇ ಕಾಣಿಸ್ತಿರಲಿಲ್ಲ ದಿನವೆಲ್ಲಾ.

ನನ್ನ ತಂದೆಯೇ ನನ್ನ ವಿದ್ಯಾಭ್ಯಾಸವನ್ನು ಶುರು ಮಾಡಿದ. ಬಾಲಬೋಧೆಯ ಮೊದಲನೆ ಪಾಠ ಹೇಳಿ ಕೊಟ್ಟ.

ಆಟ ಊಟ ಓಟ ಪಾಠವನ್ನು ಕಲಿಸಿದ. ಹೇಳಿ ಬರೆಯಿಸಿದ. ಎರಡನೆ ಪಾಠ ಶುರುವಾಗುವಾಗ ಹೊತ್ತಿಗೆ ಮನೆಗೆ ಅವ ಬರಲೇ ಇಲ್ಲ. "ಸೈತಾನಿ, ಆ ಹಾಫಿಜಾ ಬೀ ಜತೆಗೆ ಓಡಿಹೋದ" ಅಂತ ಅಮ್ಮಾ ಬೈದು ಅಡಿಗೆಮಡಿಕೇನ ಒಡೆದಳು. ಮೂರು ದಿನ ಆದ ಮೇಲೆ ಅಮ್ಮ ಮನೆಗೆ ಬರಲೇ ಇಲ್ಲ. ಎರಡು ದಿನ ಆದರೂ ಬರಲೇ ಇಲ್ಲ. ಪಕ್ಕದ ಗುಡಿಸಿಲನ ನೂರ್ ಬೀ ಅಜ್ಜಿ ಬಂದು 'ನಿಮ್ಮಮ್ಮ ಕೋಟಾಯಂಗೆ ಓಡಿಹೋದಳು. ನೀನೇನ್ಮಾಡ್ತಿ. ನಮ್ಮನೇಲಿ ಕೆಲ್ಸ ಮಾಡಿಕೊಂಡಿರ್ತೀಯಾ' ಎಂದು ಕೇಳಿದಳು. ಉಹ್ಞೂ ಅಂದೆ. "ಹಾಗಾರೆ ಈ ಮನೆಬಿಟ್ಟು ಹೋಗಬೇಕು. ಇದು ನಮ್ಮ ಮನೆ" ಎಂದಳು.

ಅವತ್ತೇ ಆ ಕಾಸರಗೋಡುಬಿಟ್ಟು ಇಲ್ಲಿಗೆ ಬಂದೆ. ನನ್ನ "ಆಟ" ಮುಗಿದಿತ್ತು. "ಓಟ" ಮಾಡಿದ್ದೆ. "ಊಟ"ಕ್ಕೆ ಏನಾರೂ ಮಾಡಬೇಕು ಅಂತ ಅನಿಸ್ತು. ಅಪ್ಪ ಇಲ್ಲ ಅಮ್ಮ ಇಲ್ಲ. ಎಲ್ಲಾನೂ

ಇನ್ನು ಮೇಲೆ ಅಲ್ಲಾನೇ ಅಂತ ಅಂದುಕೊಂಡು ನನ್ನ ಕಾಲಮೇಲೆ ನಾನು ನಿಂತೆ. ಮೊಹಿಯುದ್ದೀನ್ ಕುಟ್ಟಿ ಕಲಿಸಿದ ಮೂಲಿಕೆಗಳನ್ನು ಭದ್ರಮಾಡಿ ಚಹಾ ಮಾಡಲು ಶುರುಮಾಡಿದೆ. ಅಲ್ಲಾನೇ ಹಿಂದೆ ನಿಂತು ನಡೆಸಿಕೊಟ್ಟ" ಎಂದ.

"ನಿನ್ನಮೇಲೆ ಪ್ರಭಾವ ಬೀರಿದ್ದು, ಆ ಪಾಠ ಅಂದೆಯಲ್ಲಾ, ಅದಲ್ಲಾ ನಿನ್ನ ಯಶಸ್ಸಿಗೆ ಕಾರಣ; ನಿನ್ನ ಬಾಳಿನ ಅನುಭವ" ಎಂದು ಹೇಳಿದೆ.

"ಅಲ್ಲ, ಹಾಗಲ್ಲ ಕಣಯ್ಯಾ! ಮೊಹಿಯುದ್ದೀನ್ ಕುಟ್ಟಿ ಒಂದು ತರಹಾ ನನ್ನ ಬಲ ಅಪ್ಪ. ದಿಟವಾದ ಅಪ್ಪನ್ನ ಕಾಣುವುದಕ್ಕೆ ಅವ ನನಗೆ "ಬಲ"ವನ್ನು ತುಂಬಿದ. ಅವನು ಹೇಳಿಕೊಟ್ಟ ಪಾಠದಿಂದಲೇ ನಾನು ಬಾಳ್ತಾ ಇರೋದು. ಬೆಳೀತಾ ಇರೋದು. ಅದಕ್ಕೇ ಮಸೀದಿ ಬಾಗಿಲಲ್ಲಿ ಮಲಗೋದು ನಾನು. ಆ ಬಂಗಲೆ ಮುಂದೆ ಅಂಗಡಿಗಳನ್ನು ಕಟ್ಟಿಸಿದರೂ 'ನಾನು' ಇರೋ ತನಕ ಇಲ್ಲೇ ಬಂದು ಹಿತ ನಿದ್ರೆ ಮಾಡುತ್ತೇನೆ" ಎಂದು ಹೇಳಿದ. ಹೇಳಿ ಮುಸುಕು ಹೊದ್ದುಗೊಂಡ.

ಆ ವೇಳೆಗೆ ನನಗೂ ನಿದ್ರೆ ಬಂದಿತ್ತು. ಬೆಳಗಿನ ಝಾವ ನಾಲ್ಕರ ಹೊತ್ತಾಗಿರಬಹುದು. ಏನೋ ಸದ್ದಾಯಿತು. ಎಚ್ಚರವಾಯ್ತು. ಮುಸುಕು ತೆಗೆದೆ. ಅಮ್ಮದ್ ಕಾಕಾ ನಮಾಜ್ ಮಾಡ್ತಾ ಇದ್ದ. ಇದೇ ಗದ್ದಲ ಎಂದು ತಿಳಿದ ಮೇಲೆ ತಿರುಗಿ ಮುಸುಕು ಎಳೆದೆ.

ಬೆಳಿಗ್ಗೆ ಐದು ಗಂಟೆಗೆ ಎದ್ದಾಗ ನನ್ನ ಪಕ್ಕದಲ್ಲಿ ಅಮ್ಮದ್ ಕಾಕಾ ಇರಲಿಲ್ಲ. ಅವ ಈ ಹೊತ್ತಿಗೆ ಪೇಟೆ ಚೌಕದಲ್ಲಿ "ಘರಮ್ ಛ್ಹಾ!" ಅಂತ ಕಾಯಕ ಮಾಡುತ್ತಿರಬೇಕು; ಎಂದು ಅರಿವಾಯಿತು.

೩

ಮಂಚೇನಹಳ್ಳಿ ಶಾನುಭೋಗರು ವರ್ಷಕ್ಕೆ ಮುನ್ನೂರು ರೂಪಾಯಿ ಪೋಟಿಗೆ ಪಡೆಯುತ್ತಿದ್ದವರು. ಭೂಮಿ ಕಾಣಿ ಇತ್ತು, ಜೀವನ ಸುಖವಾಗಿತ್ತು. ಅವರು ತಮ್ಮ ಊರಿನಲ್ಲಿ ಪಶು ಚಿಕಿತ್ಸಾ ಕೇಂದ್ರಕ್ಕೆಂದು ಒಂದು ಲಕ್ಷ ರೂಪಾಯಿಗಳನ್ನು ಧರ್ಮ ಮಾಡಿದರು. ಆ ಸುದ್ದಿಯು ಹೆದ್ದಕ್ಷರಗಳಲ್ಲಿ "ರಾಜೀವಪುರ ವಾಣಿ"ಯಲ್ಲಿ ಪ್ರಕಟವಾಯಿತು. ಪಶುಗಳಿಗೆ ಆಸ್ಪತ್ರೆ, ಅವುಗಳ ಆಹಾರ ವಿಹಾರಗಳಿಗೆ, ಅವುಗಳನ್ನು ಸುರಕ್ಷಿತವಾಗಿ ಇರಿಸಿ ಕಾಪಾಡುವ ಹೊಣೆ ಹೊತ್ತ ವೈದ್ಯರುಗಳಿಗೆ ಮನೆಗಳು, ಆ ವೈದ್ಯರುಗಳಿಗೆ, ಆ ವೈದ್ಯರ ಸಂಸಾರಗಳಿಗೆ, ಬೇಕಾದಷ್ಟು ಆಹಾರ ವಿಹಾರ ವಸತಿ ಸೌಕರ್ಯಗಳನ್ನು ಎಲ್ಲ ಕಾಲದಲ್ಲೂ ಒದಗಿಸುವಷ್ಟು ಬಡ್ಡಿಯನ್ನು ದುಡಿಯುವಷ್ಟು ಮೂಲ ಭಂಡವಾಳವನ್ನು ಅವರು ಧರ್ಮ ಮಾಡಿದರು ಎಂದು ತಿಳಿದಾಗ ಅವರ ಭೇಟಿಗೆ ಓಡೋಡಿ ಹೋದೆ.

ಮಂಚೇನಹಳ್ಳಿಗೆ ಹೋದಾಗ ಬೆಳಗಿನ ಝಾಮ ಐದೂವರೆ ಗಂಟೆಯಾಗಿತ್ತು ರೈಲಿನಿಂದ ಹತ್ತಿರದ ಸ್ಟೇಷನ್ನಿನಲ್ಲಿ ಇಳಿದು ಗಂಟುಮೂಟೆ ಹೊತ್ತುಕೊಂಡು ಹಳ್ಳಿಯನ್ನು ಸೇರುವಾಗ ಊರಬಾಗಿಲಲ್ಲಿದ್ದ ಅಶ್ವತ್ಥ ಮರದ ಮೇಲೆ ಹಕ್ಕಿಗಳೆಲ್ಲವೂ ಚಿಲಿಪಿಲಿ ದನಿ ಗೈಯುತ್ತಿದ್ದವು. ಅಶ್ವತ್ಥ ಕಟ್ಟೆಯ ಮೇಲೆ ಹೆಣ್ಣು ಮಗಳೊಬ್ಬಳು ಪ್ರದಕ್ಷಿಣೆ ಹಾಕುತ್ತಿದ್ದಳು. ಶಾನುಭೋಗರ ಮನೆ ಎಲ್ಲಮ್ಮ ಅಂತ ಆಕೆಯನ್ನು ಕೇಳಿದೆ. "ಇದೇ ದಾರೀಲಿ ನೇರನೆ ಹೋಗಿ. ಬಲಭಾಗದಲ್ಲಿ ತ್ರಿಯಂಬಕರ ದೇವಸ್ಥಾನ ಸಿಗುತ್ತೆ. ಅದರ ಎದುರಿಗೇ ಹದಿನೆಂಟು ಅಂಕಣದ ದೊಡ್ಡ ಮನೆ ಇದೆ. 'ಸುವಾಸಿನೀ

ಅಗರ ಬತ್ತಿ ಕಾರ್ಖಾನೆ' ಅಂತ ತೂಗು ಹಲಗೆ ಹಾಕಿದೆ. ಆ ಮನೆಯ ಬಲಗಡೆಯ ಗಲ್ಲಿಯಲ್ಲಿ ಹತ್ತು ಹೆಜ್ಜೆ ಹಾಕಿದರೆ ಶಾನುಭೋಗರ ನಿವಾಸ ಕಾಣಿಸುತ್ತೆ. ಬಾಗಿಲಲ್ಲೇ ಎರಡು ನಾಯಿಗಳು ಬೊಗಳುತ್ತಾ ಬಾಲ ಆಡಿಸುತ್ತ ಸ್ವಾಗತಿಸುತ್ತೆ. ಬೊಗಳುವ ನಾಯಿಗಳು ಕಚ್ಚುಲ್ಲ. ಆ ನಾಯಿಗಳಿಗೂ ಅದು ಗೊತ್ತು. ಧೈರ್ಯವಾಗಿ ಮನೆ ಅಂಗಳಕ್ಕೆ ಹೋಗಿ. ಶ್ಯಾನುಭೋಗರು ಸಿಕ್ಕುತ್ತಾರೆ." ಅಂತ ಆಕಿ ಬಡಬಡಿಸುತ್ತಾ ಪ್ರದಕ್ಷಿಣೆಯನ್ನು ಮುಂದುವರಿಸಿದಳು.

ಆಕೆ ಹೇಳಿದಂತೆ ನಡೆದು ಹೋದೆ. ಶಾನುಭೋಗರು ಅದರಿಂದ ತಮ್ಮನೆಯೊಳಕ್ಕೆ ಕರೆದುಕೊಂಡು ಹೋದರು. ವಿಶ್ವಾಸದಿಂದ ಆತಿಥ್ಯ ನಡೆಸಿದರು. ನಂತರ ಮಾತುಕಥೆಗಳನ್ನು ಶುರು ಮಾಡಿದೆವು.

"ಸ್ವಾಮೀ! ತಾವು ಒಂದು ಲಕ್ಷರೂಪಾಯಿಗಳನ್ನು ಪಶು ಚಿಕಿತ್ಸಾ ಕೇಂದ್ರಕ್ಕೆ ಧರ್ಮಾರ್ಥ ಕೊಟ್ಟಿರುವಿರಂತೆ. ಇಷ್ಟು ಹಣ ನಿಮಗೆ ಹೇಗೆ ಬಂತು?" ಎಂದು ಕೇಳಿಯೇ ಬಿಟ್ಟೆ. ನನ್ನ ಬಡತನ ನನ್ನ ಬಾಯಿಯನ್ನು ತುಂಬ ತೆರೆಸಿತ್ತು, ತೆರೆದ ಬಾಯಿಗೆ ನಾಚಿಕೆ ಇರುತ್ತ್ಯೇ? ಚಾಚಿದ ಅಂಗೈಯ್ಯಿಗೆ ಅವಮಾನದ ಹುಣ್ಣು ತಾಕದೇ ಇರುತ್ತ್ಯೇ?

ಆ ಹೊತ್ತಿಗೆ ರವಿವರ್ಮನ ಚಿತ್ರದ ತರಹ ಕಾಣುತ್ತಾ ಇದ್ದ ಒಬ್ಬಾಕೆ, ಎತ್ತಿದ ಹಾಗೂ ಮೊಳಗೈ ಬಗ್ಗಿಸಿದ್ದ ಬಲಗೈಯಲ್ಲಿ ತಟ್ಟೆಯನ್ನು ಹಿಡಿದುಕೊಂಡು ಮನೆಯೊಳಕ್ಕೆ ಬಂದಳು. ದೇವರ ಮನೆಗೆ ಹಜಾರವನ್ನು ದಾಟಿ ಹೋಗುವ ತನಕ ಆಕೆಯನ್ನೇ ಎವೆಯಿಕ್ಕದೆ ನೋಡುತ್ತಿದ್ದ ಶಾನುಭೋಗರು ಆ ನಂತರ ಉತ್ತರ ನುಡಿದರು. "ಈಗ ಹೋದಳಲ್ಲಾ! ಆಕೆಯ ಪುಣ್ಯದಿಂದಲೇ ಎಲ್ಲವೂ ಈ ಮನೆಯಲ್ಲಿ ಆಗಿದೆ" ಎಂದು ಹೇಳಿದರು. ಆಕಿ ಯಾರು ಅಂತ! ಅಶ್ವತ್ಥ ಪ್ರದಕ್ಷಿಣೆ ಹಾಕುತ್ತಿದ್ದಾಕೆ.

ಅಶ್ವತ್ಥ ಪ್ರದಕ್ಷಿಣೆ ಹಾಕುವ ಆಕೆಯಿಂದ ಮನೆಯಾತ ಕೋಟ್ಯಾಧೀಶ್ವರನಾಗುತ್ತಾನೆ ಎನ್ನುವುದು ನನಗೆ ಸರಿಕಾಣಲಿಲ್ಲ. "ಇದು ಹೇಗೆ" ಎಂದು ಅನುಮಾನ ನನ್ನ ಮುಖವನ್ನು ತುಂಬಿರಬೇಕು. ಅದೆನ್ನು ನೋಡಿಯೇ ಶಾನುಭೋಗರು "ಬನ್ನಿ ನಮ್ಮ ಅಗರಬತ್ತಿ ಕಾರ್ಖಾನೆಯನ್ನು ನೋಡಿ ಬರೋಣ" ಎಂದರು.

ಮುಂದಿದ್ದ ದೊಡ್ಡ ವಠಾರದ ಮನೆಯನ್ನು ಇಬ್ಬರೂ ಹೊಕ್ಕೆವು.

* * * * *

ನೂರಾರು ಮಂದಿ ಹೆಣ್ಣುಮಕ್ಕಳು ತೆಳು ಕಡ್ಡಿಗಳಿಗೆ ಗಂಧದ ಅಂಟುಮಣ್ಣು ಹುಡಿಯನ್ನು ಲೇಪಿಸುತ್ತಿದ್ದರು. ಹತ್ತಾರು ಮಂದಿ ಹೆಣ್ಣು ಮಕ್ಕಳು ಗಂಧದ ಕಡ್ಡಿಗಳನ್ನು ಒಟ್ಟುಗೂಡಿಸಿ ಕಟ್ಟುತ್ತಿದ್ದರು. ಇಷ್ಟೆಲ್ಲಾ ಜನರು ಇಲ್ಲಿ ದುಡಿಯಬಹುದು ಎಂದು ನನಗೆ ಅನ್ನಿಸಿರಲಿಲ್ಲ.

"ಎಷ್ಟು ಜನ ಹೆಣ್ಣು ಮಕ್ಕಳು ಕೆಲಸಮಾಡುತ್ತಾರೆ" ಎಂದು ಕೇಳಿದೆ.

"ಆರುನೂರು" ಅಂತ ಅಂದರು ಶಾನುಭೋಗರು.

"ಎಲ್ಲಾ ನಿಮ್ಮ ಜಾತಿಯವರೇನೋ" ಎಂದೆ.

"ಹೌದು!" ಅಂದರು—"ಎಲ್ಲರೂ ನಮ್ಮ ಹೆಣ್ಣು ಜಾತಿಯವರೇ" ಅಂದರು ಶಾನುಭೋಗರು.

“ಇಷ್ಟೆಲ್ಲಾ ಲಕ್ಷಾಂತರ ಕಡ್ಡಿಗಳನ್ನು ತಯಾರಿಸುತ್ತೀರಲ್ಲಾ. ಎಲ್ಲವನ್ನು ಮಾರುಕ್ಕೆ ಸಾಧ್ಯವೇ?” ಎಂದು ಕೇಳಿದೆ.

“ಸುವಾಸಿನಿ ಅಗರಬತ್ತಿಗಳಿಗೆ ಲೋಕದಲ್ಲೆಲ್ಲಿಂದಲೂ ಬರುವ ಬೇಡಿಕೆಗಳಲ್ಲಿ ನೂರರಲ್ಲಿ ಎಂಭತ್ತರಷ್ಟು ಸರಬರಾಜಿಸಲು ಸಾಧ್ಯವಿಲ್ಲ ನಮಗೆ” ಎಂದರು ಶಾನುಭೋಗರು.

“ನಿಮ್ಮ ಉದ್ಯಮದ ಈ ಸೌಭಾಗ್ಯಕ್ಕೆ ಯಾವುದು ಮೂಲಭೂತ ಕಾರಣ? ಯಾವುದು ಪ್ರೇರೇಪಿಸಿದ್ದು” ಎಂದು ಕೇಳಿದೆ.

“ಪುಸ್ತಕ! ನಾನು ಓದದೆ ಇದ್ದರೂ, ಕೇಳಿದ ಒಂದು ಪುಸ್ತಕದ ಪದ್ಯ” ಅಂದರು, ಶ್ಯಾನುಭೋಗರು.

“ಉದ್ಗ್ರಂಥ ಅದು ಯಾವುದೋ” ಎಂದು ಕೇಳಿದೆ, “ಪದ್ಯದ ಸಾಲಾವುದು?” ಎಂದೆ.

ಗ್ರಂಥದ ಹೆಸರು ಬಾಲಬೋಧೆ. ಮೊದಲನೆ ಪುಸ್ತಕ.

“ಧರಣಿ ಮಂಡಲ ಮಧ್ಯದೊಳಗೆ
ಮೆರೆಯುತಿಹ ಕರ್ಣಾಟ ದೇಶದಿ
ಇರುವ ಕಾಳಿಂಗನೆಂಬ ಗೊಲ್ಲನ
ಪರಿಯ ನಾನೆಂತು ಪೇಳ್ವೆನು”

ಎಂದು ಶ್ಯಾನುಭೋಗರು ಹೇಳಿದರು.

“ಆ ಪದ್ಯಕ್ಕೂ ನಿಮ್ಮ ಬಾಳಿನ ಹೊಂಬೆಳಕಿಗೂ ಏನು ಸಂಬಂಧ?” ಎಂದೆ.

“ಕಾಳಿಂಗೇಗೌಡರ ಮಗಳನ್ನೇ ನಾನು ಮದುವೆಯಾದ್ದು. ಆಕೀನೇ ಅಗರಬತ್ತಿಗೆ ಹಚ್ಚುವ ಸುವಾಸಿನಿ ಗಂಧವನ್ನು ಅರೆದು ಕೊಟ್ಟಿದ್ದು. ಅರೆದು ಕೊಟ್ಟು ಅಗರಬತ್ತಿ ಕಾರ್ಖಾನೆ ಸ್ಥಾಪಿಸಿ ಎಂದು ಆಕೆಯೇ ಸಲಹೆ ಮಾಡಿದ್ದು. ಏಳೋ ಎಂಟೋ ವರ್ಷಗಳಾಗಿರಬಹುದು. ಆರೇಳು ಲಕ್ಷ ಸಂಪಾದನೆಯಾಗಿದೆ. ಮಕ್ಕಳಿಲ್ಲದ ಒಂದು ಬೆಳಗಿನ ಝಾಮ ಅಶ್ವತ್ಥ ಪ್ರದಕ್ಷಿಣೆಗೆ ಹೋಗುವ ಮೊದಲು ಆಕೆ ಹೇಳಿದಳು, ‘ಪಶು ಜೀವನ ನಮ್ಮದು. ಮಾತನಾಡೋ ಪಶುಗಳು ನಾವು. ನಾವು ಗಳಿಸಿದ್ದನ್ನೆಲ್ಲಾ ಮೂಕ ಪ್ರಾಣಿಗಳಿಗೆ ಧಾರೆ ಎರೆಯೋಣ’ ಎಂದಳು. ಅದಕ್ಕೇ ಈ ಪಶು ಕೇಂದ್ರದ ಸ್ಥಾಪನೆಗೆ ಮನಸ್ಸು ಮಾಡಿದೆ” ಎಂದರು, ಶ್ಯಾನುಭೋಗರು.

ಅಶ್ವತ್ಥ ಪ್ರದಕ್ಷಿಣೆ ಹಾಕಿ ಮಕ್ಕಳನ್ನು ಬೇಡುತ್ತಾ ಕೂಡಿ ಗಳಿಸಿಟ್ಟಿದ್ದುದನ್ನೆಲ್ಲಾ ಶಾಶ್ವತದ ಪಶುಗಳಿಗೆ ಪಶುಪತಿಯ ಹೆಸರಿಟ್ಟು ಬಿಡುಗೈಯ್ಯಿಂದ ಕೊಟ್ಟ ಕಾಳಿಂಗ ರಾಯನ ಮಗಳು ಆಕಿಯ ಗಂಡ ಶ್ಯಾನುಭೋಗನ ಸೋಜಿಗ ಜೀವನವನ್ನೇ ನೆನೆಸುತ್ತಾ ಬಂದೆ.



# ಬುಧರೇಖಾ

ರಂಗನಗೌಡನ ಮಗ ಸಿದ್ದನಗೌಡ ಹೇಳಿ ಕಳಿಸಿದರು ಅಂದಾಗ ಗುಂಡೂ ರಾಮನಿಗೆ ಬಲು ಖುಷಿಯಾಯಿತು. ಆ ಊರಿನಲ್ಲೇ ಏಕೆ, ಆ ಪ್ರಾಂತ್ಯದಲ್ಲೇ ಸಿದ್ದನಗೌಡ ಅಂದರೆ ಹೆಸರುವಾಸಿ. ದೇವಸ್ಥಾನದ ಶಂಕುಸ್ಥಾಪನೆಯಾಗಲಿ, ದರೋಡೆಯೆ ಆಗಲಿ, ಸತ್ಕಾರಕೂಟ ಆಗಲಿ, ಸತ್ತವರಿಗೆ ತಿಥಿ ಮಾಡಲಿ ಯಾವದಕ್ಕೂ ಸಿದ್ದನಗೌಡ ಮುಂದೆ ನಿಲ್ಲಬೇಕು, ಅಥವಾ ಹಿಂದೆ ತೆರೆಮರೆಯಲ್ಲಿ ನಿಂತು ಮಾಡಿಸಬೇಕು. ಹತ್ತೂ ಉಪಾಯಗಳನ್ನು ಹೂಡಿ, ಹತ್ತೂ ಮನೆಗಳನ್ನು ದೋಚಿ ದೊಡ್ಡಗೌಡ ಆಗಿದ್ದ. ಕಡೆಗೆ ಇವೆಲ್ಲಾ ಜುಜುಬಿ, ಲೂಟಿ ಮಾಡಿದರೆ ಸರಕಾರದ ಬೊಕ್ಕಸಕ್ಕೆ ಕನ್ನ ಗತ್ರಿ ಹಾಕಬೇಕು, ಆಗ ಕಿಸೆ ಸಾಕಷ್ಟು ಸುಲಭವಾಗಿ ತುಂಬುತ್ತೆ ಎಂಬುದನ್ನು ಅರಿತಿದ್ದ. ಹಾಗಾಗಿ ಸಚಿವರುಗಳು, ಪುಢಾರಿಗಳು, ಸರಕಾರದ ಹಿರಿಯ ಅಧಿಕಾರಿಗಳು ಎಲ್ಲರನ್ನೂ ಒಂದಲ್ಲ ಒಂದು ತರಹ ಬುಟ್ಟಿಗೆ ಹಾಕಿಕೊಂಡಿದ್ದ. ಸಿದ್ದನಗೌಡ ಹೇಳಿದ ಅಂದರೆ ಅಧಿಕಾರಿಗಳು ಬೇಗ ಮಾಡಿಕೊಡುತ್ತಿದ್ದರು. ಹಾಗೆ ಮಾಡಿದರೆ ಮಂತ್ರಿಗಳಿಂದ ಶಹಭಾಸ್‌ಗಿರಿ ದೊರಕುತ್ತೆ ಅಂತ ಅಧಿಕಾರಿಗಳಿಗೂ ಗೊತ್ತು. ಹಾಗೂ ಅವರ ಕೈಯಿನ ತೀಟೆ ಅಥವಾ ಮೈಯಿನ ತೀಟೆ ತೀರುತ್ತಲೂ ಇತ್ತು.

ಗುಂಡೂರಾಮ ಅದೇ ಊರಲ್ಲಿ ಹಾಯ್‌ಸ್ಕೂಲ್ ದಾಟಲಾರದೆ, ಕಡೆಗೆ ಸ್ವಂತ ಚಾಣಾಕ್ಷತನ ದಿಂದ, ಹಸ್ತ ಸಾಮುದ್ರಿಕನಾಗಿದ್ದ. ಮಾರುಕಟ್ಟೆಯ ಮುಂದುಗಡೆ ಹೋಟಲ ಬಳಿ ಅಂಗಳದಲ್ಲಿ, ಪಾರ್ಕಿನ ಬೆಂಚಿನಮೇಲೆ, ತನ್ನ ಕಸುಬನ್ನು ಮುಂದುವರೆಸುತ್ತ ಕಾಲ ತಳ್ಳುತ್ತಿದ್ದ. ಇಷ್ಟು ಕೊಡಬೇಕು, ಕೈ ನೋಡಿ ಫಲ ಹೇಳಿದರೆ ಅಂತ ಕೇಳುವ ಸ್ಥಿತಿಗೆ ಬಂದಿತ್ತಿಲ್ಲವಾದ್ದರಿಂದ ಕೊಟ್ಟಷ್ಟರಲ್ಲೇ ಹೊಟ್ಟೆ ಹೊರೆದುಕೊಳ್ಳುತ್ತಿದ್ದ. ಇಂತಹವನಿಗೆ ಸಿದ್ದನ ಗೌಡರು ಹೇಳಿ ಕಳಿಸಿದರು ಅಂದರೆ ಶುಕ್ರಮಾರ್ಕನ ದೆಸೆ ಬಡಿದ ಹಾಗೆಯೇ ಅಲ್ಲವೇ? ಸಿದ್ದನಗೌಡನ ಅಂಗೈ ರೇಖೆಗಳನ್ನು ಓದಿ ಫಲ ಹೇಳಿದ ಗುಂಡೂ ರಾಮಯ್ಯ ಅಂದರೆ, ಮಂತ್ರಿಗಳು, ಮಂತ್ರಿಗಳಾಗಬಯಸುವವರು, ಮಂತ್ರಿ ಪಟ್ಟದಿಂದ ಕೆಳಕ್ಕೆ ಬೀಳುವ ಭಯವಿರುವವರು, ಅಂದರೆ ಸುಮಾರು ಎಲ್ಲಾ ರಾಜಕಾರಣಿಗಳೂ, ಗುಂಡೂರಾಮಯ್ಯನಿಗೆ ಹೇಳಿ ಕಳಿಸಲೇಬೇಕು.

ಅಂದಮೇಲೆ ಗುಂಡೂರಾಮಯ್ಯನ ಭವಿಷ್ಯ ಉಜ್ವಲ. ತಾನೇ ಒಂದು ಮಂದಿರವನ್ನು ಕಟ್ಟಿಸಿ ರೇಖಾಮಂದಿರ ಅಂತ ಹೆಸರಿಟ್ಟು, ಅಲ್ಲಿ ತನ್ನ ಕಸಬನ್ನು ಭವ್ಯವಾದ ರೀತಿಯಲ್ಲಿ ನಡೆಸಬಹುದು, ಹೆಣ್ಣು ಗಂಡು ನೌಕರರನ್ನಿಟ್ಟುಕೊಂಡು, ಕಕ್ಷಿಗಾರರ ಭವಿಷ್ಯವನ್ನು ಟೈಪ್ ಮಾಡಿಸಿಕೊಡಬಹುದು. ೧೫ ನಿಮಿಷದ ಭೇಟಿಗೆ ೧೫ ರೂಪಾಯಿಗಳು, ಅರ್ಧ ತಾಸಿನ ಭೇಟಿಗೆ ೩೦ ರೂಪಾಯಿಗಳು,

ಹೀಗೆ ವೈದ್ಯರುಗಳು ಮತ್ತು ವಾರಾಂಗನೆಯರ ತರಹ ಬಿಲ್ ಏರಿಸಬಹುದು. ಹೀಗೆಲ್ಲಾ ಗುಂಡೂರಾಮಯ್ಯ ಕನಸು ಕಂಡ.

ಗುಂಡೂರಾಮ ಅವರಿವರನ್ನು ಕಂಡು ಸಿದ್ದನಗೌಡನ ಅಂದಿನ ತಾಪತ್ರಯಗಳು ಏನಿರಬಹುದು ಎಂದು ವಿಚಾರಿಸಿಕೊಂಡ. ಚುನಾವಣೆಗಳು ಎಂಟು ತಿಂಗಳುಗಳಿದ್ದರೂ ಸಿದ್ದನಗೌಡ ಮುಂಜಾಗ್ರತೆ ವಹಿಸಿ ಈಗಿನಿಂದಲೇ ಕಸರತ್ತು ಮಾಡಬಹುದು ಎನಿಸಿತು. ಹಾಗೂ ಸಿದ್ಧನಗೌಡರ ಹೆಸರ ಜತೆಗೆ ಅಶ್ವತ್ಥಕಟ್ಟೆಯ ನಾಗೂಬಾಯಿಯ ಹೆಸರು ಅಲ್ಲಲ್ಲೇ ಕೇಳಿ ಬಂದಿತ್ತು. ಇಬ್ಬರೂ ಒಬ್ಬರಿಗೊಬ್ಬರು ಸಮಯ ಸಿಕ್ಕಾಗ "ಕೋಂಗ್ರೇಸ್" ಮಾಡಬಹುದು ಎಂದೂ ವದಂತಿ ಇತ್ತು. ನಾಗೂಬಾಯಿಯ ಬಾಯಿಗೆ ಯಾರು ಸಿಕ್ಕಿದರೂ ಮಾರುಕಟ್ಟೆಯ ಮಧ್ಯದಲ್ಲಿ ಅವರ ಮಾನ ಹೋಗುತ್ತೆ ಅನ್ನುವುದು ಎಲ್ಲರಿಗೂ ತಿಳಿದಿತ್ತು. ದೊಡ್ಡ ಹರುಕು ಬಾಯಿ ಆಕೇದು. ಸಿದ್ದನ ಗೌಡನಿಗೆ ಆಕೆ ಮನೇನ ಹೇಗಾದರೂ ಮಾಡಿ ಕೊಂಡುಕೊಳ್ಳಬೇಕು ಎಂದು ಆಸೆ, ಏಕೆಂದರೆ ಆಕೆ ಮನೆ ಮಾರುಕಟ್ಟೆಯ ಮಧ್ಯ ಪ್ರದೇಶದಲ್ಲೇ ಇತ್ತು. ಅದೊಂದು ಕೊಂಡುಕೊಂಡರೆ ಆಜೂಬಾಬು ಇದ್ದ ತನ್ನ ಅಂಗಡಿಗಳನ್ನು ಬಡಾಯಿಸಿಕೊಳ್ಳಬಹುದು ಅಂತ ಸಿದ್ದನಗೌಡನ ಆಸೆ. ಆದರೆ ನಾಗೂಬಾಯಿ ಏನು ಮಾಡಿದರೂ ಮನೇನ ಮಾರುಕ್ಕೆ ಸಿದ್ಧವಿರಲಿಲ್ಲ.

ಇಷ್ಟೆಲ್ಲಾ ಸುದ್ದಿಗಳನ್ನು ಮಾರುಕಟ್ಟೆಯ ಬಳಿಗೆ ಹೋದ ಐದು ಹತ್ತು ನಿಮಿಷಗಳಲ್ಲಿ ಸಂಗ್ರಹಿಸಿದ, ಗುಂಡೂರಾಮ. ನಂತರ ಸಿದ್ದನ ಗೌಡರ ಮನೆಗೆ ಹೋದ.

ಮನೆಯ ಹೊರ ಹಜಾರದಲ್ಲೇ ಸಿದ್ದನಗೌಡರ ಒಡ್ಡೋಲಗ. ಊರ ಪಟಿಂಗರೆಲ್ಲ ಅಲ್ಲಿ ಎಂದಿನಂತೆ ನೆರೆದಿದ್ದರು. ವರ್ಗಬೇಡುವ ಶಾಲಾ ಮಾಸ್ತರುಗಳು, ವರ್ಗತಪ್ಪಿಸಿಕೊಳ್ಳುವ ರೆವಿನ್ಯೂ ಇನ್‌ಸ್ಪೆಕ್ಟರುಗಳು, ಆದ ಶಿಕ್ಷೆಯನ್ನು ತಪ್ಪಿಸಿ ಎಂದು ಕೇಳುವ ಮಿಡ್‌ವೈಫರು, ಆಗಬಹುದಾದ ಶಿಕ್ಷೆ ತಪ್ಪಿಸಿ ಎಂದು ಬೇಡುವ ಪೋಲೀಸ್ ಕಾನ್‌ಸ್ಟೇಬಲ್ಲುಗಳು, ಎಲ್ಲರೂ ನೆರೆದಿದ್ದಾರೆ. ಯಥಾಪ್ರಕಾರ. ಆ ಸಂತೆಯಲ್ಲಿ ಗುಂಡೂರಾಮ ಕಾಣಿಸಿಕೊಂಡಾಗ, ಸಿದ್ದನ ಗೌಡರು "ಬಾಪ್ಪ ಇತ್ತ ಬಾ" ಅಂತ ಕರೆದರು.

ಎಲ್ಲರೆದುರಿಗೂ ಕೈ ತೋರಿಸಿ ಭವಿಷ್ಯ ಹೇಳು ಅಂದರೆ ತೊಂಬಾವಂಚಕ್ಕೆ ಇಟ್ಟುಕೊಳ್ಳುತ್ತಲ್ಲ! ತೋಚಿದ್ದನ್ನು ಹೇಳುವ ಹಾಗೆಯೂ ಇಲ್ಲ! ಹತ್ತೂ ಜನರ ಎದುರಿಗೆ ತಾನು ಹೇಳಿದ್ದು ಬಹಿರಂಗ ವಾಗುತ್ತಲ್ಲ! ಎಂದು ಗುಂಡೂರಾಮನಿಗೆ ಅಳುಕಿತು.

ಹೆದರಿಕೊಂಡೇ ಸಿದ್ದನ ಗೌಡರು ಕೂತ ಬಳಿಗೆ ಹೋದ. ಎದುರಿನಲ್ಲೇ ಮುದುಡಿಕೊಂಡು "ಹೇಳಿ ಕಳಿಸಿದರಂತೆ, ಅದಕ್ಕೇ ಬಂದೆ. ಯಾವ ಸೇವೆ ಹೇಳಿದರೂ ಮಾಡುವುದಕ್ಕೆ ಸಿದ್ಧ" ಎಂದು ಮೆಲ್ಲಗೆ ಹೇಳಿದ.

ಭವಿಷ್ಯ ಹೇಗಾದರೂ ಆಗಲಿ, ಸಿದ್ದನ ಗೌಡರಂತಹವರು, ತನ್ನನ್ನೂ ಕರೆಕಳಿಸಿ ಕೈ ತೋರಿಸುತ್ತಾರೆ ಎಂಬ ಕೀರ್ತಿಯಾದರೂ ಬರುತ್ತೆ, ಕಂಡ ಹತ್ತೂ ಜನ ಈ ಮಾತನ್ನು ಜಾಹಿರಾತು ಮಾಡಿಯೇ ಮಾಡುತ್ತಾರೆ ಅಂತ ನಂಬಿಕೆಯೂ ಬಂದಿತ್ತು.

ಸಿದ್ದನ ಗೌಡರ ಎದುರಿಗಿದ್ದವರನ್ನೆಲ್ಲಾ ಒಮ್ಮೆ ನೋಡಿದರು. ಹೊಸ ಮಂತ್ರಿಗಳು ಮೊದಲ ಭಾಷಣ ಮಾಡುವ ಮೊದಲು ಸರಿಪಡಿಸಿಕೊಂಡಹಾಗೆ, ಏನನ್ನೋ ಕಾಮ್ಯವಾದುದನ್ನು ನೋಡಿದ

ಉತ್ಸಾಹಿ ಗಂಡು ಕತ್ತೆಯಂತೆ, ಒಮ್ಮೆ ಹುಸಿ ಕೆಮ್ಮಿದರು; ಎಲ್ಲರ ಗಮನವೂ ಸಿದ್ದನಗೌಡರಲ್ಲಿ ಕೇಂದ್ರೀಕೃತವಾಯಿತು.

"ನೋಡ್ರಲಾ! ಯಾವುದೋ ಒಂದು ವ್ಯವಹಾರಕ್ಕೆ ಕೈ ಹಾಕ್ತೀನಿ. ಅದು ಹಣ್ಣೋ ಕಾಯೋ ಹೆಂಗಾಗ್ತದೋ, ಶಿವ ಬಲ್ಲ. ಹಂಗೂ ಇವ ಕೈ ನೋಡಿ ಮುಂದಾಗೋದನ್ನು ಹೇಳ್ತಾನೆ ಅಂತ ಮಂದಿ ಅಂದಿದ್ದರು. ಕೇಳೋಣ ಅಂತ ಕರೆಸ್ದೆ" ಎಂದು ಸಭೆಯಲ್ಲಿದ್ದವರಿಗೆ ಹೇಳಿ ನಂತರ ಗುಂಡೂ ರಾಮನ ಕಡೆ ತಿರುಗಿದರು.

"ಎಲ್ಲಿ ನಿನ್ನ ಬಲಗೈ ಇತ್ತ ತೋರಿಸು" ಎಂದರು.

"ಅಲ್ಲಾ! ನಿಮ್ಮ ಹಸ್ತ ಓದುಕ್ಕೆ ನಾನು ಬಂದಿರೋದು. ನನ್ನ ಕೈ ನಿಮಗ್ಯಾಕೆ ತೋರಿಸಬೇಕು" ಎಂದು ತೊದಲುತ್ತ ಗುಂಡೂರಾಮ ಕೇಳಿದ.

"ಎಲಾ ಮಗನೇ! ಕೈ ನೋಡಿ ಹೇಳೋನಿಗೆ ಬಾಯ್‌ಗೆಲುವು ಇರಬೇಕು. ವಾಕ್ ಸಿದ್ದಿ ಇರಬೇಕು. ಅವನು ಹೇಳಿದ್ದು ನಡೀಬೇಕು. ಹಂಗಿರಬೇಕಾದರೆ ಅವನ ಕೈನಲ್ಲಿ ರೇಖೆ ಪಸಂದಿರಬೇಕು. ಅದಿಲ್ಲದೆ ಇದ್ದ ಮುರುವನಿಗೆ ಕೈ ತೋರಿಸಿ ಅವಲಕ್ಷಣ ಅಂತ ಅನ್ನಿಸಿಕೊಳ್ಳಲು ನಾನೇನು ಮಂಕನಾ! ಎಲ್ಲಿ ಇತ್ತ ಕೈ ತೋರು!"

ಎಂದು ಹೇಳುತ್ತಾ ಗುಂಡೂರಾಮನ ಬಲಗೈಯನ್ನು ಸೆಳೆದುಕೊಂಡರು. ಅದರಲ್ಲಿದ್ದ ರೇಖೆಗಳನ್ನು ನೋಡುತ್ತಾ ವ್ಯಾಖ್ಯಾನವನ್ನು ಮಾಡಹತ್ತಿದರು.

"ಪರವಾಗಿಲ್ಲ, ಇವನ ಅಂಗೈ. ಬುದ್ಧಿರೇಖಾ ಅನ್ನೋದು ಮಧ್ಯದಲ್ಲೇ ತುಂಡು ಬಿದ್ದಿದೆ. ನನ್ನ ಕೈಲಿ ಇದ್ದ ಹಾಗೇನೆ. ಹೃದಯ ರೇಖಾ ಮಾಸಲು ಒಂದು ಸೆರಗಿಗೆ ಗಂಟು ಬಿದ್ದು ನರಳೋ ಜಾಯಮಾನ ಇಲ್ಲ. ಮಕ್ಕಳು ಮರಿ ರೇಖೆಗಳು ಸುಮಾರಿವೆ. ಒಂದು ಅನಾಥಾಲಯವು ತುಂಬಬಹುದು.

"ಎಲಲಾ! ಬುಧರೇಖಾ ಬಲು ಪಸಂದಾಗಿದೆ. ವಕ್ರವಾಗಿದ್ದರೂ ಭಾರಿ ಐತೆ." ಎಂದು ಉದ್ವೇಗದಲ್ಲಿ ತಮ್ಮ ಸಹಜ ಭಾಷೆಗೆ ತಿರುಗಿದರು. ನಂತರ ಮೌನ ಆದರು.

"ಬಾ ಒಳಕ್ಕೆ ಹೋಗೋಣ" ಅಂದರು, ಸಿದ್ದನಗೌಡರು.

ಗುಂಡೂರಾಮನು ಸ್ವಲ್ಪ ಠೀವಿಯಿಂದಲೇ ಸಿದ್ದನಗೌಡರನ್ನು ಮನೆಯೊಳಕ್ಕೆ ಹಿಂಬಾಲಿಸಿದ. ತಮ್ಮ ಸ್ವಂತ ಕೊಠಡಿಯಲ್ಲಿ ಗುಂಡೂಗಾಮನಿಗೆ ತಮ್ಮ ಕೈಯನ್ನು ಸಿದ್ದನಗೌಡರು ತೋರಿಸಿದರು. "ಹೀಗೊಂದು ಕಾರ್ಯಹಿಡಿದೀನಿ. ಹೆಂಗಾಗ್ತದೆ ಹೇಳು" ಅಂದರು.

ಗುಂಡೂರಾಮ ಅವರ ಕೈಯನ್ನು ನೋಡಿದ. ಬಹಳ ಯೋಚಿಸಿದ. ನಂತರ ನುಡಿದ. "ಗೌಡರೇ! ತಮಗೂ ಹಸ್ತ ಸಾಮುದ್ರಿಕದ ಪರಿಚಯ ತಕ್ಕಮಟ್ಟಿಗಿದೆ. ತಾವೂ ನೋಡಿಕೊಂಡಿಯೇ ಇರುತ್ತೀರಿ. ತಮಗೆ ಅನುಮಾನ ಬಂದಮೇಲೆ ನನಗೆ ಹೇಳಿ ಕಳಿಸಿದಿರಿ. ನಿಮ್ಮ ಅನುಮಾನವೇ ನನಗೂ ಅನುಮಾನ. ಈ ವ್ಯವಹಾರದಲ್ಲಿ ನಿಮಗೆ ಅತಿ ನಷ್ಟ ಆಗುತ್ತೆ, ಆದರೆ ಫಲದೊರೆಯುವುದಿಲ್ಲ. ಧನರೇಖೆಗೆ ದ್ವೀಪ ಆತುಕೊಂಡಿದೆ. ಮುಂದಕ್ಕೆ ಸಹಾಯರೇಖೆ ಇಲ್ಲ. ನನ್ನ ಕೇಳಿದರೆ ಈಗ ಕೈಗೊಂಡ ವ್ಯವಹಾರವನ್ನು ಅಲ್ಲಿಗೇ ಬಿಟ್ಟುಬಿಡೋದು ವಾಸಿ. ಹಣವಾದರೂ ಉಳಿಯುತ್ತೆ. ಏನಿಲ್ಲ ಅಂದರೂ ಸಾವಿರಾರು ರೂಪಾಯಿ ಉಳಿಯುತ್ತೆ" ಎಂದ.

"ಹಂಗೆ ಅಂತೀಯಾ?" ಎಂದರು ಸಿದ್ದನ ಗೌಡರು.

ಬುಧ ರೇಖಾಬಲವಿದ್ದ ಗುಂಡೂರಾಮ ಈಗ ಹೆದರಿಯಾನೆ? ಅದೂ ಆ ರೇಖಾಬಲ ಸಿದ್ದನಗೌಡರಿಗೆ ತಿಳಿದಿದ್ದಾಗ.

ಧೈರ್ಯವಾಗಿ ಕಡ್ಡಿ ತುಂಡುಮಾಡಿದ ಹಾಗೆ ಹೇಳಿದ. "ಈ ವ್ಯವಹಾರದಲ್ಲಿ ನಿಮಗೆ ಫಲ ದೊರೆಯುವುದಿಲ್ಲ. ಹಣದ ವೆಚ್ಚ, ಹೆಸರು ಕೆಡುತ್ತೆ" ಎಂದ.

ಹಜಾರದ ತನಕ ಆದರದಿಂದ ಗುಂಡೂರಾಮಯ್ಯನನ್ನು ಸಿದ್ದನಗೌಡರು ಬೀಳ್ಕೊಟ್ಟರು, ಬರಿಗೈಯಲಿ.

ಅವತ್ತು ಸಂಜೆ ಗುಂಡಾರಾಮ ಮಾರುಕಟ್ಟೆಯ ಮಧ್ಯದಲ್ಲಿದ್ದ ನಾಗೂ ಬಾಯಿಯ ಮನೆಗೆ ಹೋದ. "ಇವತ್ತು ಮಧ್ಯಾಹ್ನ ಸಿದ್ದನಗೌಡರು ಹೇಳಿ ಕಳಿಸಿದ್ದರು. ಹೀಗೆ ಹೀಗೆ ಭವಿಷ್ಯ ಹೇಳಿ ಬಂದೆ. ಇನ್ನು ಮೇಲೆ ಬಹುಶಃ ಅವ ಈ ಮನೆಯನ್ನು ಕೊಳ್ಳುವ ಯೋಚನೆ ಬಿಟ್ಟಾನು. ನೀವು ಧೈರ್ಯವಾಗಿರಬಹುದು. ಅವ ಬಲಶಾಲಿ ಪುಢಾರಿ ಅಂತ ಹೆದರಬೇಕಾಗಿಲ್ಲ ಮನೆಗೆ ಖರ್ಚು ಹಾಕಿ ಸುಣ್ಣ ಬಣ್ಣ ಮಾಡಿಸಿ" ಎಂದು ಹೇಳಿದ.

ನಾಗೂಬಾಯಿಗೆ ಮನಸ್ಸು ಹಗೂರಾಯಿತು. "ನಿಮ್ಮ ಸಹಾಯಕ್ಕೆ ತುಂಬಾ ವಂದನೆಗಳು. ಆಶೀರ್ವಾದ ಮಾಡಿ ಇದನ್ನು ಕೊಡ್ತೀನಿ. ಬೇಡ ಅನ್ನದೆ ತೊಗೊಪ್ಪ" ಎಂದು ೨೫ ರೂಪಾಯಿಗಳನ್ನು ಕೊಟ್ಟು ಕಳಿಸಿದಳು.

ಗುಂಡೂರಾಮನ ಕೈಯಿನ ಬುಧರೇಖೆಗೆ ಧನರೇಖೆ ಕೊಂಡಿಹಾಕಿಕೊಂಡಿತು.

■

# ಹೀಗೆ ಅವಮಾನ ಮಾಡಬಹುದೇ

ರಾಮ್ ಹೇಳಿದಾಗ "ಒಂದು ಸರ್ತಿ ನೋಡಿಕೊಂಡು ಬರೋಣ, ಅದಕ್ಕೇನು ಮುಟ್ಟಿಸಬೇಕು" ಅಂತ ರಾಜೀವಪುರದ ಷಹರಿನ ಕಡೆಗೆ ಹೋದೆ. ಅವನು ಕೊಟ್ಟ ವಿಳಾಸವನ್ನು ಹುಡುಕಿ ಬಾಗಿಲಲ್ಲಿದ್ದ ಗಂಟೆಯನ್ನು ಬಾರಿಸಿದೆ. ಬಾಗಿಲು ತೆಗೆದು "ಏನು ಬೇಕು" ಎಂದು ಮೂವತ್ತರ ಪ್ರಾಯದ ಕಿಸಿನಗುವಿನ ಸುಂದರಿಯೊಬ್ಬಳು ಕೇಳಿದಳು. "ಈ ವಿಳಾಸದಲ್ಲಿ ಆಲ್ಸೇಷಿಯನ್ ನಾಯಿಮರಿಗಳು ಮಾರಾಟಕ್ಕಿವೆ ಎಂದು ರಾಮ್ ಹೇಳಿದರು. ವಿಚಾರಿಸಿ ನೋಡಿಕೊಂಡು ಹೋಗೋಣ ಅಂತ ಬಂದೆ", ಎಂದು ಹೇಳಿ ನನ್ನ ವಿಸಿಟಿಂಗ್ ಕಾರ್ಡನ್ನು ಕೊಟ್ಟೆ. "ಒಳಗೆ ಬನ್ನಿ, ಮಿ. ಕುಮಾರ್" ಅಂತ ಆಕೆ ಸ್ವಾಗತಿಸಿದಾಗ ವೀಣೆ ನುಡಿಯಿತ್ತಿದೆಯೋ ಗಂಧರ್ವಸ್ತ್ರೀ ಗಾನ ಮಾಡುತ್ತಿದ್ದಾಳೋ, ಅಥವಾ ಈ ಸುರಸುಂದರಿ ಮಾತನಾಡುತ್ತಿದ್ದಾಳೋ ಎಂದು ಅನುಮಾನ ಬಂತು. ಒಳಗೆ ಹೋಗಿ ಆಕೆ ತೋರಿಸಿದ ಸೋಫಾದ ಮೇಲೆ ಕುಳಿತೆ.

"ಎರಡು ನಿಮಿಷ ಕೂತುಕೊಳ್ಳಿ. ಮರಿಗಳನ್ನು ಕರತರ್ತೀನಿ" ಅಂತ ಹೇಳಿ ಜಿಂಕೆ ಕುಣಿದ ಹಾಗೆ ಕುಣಿಯುತ್ತ ಆಕೆ ಮನೆಯೊಳಕ್ಕೆ ಹೋದಳು. ಒಂದು ನಿಮಿಷ ಪೂರ್ತಿ ಅವಳ ಪಾದರಕ್ಷೆಗಳ ಟಕಟಕ ಕೇಳುತ್ತಿತ್ತು. ಒಂದೆರಡು ನಿಮಿಷಗಳಾದ ಮೇಲೆ, ಮೂರು ಮರಿಗಳನ್ನೂ ಎತ್ತಿ ಮುದ್ದಾಡುತ್ತಾ ಆಕೆ ಬೈಠಕ್ ಖಾನೆಗೆ ಬಂದಳು. ಹಿಂದೆಯೇ ತಾಯಿ ಆಲ್ಸೇಷಿಯನ್ ಕೂಡ ಬಂತು. ಸುಮಾರು ಬೆಳೆದ ಆಲ್ಸೇಷಿಯನ್ ತಾಯ್ತನದ ಚೆಲುವು ಬೇರೆ, ಸಂಸಾರವಂದಿಗರ ಮುತ್ತೈದೆತನದ ಲಕ್ಷಣ ಬೇರೆ. ಸುರಸುಂದರಿಯು ಕಾಲಬಳಿ ಹಿಂಗಾಲುಗಳ ಮೇಲೆ ಕುಳಿತು, ಆಕೆಯ ತೊಡೆಯ ಮೇಲಿದ್ದ ಮರಿಗಳನ್ನು ನೆಕ್ಕಲು ಪ್ರಾರಂಭಿಸಿತು.

"ಒಂದು ತಿಂಗಳಾಗಿದೆ ಇದಕ್ಕೆ, ಫಿ ಫಿ ಆರು ಮರಿಗಳನ್ನು ಹಾಕಿದಳು. ಮೂರನ್ನು ಆಗಲೇ ಮಾರಿಯಾಯಿತು. ಉಳಿದ ಮೂರು ಹೆಣ್ಣು. ಹೆಚ್ಚು ದುಡ್ಡು ಕೊಟ್ಟವರಿಗೆ ಮಾರುಕ್ಕೆ ಇಷ್ಟವಿಲ್ಲ. ಒಳ್ಳೇ ಮನೆ ನೋಡಿ ಸೇರಿಸಬೇಕು ಎಂದು ಆಸೆ. ಎತ್ತಿಕೊಂಡು ನೋಡಿ, ಬಲು ಬೇಗ ಒಗ್ಗಿ ಹೋಗುತ್ತೆ!!" ಎಂದು ಹೇಳುತ್ತಾ ಒಂದು ಕರಿ ಮರಿಯನ್ನು ನನ್ನ ಕೈಗೆ ಕೊಟ್ಟಳು. ಅಂಗೈಗೆ ಎಷ್ಟು ಹಿತವಾಗಿತ್ತು ಅಂತ ನಾಯಿಮರಿ! ಕಣ್ಣುಗಳು ನನ್ನನ್ನೇ ಆದರದಿಂದ ನೋಡಿದುವು. ಈ ದೃಶ್ಯವನ್ನು ನೋಡಿ ಸುರಸುಂದರಿಯು ಮುಗುಳ್ನಗೆ ನಕ್ಕಾಗ, ನಾನೂ ತಲೆಯೆತ್ತಿ ಆಕೆಯನ್ನು ನೋಡಿದೆ. ಎಷ್ಟು ಚೆನ್ನಾಗಿ ಕಂಡಿತು ಅಂತ. ಅವಳಿ ಜವಳಿ ನಾಯಿಮರಿಗಳು ಆಕೆಯ ಎದೆಗೆ ಅಪ್ಪಿಕೊಂಡಿದ್ದು!!

"ಎಷ್ಟು ಜನ ಮಕ್ಕಳು ನಿಮಗೆ" ಎಂದು ಕೇಳಿದಳು, ಒಮ್ಮೆಲೆ.

"ಮದುವೆಯಾಗಿ ಇನ್ನೂ ಮೂರು ತಿಂಗಳು. ಕೆಲಸಕ್ಕೆ ನಾನು ಹೋದಾಗ, ಹೆಂಡತಿ ಜತೆಗೆ ಒಂದು ನಾಯಿ ಇರಲಿ ಎಂದು ಕೊಳ್ಳುಕ್ಕೆ ಬಂದೆ" ಎಂದೆ.

"ನನ್ನ ಗಂಡ ಮಿ. ಟಾಲ್ಬಟ್ ಅವರು ಕೂಡ, ಮದುವೆಯಾದ ತರುಣದಲ್ಲಿ ಈ ಫಿಫಿಯನ್ನು ಬಹುಮಾನವಾಗಿ ಕೊಟ್ಟರು. ಒಳ್ಳೇ ಗೋತ್ರದ ನಾಯಿ, ಹೆಸರಾಂತ ಮನೆತನದ್ದು, ಸ್ವಲ್ಪವಾದರೂ ಹಲ್ಕತನವಿಲ್ಲ. ಫಿಫಿ ಮನೆಗೆ ಬಂದಾಗಿನಿಂದ ಎಲ್ಲವೂ ಸುಖಮಯವಾಯ್ತು" ಎಂದು ಮಿಸಸ್ ಟಾಲ್ಬಟ್ ವಿವರಿಸಿದಳು.

"ಈ ಮೂರರಲ್ಲಿ ಯಾರ ಮರಿ ಬೇಕು? ನಿಮ್ಮ ತೊಡೆಯ ಮೇಲಿರುವುದೇ ದೊಡ್ಡದು" ಎಂದಳು.

"ಹಾಗಾದರೆ ಇದನ್ನೇ ತೆಗೆದುಕೊಳ್ಳುವ ಆಸೆ. ಆದರೆ ಇದರ ಬೆಲೆ ನನ್ನ ಕಿಸೆಗೆ ಸರಿತೂಗುತ್ತೋ ಇಲ್ಲವೋ" ಎಂದು ರಾಗ ಎಳೆದೆ.

"ನಿಮ್ಮನ್ನು ಕಂಡರೆ ಅದಕ್ಕೂ ಪ್ರೀತಿ ಇದ್ದ ಹಾಗಿದೆ ಅಂದಮೇಲೆ ಬೆಲೆಯ ವಿಷಯ ಅಷ್ಟು ಮುಖ್ಯವಲ್ಲ. ಒಂದು ಐವತ್ತು ಕೊಡಿ. ಸಾಕು. ಆದರೆ ಯಾರಿಗೂ ಹೇಳಬೇಡಿ. ಮಿಕ್ಕ ಮರಿಗಳನ್ನು ತಲಾ ನೂರು ರೂಪಾಯಿಗಳಿಗೆ ಮಾರಿದ್ದೇನೆ," ಎಂದಳು.

ಸುರಸುಂದರಿಯ ಹತ್ತಿರ ಚೌಕಾಶಿ ಮಾಡುವುದು ಸುಸಂಸ್ಕೃತರ ಲಕ್ಷಣವಲ್ಲ. ಅದರಲ್ಲೂ ಪ್ರೇಮಿಸಿದ ಜೀವಿಯನ್ನು ತೆಗೆದುಕೊಳ್ಳುವಾಗ ಸುತರಾಂ ಚೆನ್ನಲ್ಲ. ಆದುದರಿಂದ ಕೊಟ್ಟು ಕೊಂಡುಕೊಳ್ಳಬೇಕು. ಅಥವಾ ಮೆಲ್ಲಗೆ ತಪ್ಪಿಸಿಕೊಂಡು ಹೋಗಬೇಕು. ಎರಡನೆಯ ಮಾರ್ಗವೇ ಸುರಕ್ಷಿತ ಎಂದು ಯೋಚಿಸಿ, "ನಾಳೆ ಬೆಳಿಗ್ಗೆ ಹಣ ತಂದು ಮರಿಯನ್ನು ತೆಗೆದುಕೊಂಡು ಹೋಗುತ್ತೇನೆ" ಎಂದು ಸಬೂಬು ಹೇಳಿ, ಮರಿಯನ್ನು ಅವಳ ಕೈಲಿಟ್ಟು, ಕೈ ಕುಲುಕಿ, ಹಿಂತಿರುಗಿದೆ.

ಮನೆಗೆ ಬಂದು ಹೆಂಡತಿಗೆ ವರದಿ ಒಪ್ಪಿಸಿದೆ. "ನಾಯಿಮರಿಗೆ ಯಾರಾದರೂ ಐವತ್ತು ರೂಪಾಯಿ ಕೊಡ್ತಾರೇನ್ರಿ? ಪೀಡೆ ಕಳೀತು. ನಾಳೆ ಹೋಗುವುದೇ ಬೇಡ, ಯಾವುದಾದರೂ ಒಂದು ಬೆಕ್ಕಿನ ಮರೀನ ಸಾಕೋಣ" ಎಂದು ಹೆಂಡತಿ ಹೇಳಿದಳು. "ಹೌದು ಕಣೆ, ಅಪ್ಪಪ್ಪಾ ಅಂದರೆ ಒಂದು ವರ್ಷ! ಅಷ್ಟರಲ್ಲೇ ನಮ್ಮ ಮರೀನೆ ಜತೆಗೆ ಬರುತ್ತಲ್ಲಾ" ಎಂದೆ.

ಐವತ್ತು ರೂಪಾಯಿ ಮಿಗಿಸಿಕೊಂಡಿದ್ದರಿಂದಲೋ ಏನೋ ಆ ಸಂಜೆ ಬಲು ಹಿತವಾಗಿ, ಅತಿ ಸುಖದಿಂದ ಕಳೆದುಹೋಯಿತು.

ಮಾರನೆ ದಿನ ಬೆಳಿಗ್ಗೆ ಫ್ಯಾಕ್ಟರಿಗೆ ಹೋದೆ. ಹಿಂತಿರುಗುವಾಗ ಸಂಜೆ ಐದು ಗಂಟೆ. ಬಾಗಿಲು ತೆಗೆದಾಗ ಹೆಂಡತಿಯ ಹಿಂದೆ ನಾಯಿ ಮರಿಯೊಂದು ಜಿಗಿದಾಡುತ್ತಿತ್ತು. "ಏನೇ ಇದು, ನಿನ್ನೆ ಬೇಡ ಅಂತ ತೀರ್ಮಾನಿಸಿ, ಬೆಳಗಾಗುತ್ತಲೂ ನಾನು ಅತ್ತ ಹೋದರೆ, ಇತ್ತ ನೀನು ಮಿಸೆಸ್ ಟಾಲ್ಬೆಟ್ ಮನೆಗೆ ಹೋಗಿ ಕೊಂಡುಕೊಂಡು ತಂದಿದ್ದೀಯಲ್ಲಾ!" ಎಂದು ಸ್ವಲ್ಪ ಮುನಿಸಿಕೊಂಡೇ ಹೇಳಿದೆ. ಅವಳೂ ಮುನಿಸಿಕೊಂಡೆ ಉತ್ತರ ಹೇಳಿದಳು. "ನನಗೇನು ತೆವಲು! ಅವಳ ಮನೆಗೆ ಹೋಗುಕ್ಕೆ? ಇಷ್ಟಕ್ಕೂ ಅವಳ ಮನೆ ಎಲ್ಲಿ ಎಂದು ನನಗೇನು ಗೊತ್ತು? ಹತ್ತು ಗಂಟೆ ಹೊತ್ತಿಗೆ ಟಿಫಿನ್ ಕ್ಯಾರಿಯರಿನಲ್ಲಿ ನಿಮ್ಮ ಊಟವನ್ನು ಆಳಿನ ಕೈಲಿ ಕೊಟ್ಟೆ. ಅಷ್ಟು ಹೊತ್ತಿಗೆ ಈ ನಾಯಿಮರೀನ ಹಿಡಿದುಕೊಂಡು ಟ್ಯಾಕ್ಸಿಯೊಂದರಲ್ಲಿ ಮಿಸಸ್ ಟಾಲ್ಬಟ್ ಬಂದಿಳಿದಳು.

"ನಿಮ್ಮ ಯಜಮಾನ್ರು ನೆನ್ನೆ ಬಂದು ಈ ನಾಯಿ ಮರೀನ ನೋಡಿ ಮೆಚ್ಚಿದ್ದರು. ಇವತ್ತು ಬರ್ತೀನಿ ಹಣ ತೆಗೆದುಕೊಂಡು ಎಂದು ಹೇಳಿದ್ದರು. ಆದರೆ ಫಿಫಿ ಎದುರಿನಲ್ಲಿರುವಾಗ ಮರಿಯನ್ನು

ನಿಮ್ಮ ಯಜಮಾನರು ತೆಗೆದುಕೊಂಡು ಹೋಗುವುದು ಕಷ್ಟಸಾಧ್ಯ. ಆದ್ದರಿಂದ ನಾನೇ ಛಿಛಿ ಕಣ್ಣು ಮರೆಸಿ, ಮರಿಯನ್ನು ತಂದೆ. ನಿಮ್ಮ ಯಜಮಾನ್ರು ಬಂದ ಮೇಲೆ ಹಣ ಕಳಿಸಿಕೊಡಿ" ಎಂದಳು. "ನಮ್ಮ ಮನೆ ವಿಳಾಸ ಅವಳಿಗೆ ಹೇಗೆ ಗೊತ್ತಾಯಿತೇ" ಎಂದೆ.

"ನಿಮ್ಮ ವಿಸಿಟಿಂಗ್ ಕಾರ್ಡ್ ಕೊಟ್ಟು ಬಂದಿದ್ದರಂತೆ. ಪುನುಗುಹಚ್ಚಿ ಕೊಟ್ಟಿದ್ದರೇನೋ" ಎಂದಳು, ಮುನಿಸಿಕೊಂಡೇ. "ಹೌದಲ್ಲೇ ಮರೆತಿದ್ದೆ" ಎಂದೆ.

"ಅಲ್ಲಾ ಅಂದ್ರೆ ನಾಯಿ ಮರೀ ನೋಡಿ ಐವತ್ತು ರೂಪಾಯಿಗೆ ಒಪ್ಪಿದರೋ ಅಥವಾ ಮಿಸೆಸ್ ಟಾಲ್ಬಟ್ ಅವರನ್ನು ನೋಡಿ ಒಪ್ಪಿದರೋ" ಎಂದು ಕುಹಕಿದಳು.

"ಅಯ್ಯೋ ಮಹರಾಯಿತಿ! ಆಕೆ ಈ ಲೋಕದಲ್ಲಿ ಇದಾಳೆ ಅಂತಲೇ ನಿನ್ನೆ ಬೆಳಗಿನ ತನಕ ಗೊತ್ತಿತ್ತಿಲ್ಲ. ರಾಮ್ ಹೇಳಿದ, ರಜೆ ಇದೆ ಎಂದು ಹೋದೆ. ಅಷ್ಟಕ್ಕೇ ಈ ಹಗರಣವಾದರೆ? ನಾನೇನ್ಮಾಡಲಿ. ಆದಿದ್ದಾಯಿತು. ಈಗ ಹೋಗಿ ಆಕೆಗೆ ಐವತ್ತು ರೂಪಾಯಿ ಕೊಟ್ಟು ಬಂದುಬಿಡಬೇಕು" ಎಂದೆ.

"ನನಗೆ ಗೊತ್ತು. ಹೀಗೆ ನೆಪ ಮಾಡಿಕೊಂಡು ತಿರುಗಿ ಹೋಗ್ತೀರಿ ಅಂತ. ಅದಕ್ಕೇ ನಾನೇ ಐವತ್ತು ರೂಪಾಯಿಗಳನ್ನು ಆಕೆಗೆ ಕೊಟ್ಟು ರಸೀದಿ ಬರೆಸಿ ಇಟ್ಟುಕೊಂಡಿದೀನಿ. ನೋಡಿ" ಎಂದು ಸೊಂಟದಿಂದ ಲಕ್ಕೋಟೆಯೊಂದನ್ನು ತೆಗೆದು ರಸೀದಿಯನ್ನು ತೋರಿಸಿದಳು.

ಮೂರು ದಿನಗಳಾದ ಮೇಲೆ, ನಾಯಿಮರಿಯ ಚೆಲ್ಲಾಟದಿಂದ ತೋರಿ ಬಂದಿದ್ದ ಮನಸ್ತಾಪ ಹರಿದುಹೋಯ್ತು. ಐದು ದಿನಗಳಾದ ಮೇಲೆ ಶಕುಂತಲಾ ಎಂದು ನಾಯಿಮರಿಗೆ ನಾಮಕರಣ ಮಾಡಿದೆವು. ವನದಲ್ಲಿ ಬೆಳೆದ ಹುಡುಗಿಯಂತೆ ಶಕುಂತಲೆಯೂ ನಮ್ಮ ಮನೆಯಲ್ಲಿ ದೃಢವಾಗಿ ಹೊರವಾಗಿ ಬೆಳೆದಳು. ಒಂದು ವರ್ಷದ ಪ್ರಾಯದ ಹೊತ್ತಿಗೆ ಹಸುವಿನ ಕರುವಿನಂತೆ ಕಾಣತೊಡಗಿದಳು.

ನಮ್ಮ ಮನೆಯಲ್ಲಿ ನಾಯಿಮರಿ ಇರೋದನ್ನು ಕಂಡು ಪಕ್ಕದ ಮನೆಯ ಪಾತಕ್ಕನ ಮಗಳು ನನಗೂ ಒಂದು ನಾಯಿಮರಿ ಬೇಕು ಎಂದು ಗಲಾಟೆ ಎಬ್ಬಿಸಿದಳು. ಪಾತಕ್ಕನ ಗಂಡ ಸಾಹುಕಾರರು. ಹಣದ ಸುಖ ದುಃಖವನ್ನು ಅರಿತವರು. ಆದ್ದರಿಂದಲೇ ಅವರು ಒಂದು ಕಂತ್ರಿ ನಾಯಿಮರಿಯನ್ನು ಎಲ್ಲಿಂದಲೋ ಲಪಟಾಯಿಸಿಕೊಂಡು ಬಂದು ಮಗಳಿಗೆ ಕೊಟರು. ಪಿಲ್ಲುಮರಿ ಅದು, ಅಸಹ್ಯದ ಬಣ್ಣ. ಹೇಳಿಕೊಳ್ಳುಕ್ಕೆ ಗೋತ್ರ ಇಲ್ಲ. ಪ್ರವರ ಮೊದಲೇ ಇಲ್ಲ. ವಕ್ರಗಾಲಿನಲ್ಲಿ ಓಡುತ್ತಿತ್ತು. ಈ ದ್ರಾಭೆ ಮರೀಗೆ ಪಕ್ಕದ ಮನೆ ಪಾತಕ್ಕ ಹೆಸರೇನಿಟ್ಟರು ಗೊತ್ತೆ? ದುಷ್ಯಂತ ಅಂತ.

ಹೀಗೆ ಅವಮಾನ ಮಾಡಬಹುದೇ ಪಕ್ಕದ ಮನೆಯವರು?

ಅಷ್ಟಕ್ಕೇ ನಿಂತಿತು ಅಂತೀರಾ? ಶಕುಂತಲೆ ತುಂಬಿಕೊಂಡಿದ್ದಳು ಅಂದೆನಲ್ಲಾ, ಇನ್ನೂ ತುಂಬಿಕೊಳ್ಳುತ್ತಲೇ ಇದ್ದಳು. ಎರಡು ವರ್ಷದ ತನಕ. ಅನಂತರ ನಮ್ಮ ಸಂಸಾರದ ಪುರೋಭಿವೃದ್ಧಿಯ ಹಗರಣದಲ್ಲಿ ನಾವಿದ್ದಾಗ, ಅವಸರದಲ್ಲಿ ಅಜ್ಜಿ ಮೈ ನೆರೆತಳು ಅಂದ ಹಾಗೆ, ಶಕುಂತಲೆಯೇ ಮೊದಲು ಮರಿ ಹಾಕಿಬಿಡೋದೇ? ಆ ಹಾಳು ಮರಿಗಳು ದರಿದ್ರ ದುಷ್ಯಂತನ ತರಹಾ ಇದ್ದು ಬಿಡೋದೇ?

ಹೀಗೆ ಅವಮಾನ ಮಾಡಬಹುದೇ ಶಕುಂತಲ! 

# ರೂಂ ಬಾಡಿಗೆಗಿದೆ

"ಸುಮ್ಮನೆ ಇದೀರಲ್ಲಾ ಅಂದ್ರೆ! ಕುಮುದನಿಗೆ ಬಿ.ಇಡೀನೂ ಆಗುತ್ತೆ, ೨೨ ವರ್ಷ ಮುಗಿಯುತ್ತೆ. ಸರಿಯಾದ ಗಂಡು ಹುಡುಕಬೇಡ್ವೇ ಅಂದ್ರೆ, ಆ ವಯಸ್ಸಿಗೆ ನನಗೆ ೩ ಮಕ್ಕಳಾಗಿತ್ತಲ್ಲ ಅಂದ್ರೆ, ನಿರ್ಜೀವ ಪುಸ್ತಕಗಳನ್ನು ಕಂಕುಳಲ್ಲಿ ಇಟ್ಟುಕೊಂಡು ಅವಳು ಹೋದಾಗ, ನನ್ನ ಕರುಳು ಹಿಂಡಿದ ಹಾಗಾಗುತ್ತೆ ಅಂದ್ರೆ!" ಎಂದು ಮಹಾಲಕ್ಷ್ಮಮ್ಮನವರು, ಭೀಮನ ಅಮಾವಾಸ್ಯೆ ದಿನ ಗಂಡನಿಗೆ ಎಣ್ಣೆನೀರು ಹಾಕುತ್ತಾ ಹೇಳಿದರು.

"ಮದುವೆ ಮಹದೇವ ಶಾಸ್ತ್ರಿಗಳನ್ನು ಇವತ್ತು ಮಧ್ಯಾಹ್ನ ನೋಡಿಕೊಂಡು ಬರ್ತೀನಿ ಕಣೆ, ಇನ್ನು ಮೇಲೆ ಅದೇ ಕೆಲಸ. ಹಪ್ಪಳ ಒತ್ತಿಡುಕ್ಕೆ ಶುರುಮಾಡು ನೀನು. ಮದುವೆ ಆಗಲೇಬೇಕು ಅಂತ ನಾನು ಪ್ರಯತ್ನ ಪಟ್ಟರೆ, ಆಗಿಯೇಬಿಡುತ್ತೆ. ನನ್ನ ಗ್ರಹಗತಿ ಹಾಗಿದೆ ಈಗ" ಎಂದರು ರಾಯರು.

"ಇದೇನ್ರೀ ಹೀಗಂತೀರಿ! ನಿಮ್ಮ ಗ್ರಹಗತಿ ಚೆನ್ನಾಗಿದ್ದರೆ ನಿಮಗೆ ಕಂಕಣ ಕೂಡಿಬರಬಹುದು. ನಿಮಗಲ್ಲವಲ್ಲ ಈಗ ಮದುವೆ?" ಎಂದರು ಮಹಾಲಕ್ಷ್ಮಮ್ಮ.

"ಸರಿ! ನನಗ್ಯಾರು ಹೆಣ್ಣು ಕೊಡ್ತಾರೆಯೇ, ಅದೂ ನೀನು ಎದುರಿಗೇ ಇರುವಾಗ. ನನ್ನ ಗ್ರಹಗತಿ ಚೆನ್ನಾಗಿದ್ದರೆ ಮನೇಲಿ ಮಂಗಳ ಕಾರ್ಯ ಆಗಲೇಬೇಕು, ಅದಕ್ಕೇ ಅಂದೆ" ಎಂದರು ರಾಯರು.

ಕಡುಬು ತಿಂದು ಮಧ್ಯಾಹ್ನ ಮಲಗಿದ ರಾಯರು ಸಂಜೆ ಐದಕ್ಕೇ ಎದ್ದಿದ್ದು. ರಾಹುಕಾಲ ಈಗ ಎಂದು ಆರು ಗಂಟೆ ತನಕ ಕಾಫಿ ಕುಡಿಯುತ್ತ ಮನೆಯಲ್ಲೇ ಇದ್ದು ಆಮೇಲೆ ಮದುವೆ ಶಾಸ್ತ್ರಿಗಳ ಭೇಟಿಗೆ ಹೊರಟರು.

* * * * *

ಸಂಜೆ ಹಿಂತಿರುಗಿದಾಗ ರಾತ್ರಿ ಎಂಟಾಗಿತ್ತು. ಊಟಕ್ಕೆ ಕುಳಿತಾಗ "ಹಪ್ಪಳದ ಹಿಟ್ಟು ಕಲಸಿಟ್ಟೆಯೇನೇ" ಎಂದು ಮಹಾಲಕ್ಷಮ್ಮನವರನ್ನು ಕೇಳಿದರು. "ಏನೂ ಅಂದರೆ, ಅಷ್ಟು ಬೇಗ ಗಂಡನ್ನು ಗೊತ್ತುಮಾಡಿ ಕೊಂಡೇ ಬಂದುಬಿಟ್ಟಿರಾ?" ಎಂದು ತುಸು ಆಶ್ಚರ್ಯದಿಂದ ಕೇಳಿದರು, ಮಹಾಲಕ್ಷಮ್ಮನವರು.

"ಗೊತ್ತಾದಹಾಗೇ ಕಣೆ! ಮಹದೇವಶಾಸ್ತ್ರಿಗಳನ್ನು ಕಂಡಿದ್ದೆ. ಮಾತನಾಡಿದೆ. ಆತ ಹೇಳಿದ. "ನಿಮಗೇನು ರಾಯರೇ! ದಿವನಾದ ಮನೆ, ಅಳಿಯನ್ನ ಬರಮಾಡಿಕೊಳ್ಳೋದು ಏನು ಕಷ್ಟ!

ಕುಮುದ ಚೂಟಿ ಹುಡುಗಿ, ಲಕ್ಷಣವಾಗಿದ್ದಾಳೆ. ಹೊರವಾಗಿ ಬೆಳೆದಿದ್ದಾಳೆ. ಸಿನಿಮಾ ಪೋಸ್ಟರಿನ ತರಹ ಉಬ್ಬಿ ಕಾಣುತ್ತಾಳೆ. ನಿಮಗೇನು ಯೋಚನೆ" ಎಂದು ಅವರು ಹೇಳಿದರು. ಕುಮುದನ ಜಾತಕನೂ ನೋಡಿದರು. ಆಮೇಲೆ ಸ್ವಲ್ಪ ಹೊತ್ತು ಯೋಚಿಸಿ, "ನಾನು ಹೇಳಿದ ಹಾಗೆ ಮಾಡಿ, ರಾಯರೇ, ಆಮೇಲೆ ನೋಡಿ, ಅಳಿಯ ನಿಮ್ಮನೆ ಬಾಗಿಲಿಗೆ ಬಂದು ಬಾಗಿಲು ತಟ್ಟಿ ಬೇಡಿಕೋತಾನೆ. ಕೂತಿದ್ದ ಕಡೆ ಆತನನ್ನು ಗಿಟ್ಟಿಸಬಹುದು ನೀವು. ನಿಮಗ್ಯಾಕ್ರಿ ಯೋಚನೆ" ಎಂದರು.

ಅವರು ಹೇಳಿದ ಸಲಹೇನ ನಾಳೇನ ಕಾರ್ಯಗತ ಮಾಡುತ್ತೇನೆ. ಆ ಮೇಲೆ ನೀನು ಹಪ್ಪಳ ಸಿದ್ಧಮಾಡುವ ಹೊತ್ತಿಗೆ ಚಪ್ಪರ ಹಾಕಿಸುವ ಯೋಚನೆ ಮಾಡಬೇಕಾಗುತ್ತೆ" ಎಂದರು ರಾಯರು.

ಮಹಾಲಕ್ಷಮ್ಮನವರಿಗೆ ಒಂದೂ ಅರ್ಥವಾಗಿಲಲ್ಲ. ಮನೆ ನೋಡಿ ಅಳಿಯ ಬಂದು ಬಲೆಗೆ ಬೀಳುತ್ತಾನೆ ಅಂದರೆ ಯಾರು ನಂಬುವುದಕ್ಕಾಗುತ್ತೆ? ಆದರೂ ಯಜಮಾನರ ಮನಸ್ಸು ಮಗಳ ಕಡೆ ತಿರುಗಿದೆ. ಹುಚ್ಚು ಹುಚ್ಚಾಗಿ ಗಂಡಸು ಆಡಿದರೂ ಕಡೆಗೆ ಮಗಳ ಮದುವೆ ಹೇಗಾದರೂ ಆದರೆ ಸಾಕು, ಎಂದು ತೀರ್ಮಾನಿಸಿಕೊಂಡಳು. ಆದರೂ, ಗಂಡು ಪ್ರಾಣಿಯ ಮಾತು ಅರ್ಥ ವಾಗದೇ ಇದ್ದರೂ, ಅದಕ್ಕೆ ಉಪಚಾರ ಮಾಡಿದರೆ ಮುಂದೆ ಹೇಳಿದ ಹಾಗೆ ಕೇಳುತ್ತೆ ಎಂದಂದು ಕೊಂಡು, ರಾಯರು ಕಲಸಿಕೊಂಡಿದ್ದ ಮೊಸರನ್ನಕ್ಕೆ ಮರೆತು ತುಪ್ಪ ಬಡಿಸಿದರು. ರಾಯರು ಇದನ್ನು ಗಮನಿಸಿದಂತೆ ಕಾಣಲಿಲ್ಲ; ಏಕೆಂದರೆ ಅಳಿಯನನ್ನೂ ಸುಲಭವಾಗಿ ಗಿಟ್ಟಿಸಬಹುದಲ್ಲ ಎಂಬ ಹುಮ್ಮಸ್ಸು ಅವರನ್ನೂ ಆವರಿಸಿಕೊಂಡಿತ್ತು.

ಗಂಡ ಹೆಂಡತಿಯರಿಬ್ಬರೂ ಅವರವರ ಗುಂಗಿನಲ್ಲೇ ಇದ್ದುದರಿಂದ ಹೆಚ್ಚು ಮಾತನಾಡುವುದಕ್ಕೆ ಹೋಗಲಿಲ್ಲ. ಎರಡನೆ ಷೋ ಸಿನಿಮಾದಕ್ಕೆ ಹೋದ ಮಗಳು ಬರುವುದಕ್ಕೆ ಹೊತ್ತಾಗುವುದರಿಂದ, ಇಬ್ಬರೂ ತಮ್ಮ ಗುಂಗಿನಲ್ಲಿರಲು ಅವಕಾಶ ದೊರಕಿತ್ತು.

* * * * *

ಬೆಳಿಗ್ಗೆ ಎದ್ದಕೂಡಲೇ ರಾಯರು ಕಾಫಿ ಕುಡಿದು, ಹೊರಕ್ಕೆ ಓಡಿದರು. ಧಸ ಧಸ ಹಿಂತಿರುಗಿ ಬಂದು ಬೇಗ ಊಟಮಾಡಿ ಕಛೇರಿಗೆ ಹೋದರು. ಸಾಯಂಕಾಲ ಬಂದರು. ಕಾಫಿ ಕುಡಿದು ತಿರುಗಿ ಓಡಿದರು. ಹೊತ್ತಾಗಿ ಬಂದರು. ಮಾತಿಲ್ಲ ಕತೆಯಿಲ್ಲ.

ಅಳಿಯನ್ನ ಹುಡುಕಕ್ಕೆ ಗಂಡ ವದ್ದ್ಯಾಡ್ತಾ ಇದಾರೆ ಎಂದು ಖಾತ್ರಿಯಾದಾಗ ಮಹಾಲಕ್ಷಮ್ಮನವರ ಮನಸ್ಸು ಹಗೂರಾಯಿತು. ಸಂತಸದಿಂದ ಬೆಳಗಿತು.

ಮೂರು ದಿನಗಳು ಹೀಗೆ ಪರದಾಡಿದ ಮೇಲೆ ರಾಯರು ಒಂದು ಸಂಜೆ ಟವಲಿನಲ್ಲಿ ಯಾವುದನ್ನೋ ಮುಚ್ಚಿಕೊಂಡು ಮನೆಗೆ ತಂದರು. ಅದನ್ನು ತಮ್ಮ ಕೊಠಡಿಯ ಮೇಜಿನ ಮೇಲೆ ಇರಿಸಿದರು. ಅದನ್ನು ಅನಾವರಣ ಮಾಡಿದರು. ದೂರ ನಿಂತು ಅದನ್ನು ನೋಡಿ ಹಿಗ್ಗಿದರು.

"ಲೇ" ಅಂದರು. "ಲೇ ಬಾರೇ ಇಲ್ಲಿ" ಅಂದರು. "ಮಾಲೀ ಬೇಗ ಬಾರೆ ಇಲ್ಲಿ" ಎಂದರು.

"ಲೇ" ಅಂದಾಗ ಮಹಾಲಕ್ಷಮ್ಮನವರಿಗೆ ಕೇಳಿಸಿತು. "ಲೇ ಬಾರೇ ಇಲ್ಲಿ" ಎಂದಾಗ ಏನಾಯ್ತು ಇವರಿಗೆ ಎಂದುಕೊಂಡರು. "ಮಾಲೀ ಬೇಗ ಬಾರೆ ಇಲ್ಲಿ" ಎಂದಾಗ ೨೫ ವರ್ಷಗಳ ಹಿಂದೆ ಅವಸರದಲ್ಲಿ ಅತ್ತೆ ಮನೆಯಲ್ಲಿ ಯಜಮಾನರು ಪಿಸು ಮಾತಿನಲ್ಲಿ ಕರೆದಿದ್ದು ನೆನಪಿಗೆ ಬಂತು.

ಈಗ ಈ ವಯಸ್ಸಿನಲ್ಲಿ ಆಗಿನ ಹಾಗೇ ಕರೆಯುತ್ತಿದ್ದಾರಲ್ಲ ಎಂದು ಕಳವಳ ಉಂಟಾಯಿತು. ಆದುದರಿಂದಲೇ ಮಹಾಲಕ್ಷ್ಮಮ್ಮನವರು ಬೇಗ ಬೇಗ ಓಡಿ ರಾಯರ ಕೊಠಡಿಯನ್ನು ಸೇರಿದರು.

"ಏನೂಂದ್ರೆ, ಏನಾಯಿತು? ಯಾಕೆ ಹಾಗೆ ಕರೆದಿರಿ" ಎಂದು ಕಾತುರದಿಂದ ಕೇಳಿದರು.

"ನೋಡೇ ಇದನ್ನ" ಎಂದರು ರಾಯರು.

ಮಹಾಲಕ್ಷ್ಮಮ್ಮನವರು ಅದನ್ನು ನೋಡಿದರು. ಅಲ್ಲಿದ್ದುದೇನು? "ರೂಂ ಬಾಡಿಗೆಗೆ ಇದೆ" ಎಂದ ತೂಗು ಹಲಗೆ. "ಇದೇನು ಬಂತ್ರಿ? ಈ ಬೋರ್ಡ್ ಯಾಕೆ?" ಎಂದರು ಮಹಾಲಕ್ಷ್ಮಮ್ಮ. "ಮದುವೆ ಮಹದೇವಶಾಸ್ತ್ರಿ ಹೇಳಿದ್ದು ಕಣೆ. ಮುಂದಿನ ರೂಂ ಅನ್ನು ಬಾಡಿಗೆಗೆ ಕೊಟ್ಟರೆ, ಬೆಳೆದ ವಿದ್ಯಾರ್ಥಿಗೆ ಬಾಡಿಗೆಗೆ ಕೊಟ್ಟರೆ, ಅವ ಎರಡು ಮೂರು ತಿಂಗಳು ನಮ್ಮನೆಯಲ್ಲಿದ್ದರೆ, ಕುಮುದನಿಗೆ ಗಂಡ ಆಗೇ ಆಗ್ತಾನೆ. ಅದಕ್ಕೇ ಕಣೆ ಬಾಡಿಗೆಗೆ ಬಂದವರಲ್ಲಿ ನಮಗೆ ಚೆಂದ ಕಂಡವನಿಗೆ ಕೊಠಡಿ ಕೊಟ್ಟರಾಯಿತು. ನಮ್ಮ ಮನೆ ದಿವನಾಗಿದೆಯಲ್ಲ" ಎಂದರು ರಾಯರು. ಪ್ಲಾನ್ ಅರ್ಥವಾಯಿತು ಮಹಾಲಕ್ಷ್ಮಮ್ಮನವರಿಗೆ. ತಲೆದೂಗಿದರು. ಸಾವಿರ ಉಪಾಯ ಹೂಡಿ ಕನ್ಯಾದಾನ ಮಾಡಬೇಕು, ಅಲ್ಲವೇ?

■

# "ಎಡಗಡೆಯದೋ ಅಥವಾ"

"ವರ್ಷಾವಧಿ ಹಬ್ಬ ಇವತ್ತು: ದಿನವೂ ಬರುತ್ತೆ ದೀಪಾವಳಿ! ಹೆಣ್ಣಿಗೂ ಎಣ್ಣೆ ನೀರಿನ ಅಗತ್ಯವಿದ್ದೇ ಇರುತ್ತೆ. ಆದುದರಿಂದ ನೀವು ಇವತ್ತು ಬೆಳಿಗ್ಗೆ ಎಣ್ಣೆ ನೀರನ್ನು ಹಾಕಿಕೊಳ್ಳಲೇ ಬೇಕು" ಎಂದು ಮೇನಕೆಯನ್ನು ದಾಸಿಯು ಒತ್ತಾಯಪಡಿಸಿದಳು.

ಹಿಂದಿನ ರಾತ್ರಿ ದೇವೇಂದ್ರನ ಸಮ್ಮುಖದಲ್ಲಿ "ಬೈನೈಟ್" ಬ್ಯಾಲೆಯನ್ನು ಯಶಸ್ವಿಯಾಗಿ ಪ್ರದರ್ಶಿಸಿ, ಇಂದ್ರನ ಸಾವಿರ ಕಣ್ಣುಗಳನ್ನು ಕೆಂಪೇರಿಸಿ, ಮನೆಗೆ ಮೇನಕೆಯು ಹಿಂತಿರುಗಿದಾಗ ಬೆಳಗಿನಜಾವ ಮೂರು ಗಂಟೆಯಾಗಿತ್ತು. ಮೈಮೂಳೆಗಳೆಲ್ಲಾ ನೋಯುತ್ತಿತ್ತು. ಮಲಗಿದಾಗ ನಿದ್ರೆ ಬಂದಿತ್ತು. ಆದರೆ ಬೆಳಗಿಜಾವ ಆರು ಗಂಟೆಯ ಹೊತ್ತಿಗೆ ಎಚ್ಚರವಾಗಿಬಿಟ್ಟಿತ್ತು. ಒಂದು ಹೊರಳು ಹೊರಳಿ ಬುರ್ನೀಸನ್ನು ಕತ್ತಿನ ತನಕ ಎಳೆದುಕೊಂಡು ತಿರುಗಿ ಮಲಗಿದಳು. ಸುಖವಾದ ಸಕ್ಕರೆ ನಿದ್ರೆ ಬಂದಿತ್ತು. ಸಕ್ಕರೆ ನಿದ್ರೆಯಲ್ಲಿ ಸಿಹಿಯಾದ ಕನಸು ಬಿದ್ದೇಬೀಳುತ್ತೆ. ನಿದ್ರೆ ಮಾಡುತ್ತಿದ್ದ ಮೇನಕೆಯ ಮುಖವು, ಕನಸಿನಿಂದಾಗಿ, ಮೊಗ್ಗು ಅರಳಿ ಹೂವಾಗುವಂತೆ, ಅರಳಿತು. ಕೆಂನಗೆಯ ಕಪೋಲಗಳ ಮುದ್ದು ಗುಳಿಯಲ್ಲಿ ಕೇಳಿಯಾಡಿತು.

ಕನಸಿನಲ್ಲಿ ಬರುವ ಸುಖ ಮತ್ತು ಸೊಬಗು ನನಸಿನಲ್ಲಿ ಹೇಗೆ ತಾನೇ ಬರಲು ಸಾಧ್ಯ? ಅದೂ ಅಲ್ಲದೆ ಕನಸಿನಲ್ಲಿ ಪಟ್ಟ ಸುಖದಿಂದ ದೇಹಕ್ಕೆ ಹೆಚ್ಚು ಆಯಾಸವೂ ಆಗುವುದಿಲ್ಲ.

ಅಂತಹ ಸವಿ ಕನಸು ಸಕ್ಕರೆ ನಿದ್ರೆಯಲ್ಲಿ ಬಿದ್ದಿದ್ದಾಗ, ದಾಸಿಯು ಬಂದು ಕಚಗುಳಿಯಿಟ್ಟು ಮೇನಕೆಯನ್ನು ಎಬ್ಬಿಸಿದ್ದಳು. ದಾಸಿಯನ್ನು ಒದ್ದುಬಿಡಲೇ ಎನ್ನುವಷ್ಟು ಕೋಪವು ಮೇನಕೆಗೆ ಉಂಟಾಯಿತು. ಆದರೆ ಆ ದಾಸಿಯು, ಚಿಗುಳಿಯನ್ನು ತಿನ್ನುಕ್ಕೆ ಶುರುಮಾಡಿದಂದಿನಿಂದ ಮೇನಕೆಯ ಸೇವೆಯಲ್ಲೇ ನಿರತಳಾಗಿದ್ದಳು. ಒಮ್ಮೊಮ್ಮೆ ಅಕಸ್ಮಾತ್ತಾಗಿ ಅಪ್ಸರಸೀಯು ಮನೆಗೆ ಅಭ್ಯಾಗತರು ಇಬ್ಬರು ಒಟ್ಟೊಟ್ಟಿಗೆ ಬಂದಾಗ, ದಾಸಿಯು ಅದೇನು ಜಾಣತನದಿಂದ "ಕೊಕ್ಕು" ಆಟವನ್ನು ಆಡಿಸುತ್ತಿದ್ದಳು! ಅಂತಹ ದಾಸಿಯ ಮೇಲೆ ರೇಗಬಹುದೇ? ಅದೂ ಅಲ್ಲದೆ ಮೇನಕೆಯ ಮೈಗೆ ಒಳ್ಳೆಯದಾಗಲಿ ಎಂದಲ್ಲವೇ ದಾಸಿಯು ಇಷ್ಟೊ ಮೆಹನತ್ತನ್ನು ಮಾಡುತ್ತಿರುವುದು.

ಒಲೆಯ ಮುಂದೆ ಬಚ್ಚಲ ಮನೆಯಲ್ಲಿ ಮೇನಕೆಯು ಮಣೆಯ ಮೇಲೆ ಕುಳಿತುಕೊಂಡಳು. "ಇಂದ್ರ, ಚಂದ್ರ, ದೇವೇಂದ್ರ, ವಿಶ್ವಾಮಿತ್ರ, ಮಜೇಂದ್ರ" ಎಂದು ಅನ್ನುತ್ತ ದಾಸಿಯು ಆರು ತೊಟ್ಟು ಎಣ್ಣೆಯನ್ನು ಮೇನಕೆಯ ಬೈತಲೆಯ ಮೇಲೆ ಇಟ್ಟು ತಟ್ಟಿದಳು. ನಂತರ ಮೈಗೆಲ್ಲಾ ಎಣ್ಣೆಯನ್ನು ಒತ್ತಿದಳು. ಅರ್ಧತಾಸು ನೆನೆಸಿದಳು. ನಂತರ ಬಚ್ಚಲಲ್ಲಿ ಕೂರಿಸಿ ಬಿಸಿನೀರನ್ನು ಒಂದು ಒಬ್ಬೆ

ಹಾಕಿದಳು. ಮೇನಕೆಯ ಮೈಯೆಲ್ಲಾ ಕೆಂಪಾಯಿತು. ಆಗ ದಾಸಿಯು ಹೆಸರು ಹಿಟ್ಟನ್ನು ತೆಗೆದುಕೊಂಡು, ಮೇನಕೆಯ ಮೈಗೆ ತಿಕ್ಕಲು ಆರಂಭಿಸಿದಳು.

ಬಲಿತವರಿಗೆ ಹೆಸರು ಹಿಟ್ಟನ್ನು ತಿಕ್ಕುತ್ತಾರೆಯೇ ಎಂಬ ಅನುಮಾನವು ಮಕ್ಕಳೊಂದಿಗ ಓದುಗರಿಗೆ ಬರಬಹುದು. ಆದರೆ ಸ್ವರ್ಗದಲ್ಲಿ ಅಪ್ಸರೆಯರ ಚರ್ಮವು ಮಕ್ಕಳ ಚರ್ಮದಂತೆಯೇ ಎಲ್ಲೆಲ್ಲೂ ಮೃದುವಾಗಿರುತ್ತದೆ. ಅಪ್ಸರಸಿಯರಲ್ಲವೇ? ತಾಯಿ ಗರ್ಭದ ಸರಸ್ಸಿನಲ್ಲಿ ಮಕ್ಕಳಿರುವಂತೆ, ಇವರೂ ಸರಸ್ಸಿನಲ್ಲಿಯೇ ಕೇಳಿಯಾಡುವುದರಿಂದ ಮಕ್ಕಳ ಮೈಯ್ಯಂತೆ, ಇವರು ಬಲು ಮೃದು. ಆದುದರಿಂದಲೇ ಅವರುಗಳು ಅಭ್ಯಂಗನ ಸ್ನಾನಕ್ಕೆ ಹೆಸರು ಹಿಟ್ಟನ್ನು ಕಾಲಾನುಕಾಲದಿಂದಲೂ ದಾಸಿಯರು ಉಪಯೋಗಿಸುತ್ತಾರೆ. ಅಲ್ಲದೆ ಹೆಸರು ಹಿಟ್ಟು ತಂಪು. ಆಯುರ್ವೈದ್ಯರು ಹಾಗೆಂದಿದ್ದಾರೆ.

ದಾಸಿಯು ಮೇನಕೆಯ ಬೆನ್ನನ್ನು ಎಣ್ಣೆ ಹೋಗುವಂತೆ ತಿಕ್ಕಿದಳು. ನಂತರ ಎದೆಯ ಭಾಗಕ್ಕೆ, ಹೆಸರು ಹಿಟ್ಟನ್ನು ಹಿಡಿದ ಅಂಗೈಯನ್ನು ಹಾಕಿದಳು. ಒಂದು ಬಾರಿ ಅರ್ಧದಷ್ಟಕ್ಕೆ ಹಗೂರಾಗಿ ತಿಕ್ಕಿದಳು. ಅಷ್ಟೇ!

ಅಷ್ಟರಲ್ಲೇ ಮೇನಕೆಗೆ ಕಚಗುಳಿ ಇಟ್ಟ ಹಾಗಾಯಿತೇನೋ? ಕೂತಿದ್ದಲ್ಲೇ ಮೈಯನ್ನು ಕುಲುಕಿಸುತ್ತ ನಗುಕ್ಕೆ ಶುರು ಮಾಡಿದಳು. ಕಿಲಕಿಲನೆ ನಗುಕ್ಕೆ ಶುರು ಮಾಡಿದ ಮೇನಕೆಯು ತುಸು ನಿಮಿಷಗಳಲ್ಲೇ ಗಹಗಹಿಸಿ ನಗಲಾರಂಭಿಸಿದಳು. ಕುಲುಕುಲು ನಗುವವರ ಮೈಯನ್ನು ತಿಕ್ಕುವುದಾದರೂ ಹೇಗೆ?

"ಯಾಕಕ್ಕ ಹಾಗೆ ನಗುತ್ತೀರಿ? ನಾನು ಕೈಯ್ಯಾಡಿಸಿದರೂ ನಗಬೇಕೇ? ಅಥವಾ ಏನಾದರೂ ನೆನಪು ಬಂತೇ? ಯಾರದಾದರೂ ಜ್ಞಾಪಕವಾಯಿತೇ?" ಎಂದು ದಾಸಿಯು ಕುತೂಹಲದಿಂದ ಕೇಳಿದಳು. ಅವಳಿಗೂ ಅಂತಹ ವಯಸ್ಸೇ!

"ಹೌದು ಕಣೆ, ವೈದ್ಯನ ನೆನಪಾಯಿತು" ಎಂದಳು ಮೇನಕೆ, ನಗುವಿನ ಉಬ್ಬರವು ತುಸು ಹತೋಟಿಗೆ ಬಂದಮೇಲೆ.

"ಅದು ಯಾವ ವೈದ್ಯ ಇಲ್ಲಿಗೆ ಬಂದಿದ್ದ. ನನಗೆ ತಿಳಿಯದ ಹಾಗೆ ಅವ ಹೇಗೆ ಬಂದ? ಯಾತಕ್ಕೆ ಬಂದಿದ್ದ? ನಿಮಗೇನೂ ಬೇನೆ ಎಂದೂ ಬಂದಿಲ್ಲವಲ್ಲ? ಇದೇನಕ್ಕ ನೀವನ್ನೋದು? ಅರ್ಥವಾಗಲಿಲ್ಲ" ಎಂದಳು ದಾಸಿ. ಸ್ವಲ್ಪ ಕೋಪ ಬಂದಿತ್ತು.

ಅಪ್ಸರೆಯರ ದಾಸಿ ಎಂದರೆ ದೇವರಿಗೆ ಪೂಜಾರಿ ಇದ್ದಹಾಗೆ. ಸಚಿವರಿಗೆ ಪುಢಾರಿ ಇದ್ದಹಾಗೆ. ಹಾವಾಡಿಗನಿಗೆ ಹಂಡೀಬಾಗ್ ಇದ್ದಹಾಗೆ. ಪೂಜಾರಿಯನ್ನು ಬುಟ್ಟಿಗೆ ಹಾಕಿಕೊಂಡು, ಕಾಣಿಕೆಯನ್ನು ಸಲ್ಲಿಸಿದ ಮೇಲೆ ದೇವರ ದರ್ಶನವು ಸಾಧ್ಯ. ಅಂತೆಯೇ ದಾಸಿಯರು ಸುಪ್ರಸನ್ನರಾದರೆ ಮಾತ್ರ ಒಡತಿಯರ ದರ್ಶನಲಾಭ ಬಂದವರಿಗೆ ಸಾಧ್ಯ. ಮಾಮೂಲು ಈ ರೀತಿ ಇರುವಲ್ಲಿ, ಯಾವನೋ ಹೆಸರಿಲ್ಲದ ಅಡ್ಡ ಕಸಬಿ ವೈದ್ಯ ಮೇನಕೆಯನ್ನ ಭೆಟಿಯಾಗಿದ್ದ ಎಂದು ದಾಸಿಗೆ ತಿಳಿದಾಗ, ಆಕೆಗೆ ಅವಮಾನ, ಅಶುಭ, ಅಸಮಾಧಾನ ಎಲ್ಲವೂ ಮೂಡಿತ್ತು.

ಅದನ್ನು ಕಂಡ ಮೇನಕೆಗೆ ನಗುವು ನಿಂತಿತು.

"ನೀನ್ಯಾಕೆ ಮುನಿಸಿಕೊಳ್ಳುತ್ತೀ? ಇಲ್ಲಲ್ಲಾ ಕಣೆ ವೈದ್ಯ ಬಂದದ್ದು. ಸುರಪತಿಯ ಆಣತಿಯ ಮೇರೆಗೆ ಭೂಲೋಕಕ್ಕೆ ಹೋಗಿದ್ದನಲ್ಲಾ? ಅಲ್ಲಿ ವಿಶ್ವಾಮಿತ್ರನ ಜತೆಯಲ್ಲಿ ಸಂಸಾರವನ್ನು

ಮಾಡಿಕೊಂಡಿದ್ದನಲ್ಲ! ಶಕುಂತಲೆಯು ಹುಟ್ಟಿದಳಲ್ಲ! ಮಗುವನ್ನು ನೋಡಿ ಮುನಿಪುಂಗವನು ಮುನಿದು, ಒಂದು ಕೈಯನ್ನೆತ್ತಿ, ಇನ್ನೊಂದು ಕೈಯನ್ನು ಬೀಸಿ, ಆಶ್ರಮವನ್ನು ಬಿಟ್ಟು ಹೊರಟುಹೋದನಲ್ಲ!

ಆ ಹೊತ್ತಿನಲ್ಲಿ ನನಗೆ ತುಂಬಾ ಬೇಸರವಾಯಿತು. ಈ ಮಗುವನ್ನು ಯಾರ ಕಾನ್ವೆಂಟಿಗೆ ಸೇರಿಸಿ ನಾನೂ ಕೈಝಾಡಿಸಿಕೊಂಡು ಸ್ವರ್ಗಕ್ಕೆ ಹಿಂತಿರುಗುವುದು ಎನ್ನಿಸಿತು. ಕಣ್ವಮಹಾಮುನಿಗಳು ನಡೆಸುವ ಕಾನ್ವೆಂಟಿನ ಸುದ್ದಿ ನನಗಾಗ ತಿಳಿದಿರಲಿಲ್ಲ. ಸುರಪತಿಯ ಮಾತನ್ನು ಕೇಳಿಕೊಂಡು ಇಲ್ಲಿಗೆ ಬಂದರೆ ಈ ಪತಿ, ಇದನ್ನು ಸೊಂಟಕ್ಕೆ ಕಟ್ಟಿ ಹೋದನಲ್ಲಾ ಎಂದು ವ್ಯಥೆಯು ಆಯಿತು.

ಅಷ್ಟು ಹೊತ್ತಿಗೆ ಮಗುವು ಅಳುವುದಕ್ಕಾರಂಭಿಸಿತು. ಅದರ ಮುಖವನ್ನು ನೋಡಿದೆ. ಬಲು ಮುದ್ದಾಗಿತ್ತು. ತುಂಡು ತುಂಡಾಗಿ ಬೆಳೆದಿತ್ತು. ಧ್ಯಾನ ಧಾರಣ ಸಮಾಧಿ ಎಂದೆನ್ನುವ ಋಷಿ, ಹಸಿರು ಕ್ರಾಂತಿಯಲ್ಲೂ ಪ್ರವೀಣನಾಗಿ, ಇಂತಹ ಹುಲುಸಾದ ಬೆಳೆಯನ್ನು ತೆಗೆದನಲ್ಲ ಎಂದು ಅಭಿಮಾನವೂ ಉಕ್ಕಿತು.

ಮಗು ನನ್ನ ಮೈಯನ್ನು ಪರಚುತ್ತಾ ಅಳುತ್ತಲೇ ಇತ್ತು. ಇದಕ್ಕೆ ಹಸಿವಾಗಿದೆ. ಹಾಲೂಡಿಸಿದರೆ ತೆಪ್ಪಗಾಗುತ್ತೆ ಎನ್ನಿಸಿತು.

ಆಶ್ರಮದೊಳಕ್ಕೆ ಹೋಗಲು ಮನಸ್ಸು ಬರಲಿಲ್ಲ. ಬಿಕೊ ಅನ್ನಿಸುತ್ತೇನೋ ಅನ್ನಿಸಿತು. ಆದುದರಿಂದ ಆಶ್ರಮದ ಹಿತ್ತಲ ಕಡೆಗೆ ಹೋಗಿ, ಮಾವಿನಮರದ ಕೆಳಗೆ ಕುಳಿತು ಮಗುವಿಗೆ ಹಾಲು ಕುಡಿಸಲು ತೊಡಗಿದೆ.

ಮಗು ಶಕುಂತಲೆಗೆ ಅದೇನು ಆತುರ ಅಂತ? ಅವಕಾಶ ದೊರೆತ ಕೂಡಲೇ ಬಾಯಿ ಹಾಕಿತು. ಮೊದಲಿನಿಂದಲೂ ಶಕುಂತಲೆಗೆ ಒಂದು ಹುಚ್ಚು ಅಭ್ಯಾಸ. ಬಾಯಿನಲ್ಲಿದ್ದುದರಿಂದ ಹಾಲನ್ನು ಕುಡಿಯುವಾಗ, ಇನ್ನೊಂದು ಕೈಯಲ್ಲಿ ಇನ್ನೊಂದನ್ನು ಹಿಡಿದುಕೊಂಡು ತಡವರಿಸುತ್ತಲೇ ಇರುವ ಚಾಳಿ. ಶಕುಂತಲೆಯ ಅಂಗೈಯ್ಯೂ ಬಲು ಬಲು ಮೃದು. ಆದುದರಿಂದ ನನಗೂ ತುಂಬಾ ಹಿತವಾಗುತ್ತಿತ್ತು. ಹಾಗೆ ತೋರೆದೆಯಾಗಿ ಹಾಲೂಡಿಸುತ್ತಾ ಕುಳಿತು,

**ಹವ್ವಿಯೆಂದೋರಾರು ಹವಳ ಕದ್ದೋರಾರು**
**ನಾನಲ್ಲ ನಮ್ಮ ಮಗುವಂತೂ**

ಅಂತ ಮಗುವನ್ನು ಹಿತವಾಗಿ ತಡವರಿಸುತ್ತ ಹಾಡಲಾರಂಭಿಸಿದೆ. ಸ್ವಲ್ಪ ಹೊತ್ತು ಮಗು ಹಾಲು ಕುಡಿಯಿತು. ನಂತರ ಬಾಯನ್ನು ದೂರಮಾಡಿತು. ಆಗ ನಾನೂ ತಲೆಯೆತ್ತಿದೆ.

ಎದುರಿನಲ್ಲೆ ಸಂಪಿಗೆ ಮರದ ಬುಡದ ಬಳಿ ಒಬ್ಬ ಯುವಕನು ನಿಂತಿದ್ದ. ನನ್ನ ಆಶ್ರಮದ ಹಿತ್ತಲಿಗೆ ಇವನು ಯಾವಾಗ ಬಂದ? ಏಕೆ ಬಂದ? ಎಂದು ನನಗೆ ರೇಗಿತು. ಅವನಾದರೋ ನನ್ನನ್ನೇ, ಅಂದರೆ ಮುಖವನ್ನಲ್ಲಾ ದಿಟ್ಟಿಸಿನೋಡುತ್ತಿದ್ದ.

"ಯಾರಪ್ಪ ನೀನು? ಇಲ್ಲಿಗೆ ಏಕೆ ಬಂದೆ? ಇದು ವಿಶ್ವಾಮಿತ್ರ ಋಷಿಗಳ ಆಶ್ರಮ ಎಂಬುವುದು ತಿಳಿಯದೆ?", ಎಂದು ಕೇಳಿದ.

ಅವನ ಮೇಲಿನ ಕೋಪರು ಹೆಚ್ಚು ಹೊತ್ತು ಉಳಿಯಲಿಲ್ಲ. ಅಷ್ಟು ಸೊಂಪಾಗಿ ಬೆಳೆದಿದ್ದ ಸುಂದರ ಯುವಕನ ಮೇಲೆ ಕೋಪವು ಹೇಗೆ ಮುಂದುವರಿಯಲು ಸಾಧ್ಯ? ಯೌವನದ

ಕಳೆಯೊಂದಿಗೆ ಬುದ್ಧಿವಂತನ ಕಳೆಯೂ ಅವನ ಮುಖದ ಮೇಲೆ ನಲಿದಾಡುತ್ತಿತ್ತು. ಲಕ್ಷಣವಾದ ಉಡುಪನ್ನೇ ಧರಿಸಿದ್ದ. ಆಶ್ರಮನಿವಾಸಿಯಿವನಲ್ಲ; ರಾಜಾಸ್ಥಾನದ ಸುಸಂಸ್ಕೃತ ಲೌಕಿಕನಿವನು ಎಂದು ಸುಲಭವಾಗಿ ತಿಳಿಯಿತು.

"ರಾಜಾಸ್ಥಾನದಲ್ಲಿ ವೈದ್ಯ ನಾನು. ಮಹಾರಾಣಿಯವರಿಗೆ ಚಿಂತೆಯು ಮೂಡಿತ್ತು. ದೇಹಾಲಸ್ಯವಾದಾಗ ನನಗೆ ಕರೆ ಕಳಿಸಿದರು. ಹೋಗಿ ಪರೀಕ್ಷೆ ಮಾಡಿದಾಗ ಆಲಸ್ಯದ ಕಾರಣವು ಗೊತ್ತಾಯಿತು. ರಾಜಾಸ್ಥಾನಕ್ಕೆ ಯವನ ರಾಜ್ಯದಿಂದ ನರ್ತಕಿಯೊಬ್ಬಳು ಬಂದಿದ್ದುದೂ ತಿಳಿದಿತ್ತು. ಪತಿವಶೀಕರಣ ಸೊಪ್ಪನ್ನು ಹಿಂಡಿ ಗುಗ್ಗುಳವನ್ನು ಮಾಡಿ, ರಾಣಿಯ ಕೈಯಿಂದ ಅರಸರಿಗೆ ತಿನ್ನಿಸಿದರೆ, ನರ್ತಕಿಯ ಪೀಡೆಯು ರಾಣಿಗೆ ಬಡಿಯುವುದಿಲ್ಲ ಎಂದು ತೀರ್ಮಾನಿಸಿದೆ. ಪತಿವಶೀಕರಣ ಸೊಪ್ಪು ವಿಶ್ವಾಮಿತ್ರ ಮುನಿಗಳ ಆಶ್ರಮದಲ್ಲಿ ಸೊಂಪಾಗಿ ಬೆಳೆದಿರುತ್ತದೆ ಎನ್ನುವುದೂ ಆಯುರ್ವೈದ್ಯರಿಗೆಲ್ಲಾ ತಿಳಿದ ವಿಷಯ. ಆದಕಾರಣ ಇಲ್ಲಿಗೆ ಬಂದೆ. ಸೊಪ್ಪನ್ನು ಕುಯ್ದು ಬುಟ್ಟಿಗೆ ಇಡುತ್ತಿದ್ದೆ. ಇಲ್ಲಿ ಯಾರೂ ಆಗ ಇರಲಿಲ್ಲ. ಆದರೆ ಸ್ವಲ್ಪ ಹೊತ್ತಿನಲ್ಲೆ ಸುಮಧುರ ಕಂಠವೊಂದು ಜೋಗುಳವನ್ನು ಹಾಡಿದುದು ಕೇಳಿಸಿತು. ಕಾರಣ ತಲೆ ಎತ್ತಿದೆ. ನಿಮ್ಮನ್ನು ಕಂಡೆ. ಕಾಣುತ್ತಲೇ ನಿಂತುಕೊಂಡೆ" ಎಂದು ಆ ಆಯುರ್ವೈದ್ಯ ಪ್ರವೀಣನು ನುಡಿದ.

"ಸಾಕಷ್ಟು ಸೊಪ್ಪನ್ನು ಶೇಖರಿಸಿಯಾಯಿತೇ? ಇನ್ನು ಬೇಕಾದರೆ, ತುಳಸೀ ಕಟ್ಟೆಯ ಬಳಿಯಲ್ಲಿ ಬೆಳೆದಿದೆ" ಎಂದು ನಾನಂದೆ.

ಬೇಗ ಹೊರಟು ಹೋಗುತ್ತಾನೇನೊ ಎಂದು ಒಂದು ರೀತಿಯ ಕಳವಳವಾಯಿತು. ಆದುದರಿಂದಲೇ ಆ ಸಲಹೆಯನ್ನು ಕೊಟ್ಟೆ.

"ಸಾಕಷ್ಟು ಸೊಪ್ಪನ್ನು ಶೇಖರಿಸಿಯಾಗಿದೆ. ಹೆಚ್ಚೇನೂ ಬೇಡ" ಎಂದು ಅರ್ಧ ಹೇಳಿ ಯಾಕೋ ಮಾತನ್ನು ನಿಲ್ಲಿಸಿದ. "ಏನೋ ಹೇಳುವುದಕ್ಕೆ ಶುರುಮಾಡಿದ್ದೆಯಲ್ಲ?" ಎಂದೆ.

"ನಿಮ್ಮನ್ನು ಒಂದು ಪ್ರಶ್ನೆ ಕೇಳಬೇಕು ಅಂತ ಆಸೆ. ಕೇಳಬಹುದೋ ಇಲ್ಲವೋ ಅಂತ ಅನುಮಾನ" ಎಂದ.

"ಹೆಂಗಸರನ್ನು ಕೇಳಬಾರದೆಂಬ ಅಂತಹ ಪ್ರಶ್ನೆಯಾವುದಪ್ಪಾ?"—ಎಂದೆ.

"ಹೆಂಗಸನ್ನೇ ಕೇಳಿ ಉತ್ತರ ಪಡೆಯಬೇಕಾದ ಪ್ರಶ್ನೆ ಅದು. ಆದರೆ ನೀವು ಮಹಾ ಋಷಿಗಳ ಪತ್ನಿ. ಅದಕ್ಕೇ....." ಅಂದ.

"ಮಹಾ ಋಷಿಗಳು ಈಗತಾನೆ ಕೈ ಕೊಡವಿಕೊಂಡು ಹಿಂತಿರುಗುವುದಿಲ್ಲ ಎಂದು ಹೇಳಿ ಹೊರಟುಹೋದರು" ಎಂದು ನಾನು ಪ್ರೋತ್ಸಾಹಿಸಿದೆ.

ಶಕುಂತಲೆಯೇನೋ ನನ್ನ ತೊಡೆಯ ಮೇಲೆ ಮಲಗಿ ಎರಡೂ ಕೈಗಳಿಂದಲೂ ಆಟವಾಡುತ್ತಿದ್ದಳು. ಹೊಟ್ಟೆ ತುಂಬಿದ ಮೇಲೆ ಬಾಯಿಂದ ಏಕೆ ಆಡುತ್ತೆ?

"ನನ್ನ ವೈದ್ಯಕೀಯ ಕಸುಬಿಗೆ ಸಂಬಂಧಪಟ್ಟ ಪ್ರಶ್ನೆಗೆ ನೀವು ದಯಮಾಡಿ ಉತ್ತರಿಸಿದರೆ ತುಂಬಾ ವಂದನೆಗಳು" ಎಂದ.

ಎಂತಹ ಎಳೆಯ ಯುವಕ ನಾನಷ್ಟೂ ಹೇಳಿದ ಮೇಲೆ ದಯಮಾಡಿ ಉತ್ತರಿಸಿ ಎಂದೆಲ್ಲ ಅನ್ನುತ್ತಾನೆ. ಎದೆ ಬಿಚ್ಚಿ ಇಂಗಿತವನ್ನು ಸೂಚಿಸಿದ್ದೇನೆ. ಆದರೂ ಪೆಂಗು ಪೆಂಗಾಗಿ ಏನೇನೋ ಹೇಳುತ್ತಿದ್ದಾನೆ ಇವನೆಂತಹ ವೈದ್ಯ ಎಂದಂದುಕೊಳ್ಳುತ್ತಿದ್ದೆ.

ಕಡೆಗೆ ಧೈರ್ಯಮಾಡಿ ಕೇಳಿಯೇ ಬಿಟ್ಟ.

ಆ ಮಗು ನಿಮ್ಮದೇ ಅಲ್ಲವೇ? ಎಂದ.

ಎದ್ದು ಹೋಗಿ ಒದ್ದು ಬಿಡಲೇ ಎನ್ನಿಸಿತು, ಇವನೆಂತಹಾ ಮಂಕು? ಮಗುವಿಗೆ ಬಾಣಂತಿಯು ಹಾಲು ಕುಡಿಸಿದ್ದನ್ನು ನೋಡಿದ ಮೇಲೂ ಈ ಪ್ರಶ್ನೆಯನ್ನು ಕೇಳುತ್ತಾನಲ್ಲ ಎಂದು ಮರುಕವಾಯಿತು.

"ಹ್ಞೂ" ಅಂದೆ ಮುಗುಮ್ಮಾಗಿ.

"ಮಗು ಬಹಳ ಚೆನ್ನಾಗಿ ಬೆಳೆದಿದೆ. ಯಾವ ಟಾನಿಕ್ ಅನ್ನು ಹಾಕುತ್ತೀರಿ" ಎಂದು ಅವ ಕೇಳಿದ. ಇವನ ಕುತೂಹಲವೆಲ್ಲ ಕಸುಬಿನ ಮೇಲೆ ಮಾತ್ರ ಎಂದೂ ನನಗೆ ಅರ್ಥವಾಯಿತು. ಮಾತನ್ನು ಮುಂದುವರಿಸಬೇಕು ಎನ್ನುವ ಆಸಕ್ತಿಯೂ ಇಂಗಿತು.

"ಯಾವ ಟಾನಿಕ್ಕೂ ಇಲ್ಲ. ಬರೀ ಹಾಲು ಮತ್ತು ಹಣ್ಣಿನ ರಸ; ಇನ್ನು ಯಾವ ಮೇಲಾಹಾರವನ್ನೂ ಹಾಕುವುದಿಲ್ಲ" ಎಂದೆ.

ಈ ಮಾತನ್ನು ಕೇಳಿ ಅವನಿಗೆ ಆಶ್ಚರ್ಯವಾಗಿರಬೇಕು. ದುರುಗುಟ್ಟಿಕೊಂಡು ನೋಡುತ್ತಾ ಅನುಮಾನ ಬಂದವನಂತೆ ತಲೆಯನ್ನು ಕೊಡವಿ,

"ಹಣ್ಣಿನ ರಸ! ಎಡಗಡೆಯದರಲ್ಲೋ ಅಥವಾ" ಎಂದು ಕೇಳಿದ.

"ಅದರ ಜ್ಞಾಪಕ ಬಂತು ಕಣೇ, ಅದಕ್ಕೇ ನಗು ಬಂತು" ಎಂದಳು ಮೇನಕೆ.

"ಯಾರು ಯಾರು ಕಣ್ಣು ಹಾಕಿದ್ದಾರೋ ಯಾರದೃಷ್ಟಿ ಬಡಿದಿದೆಯೋ? ಅದರ ಪೀಡೆಯೆಲ್ಲಾ ಹೋಗುವ ಹಾಗೆ ತಿಕ್ಕುತ್ತೀನಿ ಅಕ್ಕಾ" ಎಂದು ಹೇಳುತ್ತಾ ದಾಸಿಯು ಅಭ್ಯಂಜನವನ್ನು ಪೂರೈಸಿದಳು.

■

# "ಬಂದೆ ನಾನು" ಎಂಬ ಶುಕವಾಣಿ

**ಪ**ಶ್ಚಿಮ ಸಮುದ್ರದಲ್ಲಿ ಮಿನುಮಿನುಗುವ ಮೀನಾಕ್ಷಿಯರೊಂದಿಗೆ ಸಮುದ್ರರಾಜನು ಬೆಳದಿಂಗಳಿನಲ್ಲಿ ಜಲಕ್ರೀಡೆಯನ್ನು ಆಡುತ್ತಿದ್ದ. ರಾಣಿಯರಾದ ಮೀನಾಕ್ಷಿಯರು ತನ್ನ ಸಾಮರ್ಥ್ಯವನ್ನು ನೋಡಿ ಮೆಚ್ಚಿ ಮೈಮರೆಯಲಿ ಎಂದು ಸಮುದ್ರರಾಜನು ಕಿರಿಯಲೆಗಳನ್ನು ಅಪ್ಪಳಿಸಿ ಅವರ ಬಳಿಗೆ ಹರಿಸುತ್ತಿದ್ದ. ರಭಸದಿಂದ ಓಡಿಯೋಡಿ ಬಂದ ಆ ಅಲೆಗಳು ಮೀನಾಕ್ಷಿಯರ ವಕ್ಷಸ್ಥಳವನ್ನು ಮುತ್ತಿ ಪ್ರಹರಿಸುತ್ತಿದ್ದವು. ಆಗ ಅಲೆಗಳ ಅಂಚಿನಲ್ಲಿ ನೊರೆಯ ತೋರಣವು ಕಾಣಬರುತ್ತಿತ್ತು. ತಾಯಹಾಲನ್ನು ಕುಡಿದು ಸಂತಸದಿಂದ ಬಾಯನ್ನು ಹೊರತೆಗೆದಾಗ, ಮಗುವಿನ ತುಟಿಗಳ ಮೇಲೆ ನೊರೆಹಾಲು ಕಾಣುವಂತೆ. ಮುತ್ತಿದ ಕಿರಿಯಲೆಗಳು ನೊರೆಯ ತೋರಣದಿಂದಾಗಿ ಚೆಂದ ಕಾಣಿಸುತ್ತಿದ್ದುವು. ಜಲಕ್ರೀಡೆಯು ಉನ್ಮಾದಾವಸ್ಥೆಯನ್ನು ಸಮೀಪಿಸುತ್ತಿತ್ತು.

ಅನತಿ ದೂರದಿಂದ ಶುಕವೊಂದು ಉಲಿದುದು ಕೇಳಿಸಿತು.

"ಬಂದೆ, ನಾನು, ಬಂದೇಬಿಟ್ಟೆ! ಬಂದೆ ನಾನು, ಬಂದೇಬಿಟ್ಟೆ" ಎಂಬ ಶುಕವಾಣಿ.

ಶುಕವಾಣಿಯನ್ನು ಕೇಳಿದ ಸಮುದ್ರರಾಜನು ಹಠಾತ್ತನೆ ಗಂಭೀರನಾದ. ರಾಣಿಯರನ್ನು ಕುರಿತು, "ನಮ್ಮ ದೇವಪಾಲಕರು ಬರುತ್ತಿರುವಂತಿದೆ. ಎಲ್ಲರೂ ಬೇಗ ಸಿದ್ಧರಾಗಬೇಕು. ನಿಮ್ಮ ನಿಮ್ಮ ದಿವ್ಯಾಭರಣಗಳನ್ನೂ ಜೊಂಡು ಹುಲ್ಲನ್ನೂ ತೊಟ್ಟುಕೊಂಡು ದೇವಪಾಲಕರನ್ನು ಸ್ವಾಗತಿಸಲು ಬರಬೇಕು. ನಾನು ಅರೆಕ್ಷಣದಲ್ಲಿ ಸಿದ್ಧನಾಗುತ್ತೇನೆ" ಎಂದು ಆಣತಿಯನ್ನು ಇತ್ತ. ಜಲಕ್ರೀಡೆಯ ವೈಭವವು ಕ್ಷಣಾರ್ಧದಲ್ಲಿ ದೇವಪಾಲಕನ ಸ್ವಾಗತ ಸಮಾರಂಭಕ್ಕೆ ಪರಿವರ್ತನಗೊಂಡಿತು.

ವರುಣದೇವನು ಅನಿರೀಕ್ಷಿತ ತಪಾಸಣೆಗೆಂದು ಅಧಿರಾಜರ ರಾಜ್ಯಕ್ಕೆ ಆಗಿಂದಾಗ್ಗೆ ಬರುವ ಅಭ್ಯಾಸವನ್ನಿಟ್ಟುಕೊಂಡಿದ್ದ. ಹಾಗೆ ಭೇಟಿ ಇತ್ತಾಗ ಆಡಳಿತದ ಲೋಪದೋಷಗಳಿದ್ದರೆ ಪ್ರಕಟವಾಗುವುದು ಸುಲಭ. ಆ ಕಾರಣದಿಂದ ವರುಣದೇವನು ಅಗತ್ಯಸಿಬ್ಬಂದಿಯೊಡನೆ ಪ್ರವಾಸ ಕೈಗೊಳ್ಳುತ್ತಿದ್ದ. ಅವನ ಬಳಿ ಮುದ್ದು ಗಿಳಿಯೊಂದು ಸಿಬ್ಬಂದಿಯ ಪಟ್ಟಿಯಲ್ಲಿ ಸೇರಿಕೊಂಡಿತ್ತು. ಒಂಟಿಯಾಗಿ ಮಲಗಿ ಬೇಸರ ಬಂದಾಗ ಮುದ್ದುಗಿಳಿಯು ನವ್ಯ ಕತೆಗಳನ್ನು ಹೇಳಿ ವರುಣದೇವನನ್ನು ಪ್ರಫುಲ್ಲಗೊಳಿಸುತ್ತಿತ್ತು. ಆ ಗಿಳಿಯನ್ನು ಕಂಡರೆ ವರುಣದೇವನಿಗೆ ತುಂಬಾ ಪ್ರೀತಿ.

"ಬಂದೆ ನಾನು, ಬಂದೇಬಿಟ್ಟೆ" ಎಂಬ ಶಿರೋನಾಮದಿಂದ ಆ ಶುಕವು ಬಲು ನವ್ಯವಾದ ಕತೆಯೊಂದನ್ನು ವರುಣದೇವನ ಕಿವಿಯಲ್ಲಿ ಒಮ್ಮೆ ಉಸುರಿತ್ತು. ಆ ವಾಕ್ಯವನ್ನು ಶುಕವು ಉಲಿದರೇ ವರುಣದೇವನ ಸ್ಮರಣೆಯು ಚಕಿತಗೊಂಡು ಅವನು ಮಂದಸ್ಮಿತನಾಗುತ್ತಿದ್ದ.

ವರುಣದೇವನನ್ನೂ ಅವನ ಸಿಬ್ಬಂದಿಯನ್ನೂ ಸಮುದ್ರರಾಜನು ಬಲು ಗೌರವದಿಂದ ಆದರದಿಂದ ಬರಮಾಡಿಕೊಂಡನು. ಸಮುದ್ರರಾಜನ ಜಲಾಂತರಮನೆಯಲ್ಲಿ ವರುಣದೇವನನ್ನು ಪ್ರತಿಷ್ಠಿಸಲಾಯಿತು. ಸಿಬ್ಬಂದಿಯವರು ತಮ್ಮ ತಮ್ಮ ಅಂತಸ್ಥಿತ ಸಮುದ್ರರಾಜನ ಸಿಬ್ಬಂದಿಯವರ ಮನೆಗಳಲ್ಲಿ ನೆಲೆಸಿದರು. ಮುದ್ದು ಶುಕವು ಅಲ್ಲಿ ಇಲ್ಲಿ ಎಲ್ಲೆಲ್ಲೂ ಪರದಾಡುತ್ತಾ, ಕೊನೆಗೆ ಹಿರಿಯ ನಾವಿಕರು ವಾಸಿಸುವ ಪಡಖಾನೆಗೆ ಹೋಯಿತು. ಸಪ್ತಸಮುದ್ರಗಳನ್ನು ಕಂಡ, ಸಕಲ ರೇವುಗಳಲ್ಲಿನ ಕಡಲ ತೀರದವರ ಸೌಭಾಗ್ಯವನ್ನು ಅನುಭವಿಸಿದ ಹಿರಿಯ ನಾವಿಕರ ಶಬ್ದಸಂಪತ್ತು ಅತಿ ಹಿರಿಯದಾದುದು. ಅವರ ವಾಕ್ ಸಿದ್ಧಿಯು ಅತ್ಯಂತ ಹರಿತವಾಗಿದ್ದುದು. ಅವರ ಊಟ ಉಪಚಾರಗಳು ಕೂಡ ವೈವಿಧ್ಯಮಯವೂ ವನ್ಯಸ್ವಭಾವದ್ದೂ ಆಗಿತ್ತು. ಮುದ್ದು ಗಿಳಿಗೆ ಇಂತಹ ಊಟ ಉಪಚಾರಗಳಲ್ಲಿ ಭಾಗವಹಿಸುವುದು ಅತಿ ಪ್ರಿಯವಾಗಿತ್ತು. ಹಿರಿಯ ನಾವಿಕರೂ ಶುಕದೊಡನೆ ಬಲು ಆದರದಿಂದ ಆಡುತ್ತಿದ್ದರು. ಹೀಗಾಗಿ ಮುದ್ದುಶುಕವು ನಾವಿಕರ ಆಡುಮಾತುಗಳನ್ನು ಲಕ್ಷಣವಾಗಿ ಕಲಿತುಕೊಂಡಿತು. ಸ್ಪಷ್ಟವಾಗಿ ನಾವಿಕರ ಧಾಟಿಯಲ್ಲೇ ಉಚ್ಚರಿಸುತ್ತಿತ್ತು.

ಅನಿರೀಕ್ಷಿತ ತಪಾಸಣೆಗೆ ವರುಣದೇವನು ಹೊರಟಾಗ ಮುದ್ದುಶುಕವನ್ನು ತೋಳ ಮೇಲೆ ಕೂರಿಸಿಕೊಂಡು ಹೋಗುತ್ತಿದ್ದ ಎಂದೆವಲ್ಲವೇ? ಅಂತಹ ಸಂದರ್ಭಗಳಲ್ಲಿ ಆ ರಾಜ್ಯವನ್ನು ತಲುಪುವುದಕ್ಕೆ ಸ್ವಲ್ಪ ಮುಂಚೆ ಶುಕವು “ಬಂದೆ, ನಾ ಬಂದೆ” ಎಂಬ ತನ್ನ ಘೋಷಣೆಯನ್ನು ಮಾಡುತ್ತಿತ್ತು. ಹಳೆಯ ಕತೆಯನ್ನು ಜ್ಞಾಪಿಸುತ್ತಿದೆ ಎಂದುಕೊಳ್ಳುತ್ತಿದ್ದ ವರುಣದೇವ. ಆದರೆ ಆ ಘೋಷಣೆಯನ್ನು ಕೇಳಿದ ಅಧಿರಾಜನು ಬಲು ಬೇಗ ಅಣಿಯಾದ ವ್ಯವಸ್ಥೆಗಳನ್ನು ಮಾಡಲು, ಲೋಪ ದೋಷಗಳನ್ನು ಮುಚ್ಚಿರಿಸಲು ಸಾಕಷ್ಟು ವ್ಯವಧಾನವಿರುತ್ತಿತ್ತು. ಈ ಕಾರಣದಿಂದ ಅಧಿರಾಜರು ಮುದ್ದು ಗಿಳಿಯನ್ನು ತುಂಬ ಒಲವಿನಿಂದ ಮುದ್ದಿಸುತ್ತಿದ್ದರು. ಅದಕ್ಕೆ ಸ್ವಾತಂತ್ರ್ಯ ಇತ್ತಿದ್ದರು. ಅಧಿರಾಜ್ಯದಲ್ಲಿ ಅದು ಎಲ್ಲಿ ಬೇಕಾದರೂ ವಿಹರಿಸಬಹುದಾಗಿತ್ತು. ನಾವಿಕರ ಪಡಖಾನೆಯು ರಾಜ್ಯದ ಸಭ್ಯಸ್ಥರಿಗೆ ಬಹಿಷ್ಕೃತ ಪ್ರದೇಶವಾಗಿದ್ದರೂ ಶುಕವು ಅಲ್ಲಿ ಹೋಗಲು ಯಾವ ಅಡ್ಡಿ ತಡೆಗಳೂ ಇರಲಿಲ್ಲ. ಅದೇ ರೀತಿಯಲ್ಲಿ ಸಮುದ್ರರಾಜನ ಅಂತಃಪುರವನ್ನು ಕೂಡ ಅವೇಳೆಯ ಹೊತ್ತಿನಲ್ಲಿ ಪ್ರವೇಶಿಸಲು ಮುದ್ದುಗಿಳಿಗೆ ಅವಕಾಶವಿತ್ತು. ಅಲ್ಲಿ ಆಗುತ್ತಿದ್ದ ಕಿರು ಗುಟುಕುಗಳನ್ನು ಕೇಳಿದ ಶುಕವು ಅವುಗಳ ಅನುಕರಣೆಯನ್ನು ದಿವ್ಯವಾಗಿ ಮಾಡುತ್ತಿತ್ತು.

ಈ ಎಲ್ಲ ಕಾರಣಗಳಿಂದ ವರುಣದೇವನ ಸಾಮ್ರಾಜ್ಯದಲ್ಲಿ ಮುದ್ದುಗಿಳಿ ಅತ್ಯಂತ ಪ್ರಭಾವೀ ವ್ಯಕ್ತಿಯಾಗಿದ್ದಿತು. ಎಲ್ಲರ ಮೆಚ್ಚುಗೆ ಮೆಹನತ್ತನ್ನು ಪಡೆದಿತ್ತು. ಯಾವ ಸಮಾರಂಭಕ್ಕಾಗಲೀ ಸಂತೋಷ ಕೂಟಕ್ಕಾಗಲೀ ವರುಣದೇವನು ಹೊರಟಾಗ ಮುದ್ದು ಗಿಳಿಯೂ ಹೋಗುತ್ತಿತ್ತು. ಅನುಕರಣೆಯ ಕಾರ್ಯಕ್ರಮವನ್ನು ಕೂಟದ ಮಂದಿ ಅದರಿಂದ ಮಾಡಿಸುತ್ತಲೂ ಇದ್ದರು. ವರುಣ ದೇವನು ಇದರಿಂದ ಹೆಮ್ಮೆಪಡುತ್ತಿದ್ದನು.

ರಾಜಕಾರ್ಯವು ಮುಗಿದ ಮೇಲೆ ವರುಣದೇವನು ಹಿಂತಿರುಗುವ ಮೊದಲು ಅಧಿರಾಜನು ಮುದ್ದುಗಿಳಿಗೆ, ರಹಸ್ಯವಾಗಿ ಸತ್ಕಾರ ಏರ್ಪಡಿಸುತ್ತಿದ್ದನು. ಉಡುಗೊರೆಯನ್ನೂ ಕೊಡುತ್ತಿದ್ದನು. ಸಮುದ್ರದ ಗರ್ಭದಿಂದ ಆರಿಸಿ ತಂದ ಬಸವನಹುಳುಗಳನ್ನೂ, ಮೀನಿನ ಮೊಟ್ಟೆಗಳನ್ನೂ ಉಪ್ಪಿನಕಾಯಿ ಹಾಕಿ, ಸಮುದ್ರರಾಜನ ಅಂತಃಪುರದವರು ಶೇಖರಿಸಿಡುತ್ತಿದ್ದರು. ಅಂತಹ

ಉಪ್ಪಿನಕಾಯಿ ಸಂಪುಟವೊಂದನ್ನು ಮುದ್ದುಗಿಳಿಗೆ ಉಡುಗೊರೆಯಾಗಿ ಕೊಡುವ ಮಾಮೂಲು. ಶುಕದ ನಾಲಿಗೆಯು, ಮಾತನಾಡಿ, ಆಡಿ ಮರಗಟ್ಟಿದಂತಾದಾಗ ಈ ಉಪ್ಪಿನಕಾಯಿಯ ಚೂರೊಂದನ್ನು ತಿಂದರೆ ನಾಲಗೆ ಸ್ವಸ್ಥ ಸ್ಥಿತಿಗೆ ಬರುತ್ತಿತ್ತು. ಆದುದರಿಂದ ಇಂತಹ ಉಪ್ಪಿನಕಾಯಿನ ಲಂಚಕ್ಕೆ ಮುದ್ದುಗಿಳಿಯು ಕೊಕ್ಕನ್ನು ಒಡ್ಡಿಯೇ ಇರುತ್ತಿತು.

ಪಶ್ಚಿಮ ದಿಕ್ಕಿನ ಅಧಿದೇವತೆಯಾದ ವರುಣನ ದಿಕ್‌ಪಾಲನೆಯು ಈ ರೀತಿ ಪುಥಾರಿ ಶುಕದಿಂದ ಸಾಂಗವಾಗಿ ನೆರವೇರುತ್ತಿತ್ತು—ಭೂಲೋಕದ ರಾಜ್ಯಪಾಲನೆಯ ರೀತಿಯಲ್ಲಿಯೇ!

* * * * *

ಅಪ್ಸರಸಿ ಸೌರಭೇಯಿಗೆ ಈಗ ಹುಮ್ಮಸ್ಸು ಕಡಿಮೆಯಾಗಿತ್ತು.

ಬಲು ಉತ್ಸಾಹದಿಂದ ಆಕೆಯು ಕಿಂಪುರುಷರ ರಾಜ್ಯಕ್ಕೆ ಸಾಂಸ್ಕೃತಿಕ ತಂಡದ ನಾಯಕಿಯಾಗಿ ಭೇಟಿ ಇತ್ತಿದ್ದಳು. ಮನುಷ್ಯನ ಮುಖವಿದ್ದ ಹಾಗೂ ಕುದುರೆಯ ದೇಹರಚನೆಯಿದ್ದ ಕಿಂಪುರುಷರು ಸೌರಭೇಯಿಯ ನೃತ್ಯಕ್ಕೆ ಮಾರುಹೋಗಿದ್ದರು. ನೆಲದ ಮೇಲೆ ನಾಲ್ಕೂ ಗೊರಸುಗಳಿಂದ ಚಪ್ಪಾಳೆಯನ್ನು ತಟ್ಟಿ ಆಕೆಯ ಪ್ರಶಂಸೆಯನ್ನು ಮಾಡಿದ್ದರು. ಗೊರಸಿನ ಚಪ್ಪಾಳೆಗೆ ಅನುಗುಣವಾಗಿ ರಾಗರಾಗವಾಗಿ ಸೀಟಿಯನ್ನೂ ಹಾಕಿ ತಮ್ಮ ಒಲವನ್ನು ಬಹಿರಂಗಪಡಿಸಿದ್ದರು. ಕಿಂಪುರುಷರ ಪ್ರಧಾನ ಸಚಿವನಿಗನಕ ಸೌರಭೇಯಿಯ ನೃತ್ಯವು ಕಾವ್ಯವು ಅರಳಿದಂತೆ ಮನೋಹರವಾಗಿ ಕಂಡಿತು. ಮಾನವನ ಮುಖದಿಂದ ಮೆಚ್ಚುಗೆಯನ್ನು ಸೂಚಿಸುವುದು ಅಷ್ಟೇನೂ ಸಮರ್ಪಕವಾಗಿರುವುದಿಲ್ಲ; ಒಡಲು ನುಡಿದಂತೆ ಭಾರಿ ಕೆನೆತದಿಂದಲೇ ಅದು ಸಾಧ್ಯ ಎಂದವನಿಗೆ ಅನಿಸಿತ್ತು. ಆ ಸಂಜೆಯ ಅಧಿಕೃತ ಔತಣ ಕೂಟದಲ್ಲಿ ಅವ ಈ ಮಾತನ್ನು ಸೌರಭೇಯಿಯ ಕಿವಿಗಳಲ್ಲಿ ಉಸುರಿದ್ದ ಹಾಗೂ ಕುದುರೆಯ ದೇಹದಾರ್ಢ್ಯವನ್ನೂ ಕೊಂಡಾಡಿದ್ದ.

ಅಪ್ಸರೆಯ ಬಡಾವಣೆಯಲ್ಲಿ ಹಯಶಾಲೆಯೊಂದಿದೆ. ಆರರಿಂದ ಹದಿನಾರರ ಪ್ರಾಯದ ತನಕ ಅಪ್ಸರೆಯರಿಗೆ ಕುದುರೆಯ ಸವಾರಿಯನ್ನು ಅಲ್ಲಿ ಕಲಿಸುತ್ತಾರೆ. ಸಾಮಾನ್ಯವಾಗಿ ಅಪ್ಸರೆಯ ಬಾಲೆಯರು ಕುದುರೆ ಸವಾರಿಯನ್ನು ಅಷ್ಟಾಗಿ ಮೆಚ್ಚುವುದಿಲ್ಲ. ಆದರೆ ಸೌರಭೇಯಿಯು ವಿಚಿತ್ರ ಸ್ವಭಾವದ ಹೆಣ್ಣು. ಹೊಸತು ಎಂದು ಯಾವದು ಕಂಡರೂ ಒಂದು ಕೈ ನೋಡುವೆ ಎನ್ನುವ ಮನೋಧರ್ಮ. ಹಯಶಾಲೆಯಲ್ಲಿ ಆಕೆ ಅಭ್ಯಾಸ ಮಾಡಿದ್ದಳು. ಪಾರಂಗತೆಯನ್ನೂ ಪಡೆದಿದ್ದಳು. ಲಗಾಮನ್ನೂ ಕೈಯಿಂದ ದೂರಮಾಡಿ, ತೊಡೆಗಳ ಹತೋಟಿಯಿಂದಲೇ ಕುದುರೆಯನ್ನು ಯಶಸ್ವಿಯಾಗಿ ನಡೆಸಿ, ವಾರ್ಷಿಕ ಸ್ಪರ್ಧಾಕೂಟದಲ್ಲಿ ಮೊದಲ ಸ್ಥಾನ ಪಡೆದಿದ್ದಳು. ಅಶ್ವ ಹೃದಯದ ಅರಿವು ಸೌರಭೇಯಿಗೆ ಪೂರ್ಣವಾಗಿ ಇದೆ ಎಂದು ಬಲ್ಲವರು ಅಂದಿದ್ದರು.

ಕಿಂಪುರುಷರ ಪ್ರಧಾನ ಸಚಿವನನ್ನು ನೋಡಿದಾಗ ಸೌರಭೇಯಿಗೆ ಆಸೆಯಾಯಿತು. ಮಿಶ್ರತಳಿಯ ಈ ಕುದುರೆಯ ಸವಾರಿಯನ್ನು ಮಾಡಿದರೆ ಹೇಗಿರುತ್ತೆ? ನೋಡಬೇಕು ಎಂಬ ಆಸೆ. ಕಿಂಪುರುಷನ ಮುಖಕ್ಕೆ ಕಡಿವಾಣವನ್ನು ತೊಡಿಸಿ ಕುದುರೆಯ ಸವಾರಿಯನ್ನು ಮಾಡಬೇಕೆ? ಅಥವಾ ಅವನ ಕತ್ತಿನ ಸುತ್ತ ತನ್ನ ತೋಳನ್ನು ಬಳಸಿ ಹಿಡಿದುಕೊಂಡು ಸವಾರಿಗೈಯಬೇಕೆ? ಎಂಬ ಮೋಜಿನ

ಕುತೂಹಲವು ಅವಳನ್ನು ಕೆರಳಿಸಿತು. ಕಾರಣ ಸಚಿವನು ಜಂಭಕೊಚ್ಚಿಕೊಂಡಾಗ ಈ ಸಂದರ್ಭವನ್ನೇ ಮೀಟುಗೋಲು ಮಾಡಿಕೊಂಡು, ಅವನನ್ನು ಉಬ್ಬಿಸಿ ಎತ್ತಿ ಒಂದು ಸವಾರಿ ಮಾಡುವ ಎಂದುಕೊಂಡಳು. "ನಿಮ್ಮ ದೇಹದಾರ್ಢ್ಯವನ್ನು ನೀವು ಹೊಗಳಿಕೊಳ್ಳುವುದು ಗಂಡಾದ ನಿಮಗೆ ಸ್ವಾಭಾವಿಕ. ಆದರೆ ಹಯಶಾಲೆಯಲ್ಲಿ ಅಭ್ಯಾಸಮಾಡುತ್ತಿದ್ದಾಗ ಉಚ್ಚೈಶ್ರವಸ್ಸಿನ ಮೊಮ್ಮಗಳ ಮೇಲೆ ಸವಾರಿಯನ್ನು ಮಾಡಿದ್ದೆ. ಒಮ್ಮೆ ಅದು ಗಳಿಗೆಗೆ ಯೋಜನದಂತೆ ಓಡಿತು. ನನ್ನನ್ನು ಭದ್ರವಾಗಿ ಮೇಲೆ ಕೂರಿಸಿಕೊಂಡು ಹಂಸತೂಲಿಕಾ ಹೆಲಿಕಾಪ್ಟರಿನಲ್ಲಿ ಯಾನಮಾಡಿದಂತೆ ಆಗ ನನಗನ್ನಿಸಿತ್ತು" ಎಂದು ಸೌರಭೇಯಿ ಹೇಳಿದಳು. ಗಂಡಿನ ಮಮಕಾರವನ್ನು ಇರಿಯಲು ಹೆಣ್ಣಿನ ಜಯಕಾರವನ್ನು ಮಾಡಿದರೆ ಸಾಕು, ಅಲ್ಲವೇ?

ಕಿಂಪುರುಷ ಸಚಿವನಿಗೆ, ತನ್ನ ಮುಖಕ್ಕೆ ತನ್ನ ಬಾಲವೇ ಬಡಿದಂತಾಯಿತು. ಆತ್ಮಾಭಿಮಾನ ಕೆರಳಿತು. "ಈಗಲೇ ಬೇಕಾದರೆ ಹೋಗುವ. ನನ್ನ ಬೆನ್ನ ಮೇಲೆ ನೀನು ಕುಳಿತುಕೋ! ಘಳಿಗೆಗೆ ಯೋಜನಗಳೆರಡರಂತೆ ಧೌಡೋಡಿ ತೋರಿಸುತ್ತೇನೆ. ನನ್ನ ಕೊರಳನ್ನು ಭದ್ರವಾಗಿ ಹಿಡಿದುಕೊಂಡು ಬಿಗಿಯಾಗಿ ನನ್ನ ಬೆನ್ನನ್ನು ಅಪ್ಪಿಕೊಂಡರೆ ಬೀಳುವ ಭಯವಿಲ್ಲ. ಆ ಧೈರ್ಯವಿದ್ದರೆ ಬಾ. ಹತ್ತಿರದಲ್ಲೇ ನಮ್ಮ ವ್ಯಾಯಾಮ ಶಾಲೆಯಿದೆ. ಹೊಸದಾಗಿ ಅಲ್ಲಿ ಓಡುಮಾರ್ಗವನ್ನು ಹಾಸಿದ್ದಾರೆ. ನವ್ಯ ಲಾಳಗಳನ್ನು ಗೊರಸುಗಳಿಗೆ ಮೊನ್ನೆ ಮೊನ್ನೆ ತೊಡಿಸಿಕೊಂಡಿದ್ದೇನೆ. ಕೆಚ್ಚಿದ್ದರೆ ಬಾ" ಎಂದ.

ಹೀಗೆ ಕಿಂಪುರುಷನು ಅನ್ನಲಿ ಎಂದೇ ಸೌರಭೇಯಿಯ ಆಟ ಕಟ್ಟಿದ್ದಳು. ಸೈ ಅಂದಳು.

ಇಬ್ಬರೂ ವ್ಯಾಯಾಮ ಶಾಲೆಯತ್ತ ಬೆಳದಿಂಗಳ ಆ ರಾತ್ರಿಯಲ್ಲಿ ನಡೆದಿದ್ದರು. ವ್ಯಾಯಾಮಶಾಲೆಯ ಭಾರೀ ಅಂಗಳದಲ್ಲಿ ನಾಲ್ಕು ಯೋಜನೆಗಳ ಓಡುಮಾರ್ಗವಿತ್ತು. ಕಿಂಪುರುಷನ ಮಂಡಿಗಳೂರಿದಾಗ ಸೌರಭೇಯಿಯು ಅವನ ಬೆನ್ನೇರಿದಳು. "ಜಯ್, ಜಯೇಂದ್ರ" ಎಂದವಳು ಘೋಷಿಸಿದಾಗ ಕಿಂಪುರುಷನು ನಾಗಾಲೋಟದಿಂದ ಧಾವಿಸಿದ. ಘಳಿಗೆಯೊಂದರಲ್ಲಿ ಎರಡು ಯೋಜನೆಗಳನ್ನು ಓಡಿದ್ದ. ಅಲ್ಲಿ ನಿಂತ. ಪಕ್ಕದಲ್ಲೆ ವ್ಯಾಯಾಮಶಾಲೆಯ ವಿಶ್ರಾಂತಿ ಗೃಹವಿತ್ತು. ಗೊರಸುಗಳನ್ನು ತುರಿಸಿ ತೊಳೆದುಕೊಳ್ಳುವ ಎಂದು ಅಲ್ಲಿಗೆ ಹೋಗಲು ಅವ ನಿರ್ಧರಿಸಿದ್ದ.

ಓಡಿ ನಿಂತ ಸೌರಭೇಯಿಯು ಛಂಗಂತ ಹಾರಿ ಇಳಿದಳು. "ನೀನಂದಿದ್ದು ದಿಟ ಸಚಿವೋತ್ತಮ. ಉಚ್ಚೈಶ್ರವಸ್ಸಿನ ಮೊಮ್ಮಗಳನ್ನು ನಿನ್ನ ಎದುರಿಗೆ ನೀವಾಳಿಸಬೇಕು. ಬಿಗಿಯಾಗಿ ನಿನ್ನನ್ನು ಹೆಬ್ಬಾವಿನಂತೆ ನಾನು ಅಪ್ಪದೆ ಇದ್ದಿದ್ದರೆ, ನಿನ್ನ ಕೊರಳನ್ನು ತೋಳುಗಳಿಂದ ಬಳಸಿ ಭದ್ರವಾಗಿ ಹಿಡಿದುಕೊಳ್ಳದೆ ಇದ್ದಿದ್ದರೆ, ಎಲ್ಲಿಯೋ ಬಿದ್ದುಹೋಗುತ್ತಿದ್ದೆ ವೇಗದ ಸವಾರಿಯಿಂದ ಮನಸ್ಸು ಉದ್ವೇಗಗೊಂಡು ಅತಿ ಹರ್ಷವಾಗುತ್ತಿತ್ತು. ನಾಗಾಲೋಟದ ಬಡಿತವು ಒಡಲಿಗೂ ತಟ್ಟಿ ಹಗೂರಾಯಿತು. ನಿನಗೆ ದಣಿವಾಗುತ್ತಿಲ್ಲವೇ?" ಎಂದು ಆಹ್ಲಾದದ ಅಚ್ಚರಿಯಿಂದ ಕೇಳಿದಳು. ಅನುರಾಗದ ಛಾಯೆಯೂ ಅವಳ ಮುಖಕಮಲದ ಮೇಲೆ ಸುಳಿದಾಡುತ್ತಿತ್ತು.

"ಅಂತಹ ದಣಿವೇನೂ ಆಗಿಲ್ಲ. ಇಂತಹ ಸವಾರಿಯು ದೊರಕಿದರೆ ಇನ್ನೂ ಅಷ್ಟು ದೂರ ಓಡಬಲ್ಲೆ. ಆದರೂ ವಿಶ್ರಾಂತಿ ಗೃಹಕ್ಕೆ ಹೋಗಿ ಗೊರಸು ಒರೆಸಿಕೊಳ್ಳುತ್ತೇನೆ. ನೀನೂ ಬಂದು ದಣಿವಾರಿಸಿಕೋ" ಎಂದಂದ.

ವಿಶ್ರಾಂತಿಗೃಹದತ್ತ ಅವ ನಡೆದ. ಅವನ ಹಿಂದೆಯೇ ತಲೆಯನ್ನು ಬಾಗಿಸಿ ನಾಚಿಕೆಯ ಹೆಜ್ಜೆಗಳನ್ನು ಇಡುತ್ತ ಸೌರಭೇಯಿಯೂ ನಡೆದಳು. ಬೆಳದಿಂಗಳಿನಲ್ಲಿ ಯಾರೂ ಇರದ ಆ ವಿಶ್ರಾಂತಿ ಗೃಹವು, ಕಾಂತಕಾಂತೆಯರ ಏಕಾಂತತೆಗೆ ಆಪ್ಯಾಯಮಾನವಾಗಿತ್ತು.

* * * * *

ಸಾಂಸ್ಕೃತಿಕ ಭೇಟಿಯು ಪೂರೈಸಿದ ಬಳಿಕ ಸೌರಭೇಯಿಯು ಅಪ್ಸರಿಯ ಬಡಾವಣೆಯಲ್ಲಿನ ತನ್ನ ಮಹಲಿಗೆ ಹಿಂತಿರುಗಿದ್ದಳು. ಹಂಸತೂಲಿಕಾ ಹೆಲಿಕಾಪ್ಟರಿನಿಂದ ಇಳಿದ ಮೇಲೆ ಮಹಲಿಗೆ ಹತ್ತು ಹೆಜ್ಜೆಗಳು ನಡೆದು ಬರುವಾಗ ಆಕೆಯ ಕಾಲುಗಳು ಛಳುಕುತ್ತಿದ್ದುವು. ಮಾನಸಿಕ ಹುಮ್ಮಸ್ಸೂ ಇಳಿದುಹೋಗಿತ್ತು. ಮುಂದೆ ಸುಸೂತ್ರವಾಗಿ ನೃತ್ಯಮಾಡಲು ಸಾಧ್ಯವಿರುವುದಿಲ್ಲವೇನೋ ಎಂಬ ಕಾತರತೆಯೂ ಮನಸ್ಸನ್ನು ಕಾಡುತ್ತಿತ್ತು. ಆದರೂ ಅಶ್ವಿನೀ ದೇವತೆಗಳಿದ್ದಾರೆ. ಎಂತೆಂತಹ ಬೇನೆಗಳನ್ನೆಲ್ಲ ಬಿಡಿಸಿದ್ದಾರೆ, ಎಂಬ ಧೈರ್ಯವೂ ಇತ್ತು.

ಅಶ್ವಿನಿಕುಮಾರರ ದವಾಖಾನೆಯೊಳಕ್ಕೆ ಸೌರಭೇಯಿಯು ಪ್ರವೇಶಿಸಿದಾಗ ಅಶ್ವಿನೀಕುಮಾರರು ಅವಳ ನಡಿಗೆಯನ್ನು ವೀಕ್ಷಿಸಿದರು. ನೃತ್ಯಪಟುವಾದ ಈಕೆ, ಈಗೇಕೆ ಕೊಕ್ಕರಗಾಲನ್ನು ಹಾಕುತ್ತಿದ್ದಾಳೆ ಎಂದು ಯೋಚಿಸಿದರು. ಪರಸ್ಪರ ವಂದನೆಗಳಾದ ಮೇಲೆ ಸೌರಭೇಯಿಯು ಕಿಂಪುರುಷರ ರಾಜ್ಯಕ್ಕೆ ಸಾಂಸ್ಕೃತಿಕ ಭೇಟಿ ಕೊಟ್ಟಿದ್ದಳೆಂಬುದು ತಿಳಿದಾಗ, ಅಪ್ಸರೆಯ ಬೇನೆಯ ಅರಿವು ಸುಲಭವಾಗಿ ತಿಳಿಯಿತು. ಕಾರಣ ಅಶ್ವಿನೀ ಕುಮಾರರು ದೀರ್ಘ ಪರೀಕ್ಷೆಯನ್ನು ಕೈಗೊಳ್ಳಲಿಲ್ಲ. ಅವಳಿ ವೈದ್ಯರಿಬ್ಬರೂ ಸ್ವಭಾವದಿಂದಾಗಿ ರಸಿಕರು. ಆದರೂ ಅವರ ಕಾರ್ಯಕ್ಷೇತ್ರದಲ್ಲಿ ಬಳಿಗೆ ಬರುವವರೆಲ್ಲರೂ ಬೇನೆ ಬಿದ್ದವರು, ಅಂಗವಿಕಲರು, ಸಂಗ ದೋಷಿಗಳು, ಹಾಗಾಗಿ ತಮ್ಮ ಕಾಯಕದ ಪವಿತ್ರತೆಯನ್ನು ಯಶಸ್ವಿಯಾಗಿ ಕಾಪಾಡಿಕೊಂಡು ಬಂದಿದ್ದರು.

ಸೌರಭೇಯಿಯ ಕುಂಟುವಿಕೆಯು ಯಾವ ಕೌತುಕವನ್ನೂ ಅವರಲ್ಲಿ ಉಂಟು ಮಾಡಲಿಲ್ಲ. ನಿರ್ವಿಕಾರರಾಗಿದ್ದ ಅವರು ಚಿಕಿತ್ಸೆಯನ್ನು ಸೂಚಿಸಿದರು.

“ಮಗಳೇ! ನಾರೀತೀರ್ಥವೆಂಬ ಸರಸ್ಸು ಎಲ್ಲಿದೆಯೆಂಬುದು ನಿನಗೆ ತಿಳಿದೇ ಇದೆ. ಆ ತೀರ್ಥವು ಗಿಡಮೂಲಿಕಾ ಔಷಧಿಗಳಿಂದ ಪರಿವೃತವಾಗಿರುತ್ತದೆ. ಸರಸ್ಸಿನ ನೈರುತ್ಯದ ಅಂಚಿನಲ್ಲಿ ಕೇಗೆವನವಿದೆ. ಆ ವನದಲ್ಲಿ ಕುಂಕುಮವರ್ಣದ ಹೂವುಗಳಿರುವ ಹಸಿರು ಬಳ್ಳಿಗಳು ಹಬ್ಬಿಕೊಂಡಿವೆ. ಸರಸ್ಸಿನಲ್ಲಿ ಝುಳಕಮಾಡಿ ಏಕಾಂತವಾಗಿ ಆ ಬಳ್ಳಿಗಳಿರುವ ತಾಣಕ್ಕೆ ನಡೆದು ಹೋಗು. ಆ ಬಳ್ಳಿಗಳ ರಸವನ್ನು ಈ ರೀತಿಯಲ್ಲಿ ಹಿಂಡಿ ತೆಗೆಯಬೇಕು. ವಕ್ಷಸ್ಥಳಕ್ಕೆ ಹಸಿರು ತಗುಲಿದರೆ ಹೇಗೆ ಎಂಬ ಸಂಶಯವು ಬೇಡ. ನಂತರ ಆ ರಸವನ್ನು ಈ ರೀತಿ ಈ ರೀತಿ ಲೇಪಿಸಿಕೊಳ್ಳಬೇಕು. ಸ್ವಲ್ಪ ಹೊತ್ತು ಸೂರ್ಯದೇವನ ಕಿರಣಗಳಲ್ಲಿ ಲೇಪನೆಯು ಒಣಗುವಂತೆ ಧ್ಯಾನ ಮಾಡುತ್ತ ನಿಂತಿರು. ಲೇಪನವು ಪಟ್ಟುಗಟ್ಟಿ ಕಟ್ಟಿದಂತೆ ಆದಾಗ ತುಸುಕಾಲ ಮೆಲ್ಲಮೆಲ್ಲನೆ ಓಡಾಡು. ಹೇಗೂ ಬೇಗ ಬೇಗ ಓಡಾಡಲು ಆಗ ಸಾಧ್ಯವಿರುವುದಿಲ್ಲ. ನಂತರ ಶುಭ್ರಸ್ನಾನ ಮಾಡು. ಅಪರಾಹ್ಣದ ಹೊತ್ತಿಗೆ ಬೇನೆಯೆಲ್ಲ ಪರಿಹಾರವಾಗಿರುತ್ತದೆ. ವಿಕಲತೆಯೆಲ್ಲಾ ಸಕಲತೆಯಾಗಿರುತ್ತದೆ. ದೋಷ ವಿಮೋಚನೆಯೂ ಆಗಿರುತ್ತದೆ.

"ಆದರೆ ಒಂದು ಎಚ್ಚರಿಕೆಯ ನುಡಿಯನ್ನು ನಾವು ಹೇಳಲೇಬೇಕು. ಬಳ್ಳಿಗಳ ರಸವನ್ನು ಲೇಪಿಸಿಕೊಂಡು ಸೂರ್ಯನಾರಾಯಣನಿಗೆ ಪ್ರದರ್ಶಿಸಿದಾಗ, ಒಂದು ತೆರನಾದ ಹರಿತವಾದ ಪರಿಮಳವು ಹೊರಸೂಸುತ್ತದೆ. ದಿಙ್ಮಂಡಲಗಳನ್ನು ಆ ಪರಿಮಳವು ಆವರಿಸುತ್ತದೆ. ದಿಕ್ಪಾಲಕನಾದ ವರುಣದೇವನಿಗೆ ಆ ಪರಿಮಳವು ಉನ್ಮಾದವನ್ನು ಮೂಡಿಸಿದ ನಿದರ್ಶನಗಳುಂಟು. ಹಾಗೇನಾದರೂ ಆದರೆ, ಅವ ಮಿಂಚಿನೋಪಾದಿಯಲ್ಲಿ ಸಮರಕನ ಬಾಣಾಹತನಾಗಿ, ನೀನಿದ್ದಲ್ಲಿಗೆ ಬರುತ್ತಾನೆ. ಅವನನ್ನು ಶಮನಮಾಡಲು ಅಷ್ಟು ಸುಲಭವಲ್ಲ. ಆದರೂ ನೀನು ಜಾಣೆ; ಎಳೆಯವಯಸ್ಸಾದರೂ ಅನುಭವಸ್ಥೆ. ಆದುದರಿಂದ ಎಚ್ಚರಿಕೆಯನ್ನು ಪೂರ್ವೋಚಿತವಾಗಿ ವಹಿಸು. ಧನ್ವಂತರಿಯು ನಿನಗೆ ಮಂಗಳವನ್ನುಂಟು ಮಾಡಲಿ. ಹೇಗೂ ನೀನೂ ಧನ್ವಂತರಿಯೂ ಹನ್ನೊಂದರಲ್ಲಿ ಬಿದ್ದು ಬಂದವರು" ಎಂದು ನುಡಿದರು.

ಅವಳಿವೈದ್ಯರ ಆಣಗತಿಗನುಸಾರವಾಗಿ, ಸೌರಭೇಯಿಯು, ರಹಸ್ಯವಾಗಿ ನಾರೀತೀರ್ಥಕ್ಕೆ ಕರೆದಳು. "ಯಾತ್ರಾರ್ಥವಾಗಿ ಹೋಗಿ ಬರುತ್ತೀನಿ, ಕಣ್ರೆ" ಎಂದು ತನ್ನ ಸಖಿಯರಿಗೂ ಮತ್ತು ಸೋದರ ಅಪ್ಸರೆಯರಿಗೂ ಹೇಳಿ ಹೊರಟಳು. ನಾರೀತೀರ್ಥದ ಬಳಿಗೆ ಬಂದಳು. ಸೂರ್ಯೋದಯದ ಹೊತ್ತಿಗೆ ಸಚೇಲ ಸ್ನಾನಮಾಡಿ ತೋಯ್ದ ವಸನಗಳನ್ನು ತೆಗೆದಿರಿಸಿದಳು. ನಂತರ ನೈರುತ್ಯದ ಅಂಚಿನತ್ತ ನಡೆದು ಹೋಗಿ ಕುಂಕುಮವರ್ಣದ ಪುಷ್ಪಗಳಿದ್ದ ಬಳ್ಳಿಗಳನ್ನು ಕಂಡಳು. ಎರಡೂ ಕೈಗಳ ತುಂಬ ಅದರ ಎಲೆಗಳನ್ನು ಬಿಡಿಸಿ, ಅಶ್ವಿನಿ ದೇವತೆಗಳು ಹೇಳಿದ ರೀತಿಯಲ್ಲಿ ವಕ್ಷ ಸ್ಥಳದಲ್ಲಿಟ್ಟಳು. ನಂತರ ಹಿಂಡಿದಳು. ತುಸು ಪ್ರಯಾಸದಿಂದಲೇ ಹಸಿರು ರಸವು ಉತ್ಪನ್ನವಾಗಿ ಹರಿದು ಬಂದುದನ್ನು ಕಂಡು, ಪರವಾಗಿಲ್ಲ ಸೊಂಟದಾಚೆ ತುಸು ಊನವಾದರೂ, ಸೊಂಟದ ಈಚೆ ಕಂಚಿನಂತೆಯೆ ಉಳಿದಿದೆ ಎಂದು ಹಿಗ್ಗಿದಳು. ಸಲಹೆಯಿತ್ತ ರೀತಿಯಲ್ಲಿ ತುಸು ಗಾಢವಾಗಿಯೇ ಲೇಪಿಸಿಕೊಂಡಳು. ಹೇಗೊ ಇಷ್ಟು ರಸವು ಹರಿದು ಬಂದಿದೆ. ಏಕೆ ವ್ಯರ್ಥಮಾಡಬೇಕು ಎಂದಂದುಕೊಂಡು, ನಂತರ ಎರಡೂ ತೋಳುಗಳನ್ನು ಸವಿತುರ್ವರೇಣ್ಯನಿಗೆ ನಮಸ್ಕರಿಸುತ್ತ "ದೀನಬಂಧು! ಲೇಪಣವನ್ನು ವಿಧಿವತ್ತಾಗಿ, ವೈದ್ಯೋನಾರಾಯಣೋ ಹರೀ ಎಂದನ್ನುತಾ ಹಚ್ಚಿಕೊಂಡಿದ್ದೇನೆ. ನಿನ್ನ ಅನುಗ್ರಹದಿಂದ ಅದು ಬಿಗಿದು ಪಟ್ಟಾಗಬೇಕು. ಯಶಸ್ವಿಯಾಗಿ ಹಾಗಾದಾಗ, ನಾನೂ ರೋಗವಿಮೋಚನೆಗಳಾಗುತ್ತೇನೆ;" ಎಂದು ಮೈ ಆಳದಿಂದ ಪ್ರಾರ್ಥಿಸಿದಳು. ಪಂಚಾಗ್ನಿಗಳ ಮಧ್ಯೆ ನಿಷ್ಠೆಯಿಂದ ತಪಸ್ಸನ್ನು ಗೈಯ್ಯುವ ಮುನಿಪುಂಗವನಂತೆ ನಿಂತಳು. ದಂಡೆತ್ತಿ ಬಂದಂತೆ ಸೂರ್ಯನ ಕಿರಣಗಳು ಕಂತೆಕಂತೆಯಾಗಿ ಇಳಿದುಬಂದು ಸೌರಭೇಯಿಯನ್ನು ಮುತ್ತಿದುವು. ಮೈಯೆಲ್ಲವನ್ನೂ ಕಾಯಿಸಿದವು. ಸೌರಭೇಯಿಯು ತನ್ನ ನಿಲುವನ್ನು ಅದಲುಬದಲು ಮಾಡಿ ಏರುಪೇರು ಮಾಡಿ ಸೂರ್ಯನ ಕಿರಣಗಳಿಗೆ ನೇರವಾಗಿ ಸಂಪರ್ಕ ದೊರಕುವಂತೆ ಮೈಯ ಎಲ್ಲ ಭಾಗಗಳನ್ನೂ ಮೂಲೆ ಮೂಲೆಗಳನ್ನೂ ಮುಂದು ಮಾಡಿದಳು. ಲೇಪವು ಒಣಗಿ ಬಿಗಿಯಾಗಹತ್ತಿತ್ತು. ಇನ್ನೊಂದು ಹತ್ತು ಉರುಳುಸೇವೆಯನ್ನು ಚಿತ್ರವಿಚಿತ್ರವಾದ ಭಂಗಿಗಳಲ್ಲಿ ಸೂರ್ಯದೇವನ ಎದುರಿಗೆ ಹಾಕಿದರೆ ಚಿಕಿತ್ಸೆಯು ಯಶಸ್ವಿಯಾಗಿ ಪೂರೈಸುತ್ತದೆ ಎಂದು ಸೌರಭೇಯಿ ಅಂದುಕೊಂಡಳು. ಹಸಿರಿನ ಲೇಪವು ಒಣಗಹತ್ತಿದಂತೆಲ್ಲ ಹರಿತವಾದ ಪರಿಮಳವೇನೋ ಹರಡತೊಡಗಿತ್ತು. ಸಕಲ ದಿಕ್ಕುಗಳಿಗೂ ಈ ಪರಿಮಳವು ಹರಡುವಷ್ಟು ಹೊರ ಹೊಮ್ಮುತ್ತಿಲ್ಲ ಎಂದುಕೊಂಡಳು.

"ಬಂದೇ, ನಾನು ಬಂದೇಬಿಟ್ಟೆ" ಎಂಬ ಶುಕವಾಣಿ ಆಗ ಕೇಳಿಸಿತು. ಮಾತನಾಡುವ ಮುದ್ದುಗಿಳಿಯು ಇಲ್ಲಿಗೆ ಏತಕ್ಕೆ ಬರುತ್ತಿದೆ? ಅರಮನೆಯ ಅಂತಃಪುರಗಳಲ್ಲಿ ಸ್ವರ್ಣಪಂಜರದಲ್ಲಿ ರಮಿಸಬೇಕಾದ ಶುಕವು ವನಪ್ರದೇಶಕ್ಕೆ ಹೇಗೆ ಬಂತು? ಅದರ ಒಡತಿಯು ವನವಿಹಾರಕ್ಕೆ ಎಂದು ತನ್ನವರನ್ನೊಡಗೂಡಿ ಇಲ್ಲಿಗೆ ಬಂದಿರಬಹುದೇ? ಹಾಗಾದರೆ ನನ್ನ ಈ ಶೈಶವಾಸ್ಥೆಯ ಸ್ಥಿತಿಯಲ್ಲಿ ಅವರ ಕಣ್ಣಿಗೆ ಬಿದ್ದರೆ ನಾಚಿಕೆಗೇಡಲ್ಲವೇ? ಈಗೇನು ಮಾಡಲಿ, ಚಿಕಿತ್ಸೆಯು ಪೂರೈಸಬೇಕಾದರೆ ಇನ್ನೂ ಸ್ವಲ್ಪ ಕಾಲವಾಗಬೇಕು. ಇಷ್ಟರಲ್ಲೇ ಯಾರೋ ಬರಬಹುದು ನೋಡಬಹುದು ಎಂದು ಹೆದರಿ ವಸ್ತ್ರಗಳನ್ನು ತೊಟ್ಟರೆ ಚಿಕಿತ್ಸೆಯು ಹ್ರಸ್ವವಾಗುತ್ತದೆ. ನನ್ನ ಆರೋಗ್ಯವೇ ಮುಖ್ಯ. ನಾಚಿಕೆ, ಲಜ್ಜೆ ಇದೆಲ್ಲವೂ ನಾನು ಆರೋಗ್ಯವಾಗಿದ್ದರೆ, ಶೋಭಿಸುವ ಕೆನ್ನೆಗೆಂಪುಗಳು. ಆದಕಾರಣ ಚಿಕಿತ್ಸೆಯು ಮುಗಿಯುವ ತನಕ ಹೀಗೆಯೇ ಇರುತ್ತೇನೆ ಎಂದು ನಿರ್ಧರಿಸಿದಳು.

"ಬಂದೇ ನಾನು ಬಂದೇ ಬಿಟ್ಟೆ" ಶುಕವಾಣಿಯು ತಿರುಗಿ ಹತ್ತಿರದಲ್ಲೇ ಕೇಳಿಸಿತು. ಲೇಪವು ಆ ವೇಳೆಗೆ ಭರ್ಜರಿಯಾಗಿ ಬಿಗಿದು ಅಪ್ಪಿಕೊಂಡಿತ್ತು: ಈಗ ಶುಭ್ರಸ್ನಾನವನ್ನು ಮಾಡಬಹುದು ಎಂದುಕೊಂಡಳು. ಸರಸ್ಸಿನ ಬಳಿಗೆ ಹೋಗಲು ಕಾಲೊಂದನ್ನು ಡೊಂಕು ಎತ್ತಿದಳು.

ಆ ಹೊತ್ತಿಗೆ ಸರಿಯಾಗಿ ವರುಣ ದೇವನು ಪ್ರತ್ಯಕ್ಷನಾದ. ಅವನ ಬಲತೋಳಿನ ಮೇಲಿದ್ದ ಮುದ್ದುಗಿಳಿಯು ಸೌರಭೇಯಿಯನ್ನು ಕಂಡು ಅರಕ್ಷಣ ಮೂಕವಾಗಿದ್ದರೂ, ಬೇಗ ಚೇತರಿಸಿಕೊಂಡು "ಬಂದೇ ಬಿಟ್ಟೆ" ಎಂದು ಉಲಿಯಿತು.

ದಿವ್ಯದರ್ಶನವನ್ನು ಕಂಡ ವರುಣದೇವನು ಅರೆಕ್ಷಣ ಮೂಕನಂತಿದ್ದ. ಎಚ್ಚರಗೊಳಿಸಿ ತನ್ನನ್ನು ಯಮಪಾಶದಂತೆ ಹಿಡಿದು ಸೆಳೆದುತಂದಿದ್ದ ಆ ಪರಿಮಳವನ್ನು ಅಭಿನಂದಿಸಿದ. ನಂತರ ನುಡಿದ "ಪಶ್ಚಿಮದ ದಿಕ್ಪಾಲಕ ನಾನು, ವರುಣದೇವನೆಂಬ ನಾಮಧೇಯ, ನಿನ್ನ ಹೆಸರೇನು ಸೌಂದರ್ಯರಾ.ಶಿ., ನಿನ್ನ ಮನೆಯೆಲ್ಲಿಹುದು ಮೋಹನಾಂಗಿ, ನೀನಿಲ್ಲಿ ಏಕಾಂಗಿಯಾಗಿ ಏಕಿರುವೆ, ಸಕಳಕಳಾಪರಿ ಪೂರ್ಣೇ" ಎಂದು ಕಾವ್ಯಶೈಲಿಯಲ್ಲಿ ತೊದಲುನುಡಿದ.

ವರುಣದೇವನು ಮಾತನಾಡಿದನೆಂದರೆ ತುಂತುರ ಹನಿ ಬಿದ್ದಂತೆ. ಲೇಪದಿಂದ ಬಿಸಿಗೊಳ್ಳುತ್ತಿದ್ದ ಹಾಗೂ ತುಸು ಬಿಗಿದಿದ್ದ ಸೌರಭೇಯಿಯ ಮೈಮೇಲೆ ತುಂತುರು ಹನಿಗಳು ಬಿದ್ದಂತಾಯಿತು. ನುಡಿದ ಮಾತುಗಳನ್ನು ಕೇಳಿದಾಗ ಎಷ್ಟು ಹಿತವಾಯಿತೋ ಅಷ್ಟು ಖುಷಿಯಾಯ್ತು. ತುಂತುರು ಹನಿಗಳು ಹಗೂರಾಗಿ ಬಿದ್ದಾಗ, ಮನದಲ್ಲಿ ಬೆಳದಿಂಗಳು ತುಂಬಿದಂತಾದಾಗ ಹೆಣ್ಣಿನ ಶಿರವು ತೆನೆಭರಿತ ಗಿಡದಂತೆ ಬಾಗುತ್ತದೆ. ಬಾಗಿದ ಮುಖದಲ್ಲಿ ಕಾಮನಬಿಲ್ಲಿನ ಸೌಂದರ್ಯ ಮಿನುಗುತ್ತದೆ. ಈಗ ಸೌರಭೇಯಿಗೆ ಹಾಗಾಯಿತು, ಕಣ್ಣಂಚುಗಳಿಂದ ವೀಕ್ಷಿಸುತ್ತ ಅವಳು ಮೆಲುದನಿಯಲ್ಲಿ ಬಿನ್ನೈಸಿಕೊಂಡಳು.

"ದೇವಾ! ದಿಕ್ಪಾಲಕ! ಅಪ್ಸರಸಿಯರಲ್ಲಿ ನಾನೊಬ್ಬ ಅನಾಮಧೇಯಳಾದವಳು. ತಾಯಿಯಿಟ್ಟ ಹೆಸರು ಸೌರಭೇಯಿ ಎಂದು. ತಂದೆ ಯಾರೋ, ಅವರೇನೆಂದು ಕರೆಯುತ್ತಿದ್ದರೋ ನಾನರಿಯೆ. ಅಶ್ವಿನಿಕುಮಾರರ ಆಣತಿಯಂತೆ ಚಿಕಿತ್ಸೆಗಾಗಿ ಇಲ್ಲಿಗೆ ಬಂದೆ. ಚಿಕಿತ್ಸೆಯ ಕಾರ್ಯಕ್ರಮವು ಸಾಂಗವಾಗಿ ಮುಗಿದಿದೆ, ಈಗ ಶುಭ್ರಸ್ನಾನಕ್ಕೆ ಹೋಗುವ ಎಂದಿದ್ದೆ ಅಷ್ಟರಲ್ಲಿ ದೇವರ ಆಗಮನವಾಯಿತು" ಎಂದು ನುಡಿದಳು.

ಅಪ್ಸರಸಿಯರ ಬಡಾವಣೆಯಲ್ಲಿ, ಎಲ್ಲ ಮಹಲುಗಳೂ ದಿಕ್ಪಾಲಕರಿಗೆ ಓಪನ್ ಹೌಸ್ ಇದ್ದಂತೆ. ಅಲ್ಲಿ ದಿಕ್ಪಾಲಕರಿಗೆ ಪ್ರವೇಶ ಸ್ವಾತಂತ್ರ್ಯವುಂಟು. ಬಾಲ್ಯದಿಂದಲೂ ಈ ಕಟ್ಟಳೆಯನ್ನು ಅಪ್ಸರಸಿಯರು ಕಲಿತಿರುತ್ತಾರೆ. ಆದ ಕಾರಣ ಸೌರಭೇಯಿಯು ಸಕಲ ಮರ್ಯಾದೆಯಿಂದ ಒಡೆಯನನ್ನು ಕಂಡಾಗ ನುಡಿದು ನುಡಿದಂತೆಯೇ ನಡೆದುಕೊಂಡಿದ್ದಳು.

ಬಾಲ್ಯದಲ್ಲಿ ಕಂಡಾಗ ಇದ್ದಂತೆಯೇ ಬಲಿತಮೇಲೂ ಅಪ್ಸರೆಯರು ಇರುತ್ತಾರೆಯೇ? ಶತಮಾನಗಳಾದರೂ ಮಾನವರಲ್ಲಿ ಕಾಣಲಾಗದ ಪ್ರಗತಿಯನ್ನು, ಅಪ್ಸರೆಯರ ಷೋಡಶ ವರ್ಷಗಳ ಪ್ರಗತಿಯಲ್ಲಿ ಕಾಣಬಹುದು. ಹಾಗಾಗಿ ಮರಣದೇವನು ಚಕಿತನಾಗಿದ್ದನು. ಅದೂ ಅಲ್ಲದೆ ಒಣಗುತ್ತಿರುವ ಹಸಿರು ಲೇಪದ ಪರಿಮಳವು. ವರುಣದೇವನಲ್ಲಿ ಅವ್ಯಕ್ತವಾಗಿದ್ದರೂ ಇದ್ದೇ ಇದ್ದ ಶ್ವಾನದಂಶವನ್ನು ಹೊಡೆದು ಎಬ್ಬಿಸಿತು. ಅಂದ ಮೇಲೆ ವರುಣದೇವನು ಸ್ವತಃ ತಾನೇ ಸೌರಭೇಯಿಗೆ ಶುಭ್ರಸ್ನಾನವನ್ನು ಮಾಡಿಸಲು ತೊಡಗಿದ ಎಂದು ಹೇಳಬೇಕಾದ ಪ್ರಮೇಯವೇ ಇಲ್ಲ.

ವರುಣನು ಮೆಲುನುಡಿದಾಗ ತುಂತುರು ಹನಿಗಳು ಬೀಳುತ್ತದೆ. ಅವನು ಒಲವಿನಿಂದ ಗುಟುರಿದಾಗ ಭಾರಿ ಮಳೆಯೇ ಬೀಳುತ್ತದೆ. ಜಲಪಾತದ ಅಡಿಯಲ್ಲಿ ನಿಂತು ಭೋರ್ಗರೆಯುತ್ತ ಬೀಳುವ ಜಲರಾ.ಶಿ.ಯಲ್ಲಿ ಮಿಂದರೆ ಯಾವ ರೀತಿಯಲ್ಲಿ ಮೈ ಕೈಯ ನೋವುಗಳೆಲ್ಲವೂ ಮಾಯವಾಗುತ್ತದೋ, ಅದೇ ರೀತಿಯಲ್ಲಿ ಸೌರಭೇಯಿಯ ಶುಭ್ರಸ್ನಾನವು ನಿಂತಲ್ಲೇ ಮುಗಿಯಿತು. ನಾರೀ ತೀರ್ಥದ ಸರಸ್ಸಿನಲ್ಲಿ ಮೀಯುವುದಕ್ಕಿಂತ ಹೆಚ್ಚು ಹಿತವಾಗಿತ್ತು. ಪರ್ಜನ್ಯ ಸ್ನಾನ. ಪರ್ಜನ್ಯಾಧಿಪತಿಯೇ ಒಲಿದಾಗ, ಸಕಲ ಹಿತಸಾಧನೆಯೂ ಆಗಲೇಬೇಕಲ್ಲ! ಅಲೌಕಿಕವಾದ ಮಳೆಯಲ್ಲಿ ಶುಭ್ರಸ್ನಾನ ಗೈಯುತ್ತಿರುವ ಅಪ್ಸರಸಿ ಕುವರಿಯನ್ನು ಕಂಡು ಮುದ್ದುಗಿಳಿಯು

"ಮಳೆ ಬಂತು, ಮಳೆ ಬಂತು, ಮರೆಮಾಚಿಕೊಳ್ಳಿ" ಎಂದು ಹುಚ್ಚೆದ್ದು ಮಡಿಯಲಾರಂಭಿಸಿತು. ಹಿರಿಯ ನಾವಿಕರ ಸಂಪರ್ಕವು ಈಗ ಅದಕ್ಕೆ ಅನುಕೂಲಸಿಂಧುವಾಗಿತ್ತು.

ಸಮಯೋಚಿತವಾಗಿ ಶುಕವಾಣಿಯು ನುಡಿದಿದ್ದನ್ನು ಕೇಳಿ ಸೌರಭೇಯಿಯು ಪ್ರಫುಲ್ಲಳಾದಳು. ವರುಣದೇವನ ಸೇವೆಯನ್ನು ಮಾಡಲು ಆಕೆಗೆ ಅಮಿತ ಉತ್ಸಾಹ ಉಂಟಾಯಿತು. ಕ್ಷಣಾರ್ಧದಲ್ಲೇ ಆಕೆಗೆ ಅರಿವಾಗಿತ್ತು; ಅಶ್ವಿನಿ ಕುಮಾರರ ಚಿಕಿತ್ಸೆ ಯಶಸ್ವಿಯಾಯಿತು ಎಂಬುದು. ಕಾರಣ ಯಾವ ಭಯವೂ ಇಲ್ಲದೆ ತುಂಬಿದೆದೆಯಿಂದ ದೇವಪೂಜೆಯನ್ನು ನಡೆಸಿದಳು.

ಮಳೆಯನ್ನು ಅನುಗ್ರಹಿಸಿದ ನಂತರ ಮೋಡದ ಪರಿಸ್ಥಿತಿ ಹೇಗಿರುತ್ತೆ. ಹಾಗಾಯಿತು ವರುಣದೇವನ ಸ್ಥಿತಿ, ಪರ್ಜನ್ಯದಿಂದ ಶುಭ್ರಸ್ನಾನವನ್ನು ಮಾಡಿಸಿದ ಮೇಲೆ. ಹಸಿರುಲೇಪದ ಪರಿಮಳವೂ ನೀರುಪಾಲಾಗಿ ನಾರೀತೀರ್ಥವನ್ನು ಕೂಡಿತು. ಹಾಗಾಗಿ ವರುಣದೇವನನ್ನು ಕೆದಕಲು ಯಾವುದೂ ಉಳಿದಿರಲಿಲ್ಲ. ಕೈವಲ್ಯ ಸೇರಿದವನಂತೆ ಅಮಿತಾನಂದಿಯಾಗಿದ್ದ, ಬಿಡುಗೈಯವನಾಗಿದ್ದ.

ಆನಂದದ ಅಮಲಿನಲ್ಲಿ ಆದ ಸೌರಭೇಯಿಯ ಗಲ್ಲದ ಮುದ್ದುಗುಳಿಯನ್ನು ಚಿವುಟುತ್ತಾ "ಅಪ್ಸರಾ ಕುವರಿ! ನಿನ್ನ ಸೇವೆಯಿಂದ ಸುತುಷ್ಟನಾಗಿದ್ದೇನೆ. ಯಾವ ವರವನ್ನಾದರೂ ಕೇಳು ಅನುಗ್ರಹಿಸುತ್ತೇನೆ" ಎಂದು ನುಡಿದ.

ಇಂತಹ ಅನಿರೀಕ್ಷಿತ ಅನುಭವಗಳು ಸೌರಭೇಯಿಗೆ ಹೊಸತೇನೂ ಅಲ್ಲ. ಆದರೆ ಜಡ್ಡು ಬಿದ್ದು ಚಿಕಿತ್ಸೆ ಪಡೆದು ಈಗತಾನೆ ಎದ್ದವಳು ಹಸಿಮೈಯಿನವಳಾಗಿದ್ದಳು. ಹಾಗಿದ್ದರೂ ಸುಖಲೋಲಾಸಕ್ತ

ಳಾಗಬೇಕಾಯಿತು. ಆಗ ಶುಕವಾಣಿಯನ್ನು ಕೇಳಿದ್ದಳು. ಅನುಭವಾಮೃತದಂತಿದ್ದ ಆ ನುಡಿಯಿಂದ ಪುಳಕಿತಳಾಗಿ, ಕೈಗೊಂಡ ಕಾಯಕದಲ್ಲಿ ಸಂಪೂರ್ಣವಾಗಿ ಪ್ರಜ್ಞೆಯನ್ನು ಕಳೆದುಕೊಂಡಿದ್ದಳು. ಹೀಗಾಗಬಹುದೆಂದು ಆಕೆ ಕನಸು ಮನಸ್ಸಿನಲ್ಲಿಯೂ ಆಶಿಸಿರಲಿಲ್ಲ. ಆದುದರಿಂದ ಮುದ್ದುಗಿಳಿಯ ಮೇಲೆ ಪ್ರೇಮವು ಅಂಕುರಿಸಿತ್ತು.

"ದೇವ! ಇಷ್ಟಾರ್ಥವನ್ನು ಪೂರೈಸುವುದಾದರೆ, ಈ ಮುದ್ದುಶುಕವನ್ನು ನನಗೆ ದಯಪಾಲಿಸಬೇಕು. ಅರಗಿಳಿಯನ್ನು ಸಾಕಿದಂತೆ ಪ್ರೇಮದಿಂದ ಇದನ್ನು ಸಾಕುತ್ತೇನೆ. ನನ್ನ ಮಹಲಿಗೆ ಇದು ರತ್ನಪ್ರಾಯವಾದ ಮಣಿಮಕುಟದಂತಿರುತ್ತದೆ. ಆಗಿಂದಾಗ್ಗೆ ಮಹಲಿನ ನಡೆಯುವ ಸಂತೋಷ ಕೂಟಗಳಲ್ಲಿ ಶುಕವು ತುಂಬಾ ಅನುವಾಗುತ್ತದೆ. ಬಂದ ಮಂದಿಯ ಬೇಸರವನ್ನು ಬಲುಬೇಗ ಕಳೆಯುತ್ತದೆ" ಎಂದು ಬೇಡಿಕೊಂಡಳು. ಗಲ್ಲದ ಮುದ್ದು ಗುಳಿಯನ್ನು ಚಿವುಟುತ್ತಿದ್ದ ಬೆರಳುಗಳನ್ನು ಹಗೂರಾಗಿ ಹಿಡಿದು, ತನ್ನ ಅಧರಗಳತ್ತ ಸೆಳೆಯುತ್ತ ಬೇಡಿದಳು.

ಅಧರಾಮೃತವನ್ನು ಬೆರಳುಗಳಿಂದಲೇ ಹೀರುವ ಸ್ಥಿತಿಯಲ್ಲಿರುವಾಗ, ವರುಣದೇವನು ವರವನ್ನು ಕೊಡದೆ ಏನು ತಾನೆ ಮಾಡಿಯಾನು? ಅದೂ ವಚನವಿತ್ತ ಬಳಿಕ. ತುಂಬ ಅನುಯಾಯಿಯಾಗಿದ್ದ ಮುದ್ದುಗಿಳಿಯನ್ನು ಸೌರಭೇಯಿಗೆ ಬಿಟ್ಟುಕೊಡುವುದೆಂದರೆ, ಸಾಕಿಸಲುಹಿದ ಹೆಣ್ಣು ಮಗಳನ್ನು ಹೆರರ ಮನೆಗೆ ಮದುವೆಮಾಡಿ ಕಳಿಸಿದಂತೆಯೇ. ಆದರೂ ಪ್ರಕೃತಿಯ ನಿಮಯದಂತೆ ಇದು ಆಗಲೇ ಬೇಕಲ್ಲ! ವರಪ್ರದಾನವು ಕಾರ್ಯ ರೂಪಕ್ಕೆ ಇಳಿಯಿತು. ಮುದ್ದು ಗಿಳಿಗೆ ಇಕ್ಕೆಡೆಗಳಿಂದಲೂ ಮುತ್ತು ದೊರಕಿತು, ಹಸ್ತಾಂತರವಾಗುವಾಗ ಮುತ್ತು ಮರುಕಳಿಸಿತೊಡಗಿದಾಗ ಮುದ್ದುಗಿಳಿಯು ತಟಕ್ಕಂತ ತಲೆಯನ್ನು ಬಗ್ಗಿಸಿ, ಸಲ್ಲಬೇಕಾದಲ್ಲಿ ಮುತ್ತು ಸಲ್ಲುವಂತೆ ಮಾಡಿತು. ಹಾಗೆ ಮಾಡಿ ಇಬ್ಬರ ಮೆಚ್ಚುಗೆಯನ್ನು ಮರಳಿ ಪಡೆಯಿತು.

ತೀರ್ಥಯಾತ್ರೆಯಿಂದ ಜಿಂಕೆಯಂತೆ ಜಿಗಿಯುತ್ತಾ ಹಿಂದಿರುಗಿದ ಒಡತಿಯನ್ನು ಸಖಿಯರು ಸ್ವಾಗತಿಸಿದರು. ಅಪ್ಸರೆಯರ ಸಖಿಯರಿಗೆ ಸ್ವಾತಂತ್ರ್ಯ ಸ್ವಲ್ಪ ಹೆಚ್ಚು. ಒಡತಿಯರ ಕಾರ್ಯವನ್ನು ಒಮ್ಮೊಮ್ಮೆ ಗುಟ್ಟಾಗಿ ಅವರೇ ಮಾಡಬೇಕಾಗಿ ಬರುತ್ತೆ. ಹಾಗಾಗಿ ಒಡತಿ ಸಖಿಯರ ಸಂಬಂಧ ಅನ್ಯೋನ್ಯವಾಗಿರುತ್ತದೆ. ಇಂತಹ ಸದರದಿಂದಾಗಿ ಸಖಿಯೊಬ್ಬಳು "ಅಕ್ಕಾ! ತೀರ್ಥಯಾತ್ರೆಗೆ ಮೈತುಂಬಿ ಹೋದವರು, ಮೈಯನ್ನು ಹಗೂರು ಮಾಡಿಕೊಂಡು ಕೈಕೊಡವುತ್ತಾ ಬರುತ್ತಾರೆ. ಒಂಟಿಜೀವಿಯಾಗಿ ನೀನು ಹೋಗಿ ಹಿಂತಿರುಗುವಾಗ ಮುದ್ದು ಗಿಳಿಯನ್ನು ಹೆತ್ತು ತಂದಿದ್ದೀಯಲ್ಲ!" ಎಂದು ಛುಡಾಯಿಸಿದಳು. "ಮುದ್ದುಗಿಳಿಗೆ ಏನೆಲ್ಲ ಮಾತು ಬರುತ್ತದೆ! ಎರಡು ದಿನಗಳು ಅದರ ಜತೆಯಲ್ಲಿ ಕಳೆಯಿರಿ. ಆಮೇಲೆ ಮನೆಗೆ ಗಂಡಸರು ಯಾರೂ ಬರುವುದೇ ಬೇಡ, ಗಿಳಿಯ ಜತೆಯಲ್ಲಿ ಸುಖವಾಗಿ ಹರಟುತ್ತ ಇರಬಹುದು ಎಂದು ಅನ್ನಿಸುತ್ತೆ" ಎಂದಳು ಸೌರಭೇಯಿ.

ಸೌರಭೇಯಿಯು ಹೇಳಿದ್ದು ಸತ್ಯವಾಯಿತು. ಸಖಿಯರೆಲ್ಲರೂ ಸರದಿಯ ಮೇಲೆ ಶುಕದ ಹತ್ತಿರ ಕುಳಿತು ಲಲ್ಲೆಯಾಡಲು ಪ್ರಾರಂಭಿಸಿದರು. ಒಬ್ಬೊಬ್ಬರೇ ಅದರ ಬಳಿ ಕುಳಿತು ಕೊಠಡಿಯ ಕಿಟಕಿ ಬಾಗಿಲುಗಳನ್ನು ಮುಚ್ಚಿದ ಮೇಲೆ, ಶುಕವು ನುಡಿಯುತ್ತಿದ್ದ ನಾವಿಕರ ಮಾತುಗಳು ಸಖಿಯರಿಗೆ ಬಹಳ ಆಪ್ಯಾಯಮಾನವಾಗಿತ್ತು. ಅಂತಹ ವನ್ಯಭಾಷೆಯನ್ನು ಕೇಳುವ ಪುಣ್ಯ ಈತನಕ ಅವರದಾಗಿದ್ದಿಲ್ಲ.

ಯಾವ ರೀತಿಯಲ್ಲಿ ಶುಕವು ಬೈಗಳನ್ನು ಮಾಡುತ್ತೋ ಆ ರೀತಿಯಲ್ಲಿ ನಾವು ಒಂದು ಸಲವಾದರೂ ಜೀವನ ನಡೆಸಬೇಕು ಎಂಬ ಹುಚ್ಚು ಹಂಬಲ ಅವರಲ್ಲಿ ಉಂಟಾಗುತ್ತಿತ್ತು.

"ಮಗು ಎದ್ದುಬಿಡುತ್ತೆ, ನಿಮ್ಮ ಗುಟುರಾಟದಲ್ಲಿ" ಎಂದು ಕೊಂಕಿ ಶುಕವು ನುಡಿದಾಗ ಸಖಿಯರಿಗೆ ಸಮುದ್ರರಾಜನ ಅಂತಃಪುರದ ಅವೇಳೆಯ ದೃಶ್ಯದ-ದರ್ಶನವಾಗುತ್ತಿತ್ತು.

"ಅರಸರು ಬರುವ ಹೊತ್ತಾಯಿತು. ಬೇಗ ಬಟ್ಟೆಗಳನ್ನು ಹಾಕಿಕೊಂಡು ಹೋಗು" ಎಂದು ಶುಕವು ನುಡಿದಾಗ "ಅರಮನೆಯ ಅಂತಃಪುರದಲ್ಲಿ ಆ ಹೊತ್ತಿಗೆ ಯಾರು ಹೋಗಿದ್ದರು—ನೆರೆಮನೆಯ ಪಡ್ಡೆ ಹುಡುಗನೇ? ಅಥವಾ ಅಡಿಗೆಯ ಮಾಣಿಯೇ? ಅಥವಾ ಶುಭ್ರವಸ್ತ್ರಾನ್ವಿತ ಅಗಸನೇ?" ಎಂದು ಸಖಿಯರು ಯೋಚಿಸಲು ಪ್ರಾರಂಭಿಸುತ್ತಿದ್ದರು.

ಈ ರೀತಿಯ ಮುದ್ದುಗಿಳಿಯ ಮನರಂಜನ ಕಾರ್ಯಕ್ರಮದ ವಿವರಗಳು ಅಪ್ಸರೆಯರ ಬಡಾವಣೆಯಲ್ಲಿ ಬಾನುಲಿಯಲ್ಲಿ ಪ್ರಸಾರವಾದಂತೆ ಪ್ರಚಾರವಾಯಿತು. ಹಿರಿಯ ಅಪ್ಸರೆಯರು ಪ್ರೌಢ ಅಪ್ಸರೆಯರು ಎಲ್ಲರೂ ಸೌರಭೇಯಿಯ ಬಳಿಗೆ ಬಂದು ಮುದ್ದುಗಿಳಿದು ಭೇಟಿಯನ್ನು ಪಡೆಯಲು ಕಾತರರಾದರು. "ನಿನ್ನ ಶುಕದ ಮಾತುಗಳನ್ನು ಕೇಳಿದರೆ, ಅಶ್ವಿನಿ ಕುಮಾರರು ಕೊಡುವ ಪೌಗಂಡ ಗುಗ್ಗಳಕ್ಕಿಂತಲೂ ಹೆಚ್ಚು ಪ್ರಯೋಜನವಾಗುತ್ತೆ ಕಣೆ!" ಎಂದು ರಂಭೆಯೇ ಹೇಳಿದ ಮೇಲೆ, ಗಿಳಿಯ ಪ್ರಸಿದ್ಧಿಯನ್ನು ವಿವರಿಸಬೇಕಾಗಿಲ್ಲ.

"ಇಷ್ಟು ಜನರ ಮನವನ್ನು ಮುದ್ದು ಗಿಳಿಯು ಸೆಳೆದಿದೆ; ಅದರ ಹುಟ್ಟಿದ ಹಬ್ಬವನ್ನು ಎಂದಾದರೂ ಮಾಡಿ, ಎಲ್ಲರನ್ನೂ ಕರೆದು, ಅದನ್ನು ಅಭಿನಂದಿಸೋಣ" ಎಂದುಕೊಂಡಳು ಒಮ್ಮೆ ಸೌರಭೇಯಿ. ಕೂಡಲೆ ಸಖಿಯು ನೆನಪು ಮಾಡಿದಳು—"ಒಬ್ಬೊಬ್ಬರೇ ಇದ್ದಾಗ ಶುಕದ ಮಾತು ಬಲು ಖುಷಿಯಾಗಿರುತ್ತೆ. ನಾಲ್ಕು ಜನರು ಇರುವಾಗ ಮಾನ ಹೋಗುತ್ತೆ" ಎಂದು.

"ಅಂದ ಹಾಗೇ! ಅಕ್ಕಾ! ಮುಂದಿನ ವಾರದಲ್ಲಿ ನಿನ್ನ ಹುಟ್ಟಿದ ಹಬ್ಬವನ್ನು ಆಚರಿಸಬೇಕು. ವಿದ್ಯಾಧರರೂ, ಗಂಧರ್ವರೂ, ದೇವತೆಗಳೂ ಎಲ್ಲರೂ ಸಂಸಾರ ಸಮೇತ ಬರುತ್ತಾರೆ. ಆಗ ಈ ಗಿಳಿಯೇನಾದರೂ ಕೊಕ್ಕು ಬಿಚ್ಚಿ ನವ್ಯವನ್ನು ನುಡಿದೇ ಬಿಟ್ಟರೆ ಗತಿ?" ಎಂದು ಸಖಿಯು ಆತಂಕದಿಂದ ಕೇಳಿದಳು.

"ಹುಟ್ಟಿದ ಹಬ್ಬದ ದಿನ ಗಿಳಿಯ ಪಂಜರಕ್ಕೆ ಕಿಂಕಾಬಿನ ಹೊದಿಕೆಯನ್ನು ಹೊದ್ದಿಸಿ ಬಿಡೋಣ. ಕತ್ತಲಲ್ಲಿ ಅದು ಕೊಕ್ಕು ಬಿಚ್ಚುಲ್ಲ" ಎಂದಳು ಸೌರಭೇಯಿ.

ಸೌರಭೇಯಿಯ ಹುಟ್ಟಿದ ಹಬ್ಬಕ್ಕೆ ಮೇಲು ಲೋಕದವರಲ್ಲಿ ಮೊದಲ ಹಂತದವರನ್ನೆಲ್ಲ ಆಹ್ವಾನಿಸಲಾಗಿತ್ತು. ಅಪ್ಸರೆಯರಲ್ಲಿ ಇಷ್ಟನೇ ಹುಟ್ಟಿದ ಹಬ್ಬ ಎಂದು ಹೇಳುವುದಿಲ್ಲ. ಆದಕಾರಣ ಆಹ್ವಾನಿತರೆಲ್ಲರೂ ಆಸೆಯನ್ನು ಇಟ್ಟುಕೊಂಡು ಬಂದೇ ಬರುತ್ತಾರೆ. ಹಾಗಾಗಿ ಅತಿಥಿಗಳ ಉಪಚಾರಕ್ಕೆಂದು ತುಂಬಾ ಶ್ರಮ ವಹಿಸಿ ಝಿಲ್ ಝಿಲ್ ಸೋಮ, ಶ್ವೇತ ಉಚ್ಚೈಶ್ರವಸ್ಸು, ಕಾಳಭೈರವಮಾರ್ಕು ಇತ್ಯಾದಿಗಳನ್ನು ಶೇಖರಿಸುತ್ತಾರೆ. ವಿಧ ವಿಧವಾದ ಖಾದ್ಯಗಳನ್ನೂ ಹಲವಾರು ದೇಶೀಯರಿಂದ ಹೇಳಿ ಮಾಡಿಸಿ ಸರಬರಾಜಿಸುತ್ತಾರೆ. ಅಂದಮೇಲೆ ಅಂತಹ ಕೂಟಗಳು ದೊಂಬಿಯಂತೇ ಇರುತ್ತವೆ.

ಹುಟ್ಟಿದ ಹಬ್ಬದ ದಿನ ಬೆಳಗಿನ ಝಾವದಲ್ಲಿ ಸೌರಭೇಯಿಯು ಮಂಗಳಸ್ನಾನಕ್ಕೆ ಇಳಿದಳು. ಸಖಿಯು ಮೈಯನ್ನು ತಿಕ್ಕುತ್ತಿದ್ದಳು. ಏನೋ ತೋಚಿದಂತಾಗಿ, ಸೌರಭೇಯಿಯು ಹಸಿರುಲೇಪದ ಪರಿಮಳವನ್ನೂ ವರುಣದೇವನು ಬುಟ್ಟಿಗೆ ಬಿದ್ದುದನ್ನೂ ವಿವರಿಸಿ, "ಈ ಸಂಜೆ ಆ ಲೇಪವನ್ನು ಮಾಡಿಕೊಳ್ಳಲೇನೇ? ಪರಮಳದಿಂದಾಗಿ ಸಂತೋಷ ಕೂಟವು ಕಳೆಗಟ್ಟಬಹುದು" ಎಂದು ಹೇಳಿದಳು.

"ನನಗೂ ಆ ಚಿಕಿತ್ಸೆಯನ್ನು ಅಶ್ವಿನಿ ಕುಮಾರರು ನಡೆಸಿದ್ದರು, ಆಗ ಆ ಪರಿಮಳದಿಂದಾಗಿ ಕಿರಾತನೊಬ್ಬನ ಕೈಯಲ್ಲಿ ಸಿಕ್ಕಿಬಿದ್ದಿದ್ದೆ. ಅದರ ಪರಿಣಾಮವನ್ನು ನಾನೂ ಬಲ್ಲೆ. ಮಹಲಿನಲ್ಲಿ ಈ ಸಂಜೆ ಆ ಪರಿಮಳವು ಹರಡಿದರೆ, ಯುದ್ಧವಾಗಿಬಿಡುತ್ತೆ, ಶವಸಂಸ್ಕಾರವನ್ನು ಮಾಡಲು ಕೂಡ ಸಾಧ್ಯವಾಗುವುದಿಲ್ಲ. ದಯವಿಟ್ಟು ಆ ಯೋಚನೆಯನ್ನು ಮರೆತುಬಿಡು" ಎಂದು ಸಖಿಯು ಉಪದೇಶಿಸಿದಳು.

ಅಪ್ಸರೆಯರ ಹುಟ್ಟಿದ ಹಬ್ಬದ ಸೊಬಗೆಲ್ಲ ಪ್ರಾತಃಕಾಲದ ಮಂಗಳಸ್ನಾನವಾಗುವಾಗ, ಮತ್ತೆ ಆಮೇಲೆ ಸಂಜೆಯ ನಂತರವೇ! ಹಗಲೆಲ್ಲಾ ಕೇಶಶೃಂಗಾರವನ್ನು ಮಾಡಿಕೊಳ್ಳುವುದರಲ್ಲೇ ನಿರತರಾಗಿರುತ್ತಾರೆ. ಸೌರಭೇಯಿಯ ಅಂದಿನ ಕೇಶಾಲಂಕಾರವು ಕೆಟ್ಟ ಕನಸಿನಂತಿತ್ತು. ಕಿಂಪುರುಷನ ಬಾಲಕ್ಕೆ ಐದು ಕಾಲು ಜಡೆಯನ್ನು ಹೆಣೆದು, ಆ ಜಡೆಗಳಿಂದ ಹೆರಳನ್ನು ಪೊದೆಯಂತೆ ಎತ್ತಿಕಟ್ಟಿದರೆ ಹೇಗಿರುತ್ತೆ. ಆ ರೀತಿ ರಚಿಸಿದ್ದರು. ಹಾಗೆ ಮಾಡಿದರೆ ಮೈ ಮುಖಗಳ ಮೇಲೆ ಬಿದ್ದ ಕೆಟ್ಟ ದೃಷ್ಟಿಯು ಪೊದೆಗೆ ತಾಕಿ ದೃಷ್ಟಿಯ ಪೀಡೆಯು ಪೊದೆಗೆ ಬಡಿಯುತ್ತೆ ಎಂದು ಅಪ್ಸರೆಯರ ನಂಬಿಕೆ.

ಸಂಜೆಯ ಹೊತ್ತಿಗೆ ಹಂಸತೂಲಿಕಾ ಹೆಲಿಕಾಪ್ಟರುಗಳು ಬಂದಿಳಿಯಲು ಆರಂಭವಾಯಿತು. ಅಶ್ವಾರೂಢರಾಗಿಯೂ ಹಲವರು ವಿದ್ಯಾಧರರು ಬಂದರು: ಸಂಸಾರ ಸಮೇತರಾಗಿ ಬಂದವರು ಅತ್ತ ಇತ್ತ ಸುತ್ತಲೂ ಕಣ್ಣುಗಳನ್ನು ಮಿಂಚಿಸುತ್ತ ಒದಗಬಹುದಾದ ಅವಕಾಶಕ್ಕಾಗಿ ಹಾತೊರೆಯುತ್ತಿದ್ದರು. ಮಿಕ್ಕವರಲ್ಲಿ ಬಹುಮಂದಿ ನೇರವಾಗಿ ಅರವಟ್ಟಿಗೆಯತ್ತ ಧಾವಿಸಿದರು. ಪಡ್ಡೆ ಕಡಸುಗಳು ಕೆಲವು ಲತಾ ಗೃಹಗಳು ಎಲ್ಲಿವೆ ಎಂಬುದನ್ನು ಸೂಕ್ಷ್ಮವಾಗಿ ಪತ್ತೆ ಹಚ್ಚುತ್ತಿದ್ದರು. ಬಂದಿದ್ದ ಹಲವಾರು ಹೋರಿಗಳು ಪಡ್ಡೆ ಕಡಸುಗಳೆಲ್ಲಿವೆ? ದಕ್ಕುವ ಚಿಹ್ನೆಗಳಿವೆಯೇ? ಎಂದು ವೀಕ್ಷಿಸುತ್ತಿದ್ದರು. ಅನುಕೂಲವಾದ ಚಿಹ್ನೆಗಳಿದ್ದರೆ, ನಂತರ ಅವುಗಳಿಗೆ ಪಾನೀಯವನ್ನು ತೆಗೆದುಕೊಂಡು ಹೋಗುವುದು, ಹೊಗಳಿಕೆಯ ಹೊನ್ನ ಮಂಚವನ್ನು ಕಟ್ಟುವುದು ಇತ್ಯಾದಿಗಳನ್ನು ಮಾಡಬಹುದು.

ಸುಮಾರು ಅರ್ಧ ಝಾಮದಲ್ಲಿ ಈ ಚಟುವಟಿಕೆಗಳೆಲ್ಲವೂ ಒಂದು ಹದಕ್ಕೆ ಬಂದಿತ್ತು. ಅರವಟ್ಟಿಗೆಯು ಅರ್ಧದಷ್ಟು ಖಾಲಿಯಾಗಿತ್ತು. ಮಾತುಕತೆಗಳು, ಸಡಗರ ಸಂಭ್ರಮಗಳು ಸುಸಂಸ್ಕೃತಿಯ ಹೊಸಿಲನ್ನು ದಾಟುವುದರಲ್ಲಿತ್ತು.

ಝಾಮವೊಂದು ಮುಗಿದಾಗ, ಮಹಲಿನ ಸಭಾಮಂದಿರದಲ್ಲಿ ಸೌರಭೇಯಿಯ ಹುಟ್ಟಿದ ಹಬ್ಬದ ಪ್ರಯುಕ್ತ ಆಕೆಗೆ ಅಭಿನಂದನೆಯನ್ನೂ ಶೋಭನ ಹಾರೈಕೆಯನ್ನೂ ಮಾಡುವ ಸಂಪ್ರದಾಯ, ಕಾರಣ ಸಖಿಯರು ಝಾಮ ಮುಗಿದಾಗ ಚಪ್ಪಾಳೆಗಳನ್ನು ತಟ್ಟಿ ಅಲ್ಲಿದ್ದವರಿಗೆ ಸಮಯದ ಅರಿವನ್ನು ಉಂಟುಮಾಡಿದರು.

ಆ ವೇಳೆಗಾಗಲೇ ಕಡಸುಗಳೂ ಹೋರಿಗಳೂ ಮಂದಿರದಿಂದ ತಪ್ಪುಗಾಲು ಹಾಕುತ್ತ ಪರಸ್ಪರ

ತಬ್ಬಿಕೊಂಡು ನಡಸುತ್ತಾ ಮಾಯವಾಗಿದ್ದುವು. ಲತಾಗೃಹಗಳಲ್ಲಿ ಹಲ್ಲಿಗಳು ಲೊಚಗುಟ್ಟಿದ ಶಬ್ದ ನಿನಾದವು ತುಂಬಿಕೊಂಡಿತ್ತು. ಸಮುದ್ರರಾಜನ ಭಾರೀ ಅಲೆಗಳು ತಟವನ್ನು ಅಪ್ಪಳಿಸುವ ತಾಳ ವಾದ್ಯವು ಲತಾ ಗೃಹಗಳಲ್ಲಿ ಕೇಳಿಬರುತ್ತಿತ್ತು.

ಮಹಲಿನ ಮಂದಿರದಲ್ಲಿ ಯೌವನದ ಶೃಂಗಾರ ಮಾಡಿಕೊಂಡ, ಕುಳಿತ ಮುಪ್ಪಿಗೆಯ ಮತ್ತು ಆಹ್ವಾನಿತ ಅಪ್ಸರೆಯರು ಮಾತ್ರ ಉಳಿದಿದ್ದರು.

ಸಖಿಯರ ಚಪ್ಪಾಳೆಯನ್ನು ಕೇಳಿದಾಗ, ಮುಪ್ಪಿಗರು ಮತ್ತು ಅಪ್ಸರೆಯರು ಸಾಲುಸಾಲು ನಿಂತರು. ಸೌರಭೇಯಿಯನ್ನು ಹಸೆಯ ಮಂಟಪಕ್ಕೆ ಕರೆದೊಯ್ದರು. ಹಿರಿಯ ಅಪ್ಸರೆಯಾದ ಊರ್ವಶಿಯೇ ಹರಸುವ ಸಂಪ್ರದಾಯ. ಆಕೆಯೂ ಬಿಚ್ಚು ಗೊರಲಿನಿಂದ ಸೌರಭೇಯಿಯ ಸೌಭಾಗ್ಯವನ್ನು ಹೊಗಳಿ ಇತೋಪ್ಯತಿಶಯವಾಗಿ, ಬಲುಜನ ಸುಖಕರಿಯಾಗಿ ಈಕೆಯು ಬಾಳಲಿ ಎಂದು ಹರಸಿದಳು. ಎಲ್ಲರೂ ಉಘೇ ಉಘೇ! ಎಂದು ಕೂಗಿದರು. ಅದರ ಅರ್ಥವೇನೋ ಕೂಗಿದವರಿಗೂ ತಿಳಿಯದು. ಆದರೆ ದಾರಿಯ ತುಂಬಾ ಉಗಳಬಹುದಾದ ಘೋಷಣೆಯಾದ್ದರಿಂದ ಅದನ್ನೇ ಭದ್ರಮಾಡಿದ್ದರು.

ಎಲ್ಲರಿಗೂ ವಂದನೆಗಳನ್ನು ಸೌರಭೇಯಿಯು ಅರ್ಪಿಸಬೇಕು!

ಅಷ್ಟರಲ್ಲಿ ಪಂಜರದ ಬಳಿ ಒಬ್ಬ ಯಕ್ಷಕುಮಾರನು ಕುಳಿತಿದ್ದ. ತುಂಡಾಂಡಿಯಾಗಿದ್ದರೂ ಇನ್ನೂ ಹದಿಮೂರು ಹದಿನಾಲ್ಕರ ಪ್ರಾಯ. ಮನೆಯಲ್ಲಿ ಕೆಲಸದ ಹೆಣ್ಣಾಳುಗಳು ಇರುತ್ತಾರೆ. ಆದುದರಿಂದ ಒಬ್ಬನನ್ನೇ ಅಲ್ಲಿ ಬಿಟ್ಟುಬರಬಾರದು ಎಂದು ಅವನ ತ್ಯಾಜ್ಯ. ಹುಡುಗರಿಗೆ ಬೇಡ. ವಯಸ್ಕರು ಕಣ್ಣೆತ್ತಿ ನೋಡುವುದೂ ಇಲ್ಲ. ಸಮವಯಸ್ಕರಾರೂ ಅಲ್ಲಿರಲಿಲ್ಲ. ಆದ ಕಾರಣ ಗತಿಕಾಣದ ಅಂತರ ಪಿಶಾಚಿಯಂತೆ, ಆ ಹುಡುಗ ಪಂಜರದ ಬಳಿ ಕುಳಿತಿದ್ದ. ಅರ್ಧ ಕುಡಿದು ಮಿಕ್ಕಿದ್ದನ್ನು ಪಂಚಪಾತ್ರೆಯಲ್ಲಿ ಬಿಟ್ಟು ಹೋಗಿದ್ದ. ಒಬ್ಬ ವಿದ್ಯಾಧರ, ಇವನ ಪಕ್ಕದಲ್ಲೆ. ಕಳ್ಳತನದಿಂದ ಯಕ್ಷಕುಮಾರ ಅದನ್ನು ಕುಡಿದಿದ್ದ. ಅಭ್ಯಾಸವಿಲ್ಲದೆ ಕುಡಿದುದ್ದರಿಂದ, ಅದು ಬಲು ಬೇಗ ದೇಹದ ಎಲ್ಲೆಲ್ಲೂ ವ್ಯಾಪಿಸಿತು. ಪ್ರಾಯ ಹೊರಹೊಮ್ಮಿದಂತಾಯಿತು. ಪಂಜರದಲ್ಲಿ ಆ ಹೊತ್ತಿಗೆ ಮುದ್ದುಗಿಳಿಯು ಕತ್ತಲಿನಲ್ಲೇ ಸರಸರ ಹರಡಿ, ಮುದುರಿಕೊಂಡಿತು. ಆ ಸದ್ದು ಯಕ್ಷಕುಮಾರನ ಕಿವಿಗೆ ಸರಿಗೆಯ ಸೆರಗು ಸರಿದಂತೆ ಕೇಳಿಸಿತು. ಆ ವಯಸ್ಸಿನಲ್ಲಿ ಕುತೂಹಲವು ಅಧಿಕ. ಆದ ಕಾರಣ ಯಕ್ಷ ಕುಮಾರನು ಪಂಜರದಲ್ಲಿ ಯಾವ ಹೆಣ್ಣಿದೆ ಎಂದು ನೋಡಲು ಹೊದಿಸಿದ್ದ ಕಿಂಕಾಬಿನ ಹೊದಿಕೆಯನ್ನು ಅನಾವರಣ ಮಾಡಿದ.

ತಟ್ಟಂತ ಬೆಳಕು ಮುದ್ದುಗಿಳಿಯ ಕಣ್ಣುಗಳಿಗೆ ಬಡಿಯಿತು. ಕಣ್ಣುಮುಚ್ಚಿ ಕಣ್ಣು ತೆರೆದು ಸುತ್ತಲೂ ಶುಕವು ನೋಡಿತು.

ಹಸೆಯ ಮಂಟಪದ ಮೇಲೆ ನಿಂತಿದ್ದ ಸೌರಭೇಯಿಯನ್ನು ಕಂಡಿತು. ರುದ್ರಾಕ್ಷಿಗಳೆರಡನ್ನೂ ಈಕೆ ಯಾಕೆ ಉಬ್ಬುಗಳ ಮೇಲೆ ಧರಿಸಿದ್ದಾಳೆ ಎಂದು ತಿರುಗಿ ನೋಡಿತು. ಅರ್ಥವಾದ ಕೂಡಲೆ ಸುತ್ತನೋಡಿತು.

"ಬಂದೆ, ನಾ ಬಂದುಬಿಟ್ಟೆ" ಎಂದು ಮೊದಲ ಪಹರೆಯ ಮಾತನ್ನು ನುಡಿಯಿತು. ನಂತರ "ಅದೇ ಮುಪ್ಪಿನ ಮುದುಕರು, ಯೌವನಸ್ಥರಂತೆ ವೇಷ ಕಟ್ಟಿದವರು. ಅದೇ ಕಸುಬಿನ ಕನ್ನೆಯರು,

ಗೃಹಿಣಿಯರಂತೆ ವೇಷ ಕಟ್ಟಿದವರು, ಆದರೆ ಮಹಲು ಬೇರೆ” ಎಂದು ಹಿರಿಯ ನಾವಿಕರ ಕರ್ಕಶ ಧ್ವನಿಯನ್ನು ಅನುಕರಿಸಿ ಕೂಗಿತು.

“ಯಾರೇ! ಪಂಜರದ ಹೊದಿಕೆಯನ್ನು ತೆಗೆದವರು?” ಎಂದು ಸೌರಭೇಯಿಯು ರೇಗುತ್ತ ಕೇಳಿದಳು.

ಅಲ್ಲಿ ಆ ಹೊತ್ತಿನಲ್ಲಿ ಉಳಿದಿದ್ದ ಅತಿಥಿಗಳು ಪಂಜರದತ್ತ ಕ್ರೂರದೃಷ್ಟಿಯನ್ನು ಹರಿಸುತ್ತ ಹೊರಕ್ಕೆ ಹೊರಟುಹೋದರು. ಬಾಗಿಲ ಬಳಿಗೆ ಓಡಿಹೋಗಿ ಸೌರಭೇಯಿಯು ಪ್ರತಿಯೊಬ್ಬರಿಗೂ ವಂದನೆಗಳನ್ನೂ ಕ್ಷಮಾಪಣೆಗಳನ್ನೂ ಅರ್ಪಿಸಿದಳು.

ನಂತರ ಪಂಜರದ ಬಳಿಗೆ ಕೋಪಾವೇಶಿತಳಾಗಿ ನಡೆದಳು. ಮುದ್ದುಗಿಳಿಯ ಕತ್ತುಮುರಿದು, ಅದರ ಮಾಂಸದಲ್ಲಿ ಮಜ್ಜಿಗೆ ಹುಳಿಯನ್ನು ಮಾಡಿ ಎಲ್ಲರಿಗೂ ಬಡಿಸುತ್ತೇನೆ ಎಂದಂದುಕೊಂಡು ಪಂಜರದ ಬಳಿಗೆ ಹೋದಳು.

ಆದರೆ ಆ ಹೊತ್ತಿಗೆ ಅಮಲು ಏರಿದ್ದ ಯಕ್ಷಕುಮಾರನು ಪಂಜರದ ಬಾಗಿಲನ್ನು ತೆಗೆದು ಮುದ್ದುಗಿಳಿಯನ್ನು ಹಿಡಿದು ಅಪ್ಪಿಕೊಳ್ಳಲು ಪ್ರಯತ್ನಿಸುತ್ತಿದ್ದ. ಹಕ್ಕಿ ಹಾರಿಹೋಯಿತು. ಯಕ್ಷಕುಮಾರನು ಕ್ರುದ್ಧಳಾಗಿದ್ದ ಸೌರಭೇಯಿಯ ಕೈಗೆ ಸಿಕ್ಕಿಬಿದ್ದಿದ್ದ.

■

# ಹಂಸ-ಸಂದೇಶ

**ಗಂ**ಧರ್ವನಿಗೆ ಬಲು ಖುಷಿಯಾದಂತಿತ್ತು. ನಸುನಗುತ್ತಲಿದ್ದ. ಕಿಸುನಗುವಾಗ ಅವನ ಬಾಯಿಯು ದಾಳಿಂಬೆಯಂತೆ ಬಿರಿದು, ಹಲ್ಲು ಸಾಲುಗಳು ಕಾಣುತ್ತಿದ್ದುವು. ಮಲ್ಲಿಗೆ ಹೂವಿನ ಮೊಗ್ಗುಗಳಂತಿದ್ದುವು ಆ ಹಲ್ಲುಗಳು.

ಹಂಸವು ತಂದುಕೊಟ್ಟ ತುರ್ತು ಕಾಗದವನ್ನು ಅವ ಓದಿದ್ದ. ನಂತರವೇ ಅವ ನಸುನಕ್ಕಿದ್ದು. ಲಕ್ಕೋಟೆಯ ಮೇಲೆ "ಗಂ! ಪುಷ್ಪದಂತಿ" ಎಂದು ವಿಳಾಸವನ್ನು ಬಲು ಅಂದವಾದ ಹೆಣ್ಣಕ್ಷರಗಳಲ್ಲಿ ಬರೆಯಲಾಗಿತ್ತು. ಗಂ ಎಂದರೆ ಗಂಡಸು ಅಂತಲ್ಲ. ಡಬ್ಬಲ್ ಗಂಡಸು; ಗಂಧರ್ವ ಅಂತ ಮೇಲು ಲೋಕಗಳಲ್ಲೆಲ್ಲಾ ಹೇಳುತ್ತಾರೆ. ಕಾಗದದ ಒಕ್ಕಣೆ ಹೀಗಿತ್ತು.

"ಎನ್ನೆ ಕಟ್ಟಿಚ್ಚಿನ ಪ್ರಾಣ ಲಿಂಗಮೇ, ನಾಳೆಯ ಬೆಳದಿಂಗಳ ಮೊದಲ ಜಾಮದ ಹೊತ್ತಿಗೆ ಮೋಟೆಲ್ ೩೬೮ರಲ್ಲಿ ಒಬ್ಬಳೇ ನಾನಿರುತ್ತೇನೆ.

ಊರ್ವಶೀ"

ಕಾಗದವನ್ನು ಓದಿದ ಮೇಲೆ ಪುಷ್ಪದಂತಿಗೆ ಖುಷಿಯಾಗದೆ ಇರುತ್ತದೆಯೇ? ಸ್ವಹಸ್ತದಿಂದ ಬರೆದಳು ಎಂದ ಮೇಲೆ ಅನುರಾಗವು ಉದ್ವೇಗವಾಗದೆ ಇರುತ್ತದೆಯೇ? ಅದೂ ಬೆಳದಿಂಗಳಲ್ಲಿ! ಹಾಗೂ ಗಂಧಮಾದನ ಪರ್ವತದ ಹೆದ್ದಾರಿಗಳ ಬಳಿ ಇರುವ ಹೋಟೆಲುಗಳಲ್ಲಿ! ಆ ಹೋಟೆಲುಗಳನ್ನು ಸೃಷ್ಟಿಸುವಾಗ ವಿಶ್ವಕರ್ಮನು ಪ್ರೇಮವನ್ನು ಗಾರೆಯನ್ನಾಗಿ ಉಪಯೋಗಿಸಿದ್ದ, ಯೌವನದ ಇಷ್ಟಗಳನ್ನೇ ಇಟ್ಟಿಗೆಗಳನ್ನಾಗಿಸಿದ್ದ. ಬಯಕೆಗಳನ್ನೇ ಬೇಸ್‌ಮೆಂಟಿನಲ್ಲಿ ತುಂಬಿದ್ದ, ಸರ್ವಾರ್ಪಣೆಯ ಸೂರನ್ನೆ ಹೊದಿಸಿದ್ದ ಎಂದು ಶಾಸ್ತ್ರಗಳಲ್ಲಿ ಡಂಗುರ ಸಾರಿದ್ದರು. ಅಂತಹ ಪೂರ್ವಪುಣ್ಯದಿಂದ ಶೋಭಾಯಮಾನ ವಾಗಿರುವ, ಅಂತಹ ಮೋಟೆಲು ಒಂದರಲ್ಲಿ ಏಕಾಂಗಿ ಊರ್ವಶಿಯೊಂದಿಗೆ, ಅದೂ ಅವಳು ಬೇಡಿ ಬಯಸಿದಾಗ! ಪುಷ್ಪದಂತಿಯ ಹಲ್ಲುಗಳು ಇನ್ನೇನು ಅರಳುತ್ತವೆಯೊ ಎನ್ನುವಂತೆ ಅವ ನಕ್ಕ.

* * * * *

ಹಿಂದಿನ ವಾರದಲ್ಲಿ ವಾರ್ಷಿಕ ಸೌಂದರ್ಯ ಸ್ಪರ್ಧೆಯು ಏರ್ಪಾಡಾಗಿತ್ತು. ಸ್ವರ್ಗದಲ್ಲಿ ಆರೇಳು ತಿಂಗಳಿಂದಲೂ ಈ ಸ್ಪರ್ಧೆಯಲ್ಲಿ ಜಯಗಳಿಸುವ ಹಂಬಲದಿಂದ ಅಪ್ಸರಸಿಯರೆಲ್ಲರೂ ತರಬೇತು ಪಡೆಯುತ್ತಿದ್ದರು. ಕಾಮದೇವ ಮತ್ತು ರತಿದೇವಿಯರು ನಡೆಸುತ್ತಿದ್ದ ವ್ಯಾಯಾಮ ಶಾಲೆಗೆ ಹೋಗಿ, ವಿಧಿವತ್ತಾಗಿ ಅಭ್ಯಾಸ ಮಾಡುತ್ತಿದ್ದರು. ಅಲ್ಲೊಮ್ಮೆ ಊರ್ವಶಿಯು ದಂಡ ಒತ್ತುತ್ತಿದ್ದಾಗ, ತುಸು ದೂರದಲ್ಲಿದ್ದ ದೋರೆಗಾಯಿ ಅಪ್ಸರಸಿಯರು "ಈ ಮುದುಕಿಯೂ ಸೌಂದರ್ಯ ಸ್ಪರ್ಧೆಗೆ

ಇಳಿದಿದ್ದಾಳಲ್ಲ, ನಾಚಿಕೆಯಾದರೂ ಆಗಬೇಡವೇ? ಅಪ್ಸರೆಯರಲ್ಲೆಲ್ಲ ಆಕೆಯೇ ಹಿರಿಯಳು. ಹಣ್ಣುಹಣ್ಣಾದ ಹಿರಿಯ ಮುದುಕಿ, ಎಂದು ಅವಳಿಗೆ ಈ ಪ್ರಶಸ್ತಿ ದೊರೆಕಿತ್ತು. ಇನ್ನೂ ಚಪಲ ಇದ್ದೇ ಇದೆಯಲ್ಲ?" ಎಂದು ಪಿಸುಮಾತನಾಡಿಕೊಂಡಿದ್ದರು. ಹಿರಿಯ ಅಪ್ಸರೆಯಾದರೂ ಊರ್ವಶಿಯ ಕಿವಿ ಹರಿತವಾಗಿತ್ತು. ಹರೆಯ ವಯಸ್ಸಿನ ಅಪ್ಸರಸಿಯರು ಹೀಗೆ ಮೂದಲಿಸಿ ಮಾತನಾಡಿಕೊಂಡಾಗ ಅವಳಿಗೆ ರೇಗಿತು. ಸೊಂಟ ಚಿಮ್ಮಿತು. ಇವರಿಗೆ ಸರಿಯಾಗಿ ಬುದ್ಧಿಯನ್ನು ಕಲಿಸಬೇಕು. ಅಪ್ಸರೆಯರಲ್ಲಿ ಮುಪ್ಪು ಮೂಡುವುದೇ ಇಲ್ಲ. ಹಾಗೇ ಅವರು ಕಾಯಕಲ್ಪವನ್ನು ದಿನಾಲೂ ಯಥಾವಿಧಿಯಾಗಿ ನಡೆಸುತ್ತಾರೆ. ಕಾಲನ ಹಾವಳಿಯು ಅವರ ಮೇಲೆ ಪರಿಣಾಮವನ್ನು ಉಂಟುಮಾಡುವುದಿಲ್ಲ. ಒಂದು ತೆರನಾಗಿ ನಾವು ಕಾಲಾತೀತರು. ನಮ್ಮಲ್ಲಿ ಅಜ್ಜಿಯೂ ಮರಿಮೊಮ್ಮಗ್ಗಳೊಡನೆ, ಬಾಳಿನ ಮುಖ್ಯವಾದ ವಿಷಯಗಳಲ್ಲಿ ಸ್ಪರ್ಧಿಸಿ ಜಯಗಳಿಸಬಲ್ಲಳು. ಇದನ್ನೆಲ್ಲಾ ಮನದಟ್ಟುವಂತೆ ಈ ಬಾಯ್‌ಬಿರುಕಿಯರಿಗೆ ಕಲಿಸಬೇಕು ಎಂದು ಊರ್ವಶಿಯು ಪಣ ತೊಟ್ಟಿದ್ದಳು.

ಅನಂತರವೇ ಆಕೆಯು ಕಾಮದೇವನ ವ್ಯಾಯಾಮಶಾಲೆಗೆ ಹೋಗುವುದನ್ನು ನಿಲ್ಲಿಸಿದಳು. ಪ್ರಾಯವು ಚಿರಂತನವಾಗಿ ಉಳಿಯಬೇಕಾದರೆ ಬಾಳಿನ ಉಷಃಕಾಲದಲ್ಲಿ ಇದ್ದವರು ನಡೆದಂತೆ ನಡೆಯಬೇಕು ಎಂದು ತೀರ್ಮಾನಿಸಿದಳು. ಕಾರಣ ಕಾಡಿಗೆ ಹೋಗಿ ಜೀವಿಗಳಲ್ಲಿ ಮೊದಲಿಗರಾಗಿದ್ದ ಕಿರಾತರ ಬಡಾವಣೆಯಲ್ಲಿ ಒಂದು ತಿಂಗಳು ವಾಸಿಸಿದಳು. ಅವರ ಹೆಣ್ಣು ಮಕ್ಕಳೊಡನೆ ತಾನೂ ಒಂದಾಗಿ ಬದುಕು ನಡೆಸಿದಳು. ಆನಂತರ ಒಂದು ತಿಂಗಳು ದಿನ ರಾಕ್ಷಸರ ಕಾಲನಿಯಲ್ಲಿ ಪ್ರವಾಸಿಯಾಗಿ ತಂಗಿದಳು. ಅಲ್ಲಿ ರೂಢಿಯಲ್ಲಿನ ಆರೈಕೆಯನ್ನೂ ಮಾಡಿಸಿಕೊಂಡಳು. ವಿದ್ಯಾಧರರ ಊರಿನಲ್ಲಿ ಕೆಲವು ವಾರಗಳು, ಕಿಂಪುರುಷರ ಕಾಲನಿಯಲ್ಲಿ ಹಲವು ದಿನಗಳು, ಕಡೆಗೆ ಭೂಲೋಕಕ್ಕಿಳಿದು, ಋಷ್ಯಾಶ್ರಮಗಳಲ್ಲಿದ್ದ ವಟುಗಳ ಜತೆಯಲ್ಲಿ ಕೆಲವು ದಿನಗಳು. ಹೀಗೆ ತನ್ನ ಶಿಕ್ಷಣವನ್ನು ಮುಗಿಸಿದ್ದಳು. ಋಷಿಗಳು ಗಡ್ಡ ಹೊತ್ತ ಹೋತಗಳಂತೆ ದುರ್ವಾಸನೆಯನ್ನು ದೂಡುತ್ತಿದ್ದರೂ, ಆಶ್ರಮದ ವಟುಗಳು ಗಂಧದ ಕೊರಡುಗಳಂತಿದ್ದರು. ಕಡೆಯ ಅಭ್ಯಾಸವನ್ನು ಮುಗಿಸಿದಾಗ, ಊರ್ವಶಿಗೆ ಆತ್ಮವಿಶ್ವಾಸವು ತುಂಬಿಬಂದಿತ್ತು. ಈ ವರ್ಷದ ಸ್ಪರ್ಧೆಯಲ್ಲಿ ಜಯವನ್ನು ಗಳಿಸುತ್ತೇನೆ ಎಂಬ ಧೈರ್ಯದ ವಿಶ್ವಾಸ ಅಳತೆಗಳೆಲ್ಲವೂ ಸಮರ್ಪಕವಾಗಿದ್ದುವು. ಆಳ ಮನಸ್ಸಿನ ಆಸೆಯು ಆತ್ಮವಿಶ್ವಾಸದಿಂದ ಪ್ರಫುಲ್ಲವಾಗಿ ಅಳತೆಗಳೆಲ್ಲದಕ್ಕೂ ಮಿನುಗುವ ಕಾಂತಿಯನ್ನು ಲೇಪಿಸಿತ್ತು. ಹಿರಿಯರ ಅನುಭವವನ್ನೂ ಕಿರಿಯರ ಕೆಚ್ಚನ್ನೂ ಒಮ್ಮೆಲೇ ತನ್ನಲ್ಲಿ ಸಮನ್ವಯ ಮಾಡಿಕೊಂಡ ತೃಪ್ತಿಯು ಷೋಡಶ ಕಲೆಗಳಿಗೂ ಹೊನ್ನಂಚಿನ ಹೊರಗೆರೆಗಳನ್ನು ಮೂಡಿಸಿತ್ತು.

ಅಂತೆಯೇ ಊರ್ವಶಿಯು ಸೌಂದರ್ಯ ಸ್ಪರ್ಧೆಗೆ ಚಿಮ್ಮು ಚಿಮ್ಮುತ್ತಾ ನಡೆದು ಬಂದಳು. ಸಾಕ್ಷಾತ್ ದೇವೇಂದ್ರ, ಬೃಹಸ್ಪತ್ಯಾಚಾರ್ಯರು ಮತ್ತು ಯಕ್ಷರಾಜ ಕುಬೇರ ಇವರೇ ತೀರ್ಪುಗಾರರಾಗಲು ಒಪ್ಪಿದ್ದರು.

ಸ್ಪರ್ಧಾಹಸೆಯ ಮೇಲೆ ಅಭ್ಯರ್ಥಿಗಳು ನಡೆದು ನಿಂತಾಗ ಪುಷ್ಪದಂತಿಯು ಅಗತ್ಯವಾದ ಅಳತೆಗಳನ್ನು ಮಾಡಿ, ಅಂಕಿಗಳನ್ನು ಘೋಷಿಸುತ್ತಿದ್ದ. ಸ್ಫುರದ್ರೂಪಿಯಾದ ನಳಕೂಬರನೇ ಆ ಅಳತೆಗಳ ವಿವರಗಳನ್ನು ಬರೆದಿಡುತ್ತಿದ್ದ. ಮೈಮಾಟದ ಜತೆಗೆ ಮುಖವು ಯಾವ ರೀತಿ ಕಂಡವರ ಮೇಲೆ ಮಾಟ ಮೂಡಿಸುತ್ತದೆ ಎಂಬುದನ್ನು ತೀರ್ಪುಗಾರರು ಅವಲೋಕಿಸುತ್ತಿದ್ದರು. ಸಾವಿರ

ಕಣ್ಣುಗಳಿಂದಲೂ ದೇವೇಂದ್ರನು ಸಾವಿರ ಪರೀಕ್ಷೆಗಳನ್ನು ಸೂಕ್ಷ್ಮವಾಗಿ ನಡೆಸುತ್ತಿದ್ದ. ಅವಿನಾಶಿಯಾದ ಆತ್ಮದ ಸೊಬಗಿಗೆ ಸ್ಪರ್ಧಾಮಣಿಯ ಮೈ ಕನ್ನಡಿ ಹಿಡಿಯುತ್ತಿದೆಯೇ ಎಂಬ ಅಂಶವನ್ನು ಬೃಹಸ್ಪತಾ ಚಾರ್ಯರು ಪರಿಶೀಲಿಸುತ್ತಿದ್ದರು. ಸ್ಪರ್ಧಾಮಣಿಯಲ್ಲಿ ಭಾಗ್ಯಲಕ್ಷ್ಮಿಯ ಸುಳಿಗಳು ಕಾಣಿಸುತ್ತಿವೆಯೇ? ಧನ ನಿಧಿಗಳ ಕೊಂಕು ಕೊಂಕಾದ ರೇಖೆಗಳು ಸ್ಪರ್ಧಿಯ ಮೈಯಲ್ಲಿ ಶೋಭಿಸುತ್ತಿವೆಯೇ? ಎಂಬ ವಿಷಯವನ್ನು ಯಕ್ಷರಾಜ ಕುಬೇರನು ನಟ್ಟ ಕಣ್ಣುಗಳಿಂದ ಅವಲೋಕಿಸುತ್ತಿದ್ದನು. ತಮ್ಮ ಪರೀಕ್ಷೆಗಳಿಂದಾಗಿ ಬಂದಿದ್ದ ತೀರ್ಮಾನವನ್ನು ತೀರ್ಪುಗಾರರು ಕೈ ಬಾಯಿ ಸನ್ನೆಗಳಿಂದ, ಕ್ರಿಕೆಟ್ ಅಂಪೈರುಗಳ ತರಹ ಸೂಚಿಸುತ್ತಿದ್ದರು. ನಳಕೂಬರನು ತೀರ್ಪುಗಾರರಿತ್ತ ಅಂಕಗಳನ್ನು ಬರೆದಿಡುತ್ತಿದ್ದ. ನಿಷ್ಪಕ್ಷಪಾತ ಗುಣಕ್ಕಾಗಿ ನಳಕೂಬರನು ಮೇಲು ಲೋಕಗಳಲ್ಲೆಲ್ಲಾ ಪ್ರಸಿದ್ಧನಾಗಿದ್ದ. ಸ್ಫುರದ್ರೂಪಿಯಾಗಿದ್ದ ಅವನು ಯಾರ ಕಡೆ ಬೆರಳು ಬಿಚ್ಚಿದರೂ, ಅವರೇ ಮೇಲೆ ಬಿದ್ದು ಒದ್ದುಕೊಂಡು ಬರುತ್ತಿದ್ದರಾದ ಕಾರಣ, ಯಾರ ಪಕ್ಷವನ್ನೂ ವಹಿಸಿ ಅವರಿಗೆ ಬೆಂಬಲವನ್ನು ಅವ ನೀಡಬೇಕಾಗಿರಲಿಲ್ಲ. ವಶೀಲಿ ಇಲ್ಲದೆ ವಶವಾಗುವುದಾದರೆ ನ್ಯಾಯ, ಸತ್ಯ, ಅಹಿಂಸೆ ಎಂದು ಬೊಬ್ಬೆ ಹೊಡೆಯಲು ಬಲು ಸುಲಭ.

ಸ್ಪರ್ಧಾಮಣಿಗಳೆಲ್ಲರೂ ಬಂದರು. ಒಬ್ಬೊಬ್ಬರಾಗಿ ಬಂದು ಒಂದು ಸುತ್ತು ಅಪ್ಪಾಲೆ ಸುತ್ತಿ ತಮ್ಮ ಮೈಯ ಮೆಹನತ್ತನ್ನೆಲ್ಲಾ ಮೆರೆಸಿದರು. ಸಮೀಚಿ ಬಂದಳು. ಬುದ್ಬುದಾ ಬಂದಳು. ವನ್ದಾ ಬಂದಳು. ಲತಾ ಬಂದಳು. ಸ್ಪರ್ಧಾಪಟ್ಟಿಯಲ್ಲಿ ಹೆಸರುಗಳನ್ನು ಬರೆಸಿದ್ದ ಮೂವತ್ತು ಮಂದಿಯಲ್ಲಿ ಇಪ್ಪತ್ತು ಜನ ಬಂದಿದ್ದರು. ಉಳಿದ ಹತ್ತು ಜನ ಅಪ್ಸರೆಯರು ತುಸು ಹಿರಿಯರು, ಅನುಭವಸ್ಥರು; ಊರ್ವಶಿಯೂ ಸ್ಪರ್ಧೆಗೆ ನಿಂತಿದ್ದಾಳೆ ಎಂದು ತಿಳಿದಾಗ ಅವರು ಬೇಷರತ್ತಾಗಿ ನಿಷ್ಕ್ರಮಿಸಿದ್ದರು. ಕಾರಣ ಅವರಿಗೆ ಗೊತ್ತಿತ್ತು: ಊರ್ವಶಿ ಸೊಂಟವನ್ನು ಸ್ವಲ್ಪ ಮುಂದಕ್ಕೆ ಬಾಗಿಸಿ, ಎಡ ಮಂಡಿಯನ್ನು ತುಸು ಬಗ್ಗಿಸಿ, ಒಂದು ಭಾವ ಭಂಗಿಯಲ್ಲಿ ನಿಂತರೆ ದೇವೇಂದ್ರನ ಸಹಸ್ರ ಕಣ್ಣುಗಳೂ ಕುಕ್ಕುತ್ತವೆ. ಸುರಗುರುಗಳ ಆತ್ಮಕ್ಕೆ ಆ ದೃಶ್ಯವನ್ನು ಕಂಡು, ಆಪ್ಯಾಯಮಾನವಾಗುತ್ತದೆ. ಧನನಿಧಿಗಳ ಕೊಂಕು ರೇಖೆಗಳೆಲ್ಲವೂ ಆಗ ಉಬ್ಬಿದಂತಾಗಿ ಭಾಗ್ಯಲಕ್ಷ್ಮಿಯ ಪ್ರತಿಬಿಂಬವಾಗಿ, ಕುಬೇರನ ಕಣ್ಣಿಗೆ ಕಾಣುತ್ತದೆ ಎಂಬ ಪುರಾತನವಾದ ಸತ್ಯ ಸಂಗತಿ.

ಕಡೆಯ ಸ್ಪರ್ಧಿಯೇ ಊರ್ವಶಿ. ಹಸೆಯ ಮೇಲೆ ಬಂದು ನಿಂತಳು. ಅಳತೆಗಳನ್ನು ಮಾಡಿದ ಪುಷ್ಪದಂತಿ.

"ಮೂವತ್ತೆಂಟು, ಇಪ್ಪತ್ತೆರಡು, ಮೂವತ್ತೊಂಭತ್ತು"

ಎಂದು ಘೋಷಿಸಿದ. ನಳಕೂಬರನು ಅವುಗಳನ್ನು ಬರೆದುಕೊಂಡ. ಆನಂತರ ತೀರ್ಪುಗಾರರೇ ಕೈ ಬಾಯಿ ಸನ್ನೆಗಳಿಂದ ಸೂಚಿಸಿದ ಅಂಕಗಳನ್ನು ಗುರುತಿಸಿಟ್ಟ. ಆಮೇಲೆ ಬರೆದುದನ್ನು ನೋಡಿ ಚಕಿತನಾದ. ಕಾರಣ, ಸ್ಪರ್ಧಿಯನ್ನು ನೋಡಿದ. "ಓಹೋ ಊರ್ವಶಿ! ಮತ್ತೆ ಇನ್ನು ಯಾರಿಗೆ ಇಂತಹ ಮಾಟವಾದ ಮೈ, ಇಂತಹ ಲಾವಣ್ಯ, ಇಂತಹ ಅನುಭವ ಮತ್ತು ತಾಳ್ಮೆ ಇರಲು ಸಾಧ್ಯ! ನಮ್ಮ ತಾತ, ಹಿರಣ್ಯಗರ್ಭನ ಕಾಲದಲ್ಲೂ ಇದೇ ರೀತಿ ಅದ್ವಿತೀಯಳಾಗಿದ್ದಳು. ನನ್ನ ಮರಿಮಗನ ಕಾಲಕ್ಕೂ ಇವಳೇ ಸೌಂದರ್ಯದ ನಾಂದಿಯನ್ನು ಹಾಡುತ್ತಾಳೆ" ಎಂದು ಅಂದುಕೊಂಡ.

ಅಳತೆಗಳನ್ನು ಬಹಿರಂಗವಾಗಿ ಘೋಷಿಸಿದ ಮೇಲೆ, ಆ ಅಳತೆಗಳ ಸೌಭಾಗ್ಯದ ಅರಿವು

ಪುಷ್ಪದಂತಿಗೆ ಮೂಡಿತು. ತಲೆ ಎತ್ತಿ ಊರ್ವಶಿಯನ್ನು ನೋಡಿದ. ರೂಪರಾಶಿಯನ್ನು ಕಂಡು ಮಂದಸ್ಮಿತನಾದ. ಆಗ ಅವನ ಬಾಯಲ್ಲಿದ್ದ ಮಲ್ಲಿಗೆ ಮೊಗ್ಗುಗಳ ದಂಡೆಯಂತಿದ್ದ ಹಲ್ಲುಗಳು ಊರ್ವಶಿಗೆ ಕಾಣಿಸಿತು. ಈ ಹಲ್ಲುಗಳ ಮೇಲೆ ಹಗೂರಾಗಿ ಬೆರಳಾಡಿಸಿ, ಅವು ಹಲ್ಲುಗಳೋ ಅಥವಾ ಮೊಗ್ಗುಗಳಿಂದ ಮಾಡಿರಿಸಿದ ಕೃತಕ ಹಲ್ಲುಗಳೋ ಎಂಬುದನ್ನು ಪರೀಕ್ಷಿಸಬೇಕು ಎಂದವಳ ಅಂತರಾತ್ಮ ನುಡಿಯಿತು. ತನ್ನದೆಯ ಮೇಲೆ ಅವನ ತಲೆಯನ್ನು ಒತ್ತಿಟ್ಟುಕೊಂಡು ಹಗೂರಾಗಿ ಅವನ ಬಾಯನ್ನು ಬಿರುಕಿಸಿ, ಪರೀಕ್ಷಿಸಬೇಕು ಎಂದುಕೊಂಡಳು. ಆಗ ಅವಳ ಮೂವತ್ತೆಂಟು, ಸಮುದ್ರದ ಅಲೆಗಳ ಮೇಲೆ ತೇಲುತ್ತಿರುವಂತೆ ಥರಥರಿಸುತ್ತಿತ್ತು. ಇಪ್ಪತ್ತೆರಡು ಕಿವಿಚಿದಂತಾಗಿ ಇಪ್ಪತ್ತೊಂದಕ್ಕೆ ಇಳಿಯಿತು. ಮೂವತ್ತೊಂಭತ್ತಾದರೋ ಸಡಗರದಿಂದ ಹುಚ್ಚೇರಿ ಸಂಭ್ರಮ ಪಡುತ್ತಿತ್ತು. ಇದನ್ನೂ ಪುಷ್ಪದಂತಿಯು ಗಮನಿಸಿದ, ಅವನ ಅಳತೆಗಳೂ ಆಗ ಮಾರ್ದನಿಕೊಡಲು ಪ್ರಾರಂಭಿಸಿದುವು.

ಆದರೆ ದೇವೇಂದ್ರನ ಅಧ್ಯಕ್ಷತೆಯಲ್ಲಿ ಸೇರಿರುವ ಬಹಿರಂಗ ಸಭೆ. ಕಾರಣ ಇಬ್ಬರೂ ಸಂಯಮವನ್ನು ತಂದುಕೊಂಡರು. ತೀರ್ಪುಗಾರರ ಪರವಾಗಿ, ನಳಕೂಬರನ ವರದಿಯಂತೆ ದೇವೇಂದ್ರನೇ ಆ ವರ್ಷದ ಫಲಿತಾಂಶವನ್ನು ಪ್ರಕಟಿಸಿದ.

"ಅಪ್ಸರೆ ಊರ್ವಶಿಯೇ, ಮಿಸ್ ಸ್ವರ್ಗ; ಸೌಂದರ್ಯರಾಣಿ ಸೊಬಗಿನ ಗಣಿ" ಎಂದು. ಸೌಂದರ್ಯರಾಣಿಗೆ ಮೊದಲು ನಜರ್ ಒಪ್ಪಿಸುವ ಹಕ್ಕು ಅಳತೆ ತೆಗೆದವನದ್ದು. ಸ್ವರ್ಗದಲ್ಲಿ ಚಾಲ್ತಿಯಲ್ಲಿರುವ ನಾಣ್ಯಗಳೆಂದರೆ, ಮುತ್ತು, ಚಿಕ್ಕಮುತ್ತು ಮತ್ತು ದೊಡ್ಡ ಮುತ್ತು, ನಜರ್ ಒಪ್ಪಿಸುವವರು ದೊಡ್ಡ ಮುತ್ತನ್ನೆ ಅರ್ಪಿಸಬೇಕು. ಸಂತೋಷದಿಂದ ಪುಷ್ಪದಂತಿಯು ನಜರನ್ನು ಒಪ್ಪಿಸಲು ಎದ್ದ. ನಜರ್ ಒಪ್ಪಿಸುವಾಗ "ಯಾವಾಗ" ಎಂದುಸುರಿದ. ನಜರನ್ನು ಒಪ್ಪಿಸಿಕೊಳ್ಳುತ್ತಾ ಊರ್ವಶಿಯು "ಹಂಸಸಂದೇಶ" ಎಂದು ಉತ್ತರಿಸಿದಳು. ಹಾಗಂದಾಗ ಅವಳ ತುಟಿಗಳ ರಂಗನ್ನು ಕಂಡ ಪುಷ್ಪದಂತಿಯ ಹಲ್ಲುಗಳು ಕಟಕಾರಿಸಿ ಬಿಡಬೇಕು ಎಂದುಕೊಂಡವು.

* * * * *

ಊರ್ವಶಿಯಿಂದ ಹಂಸ ಸಂದೇಶವನ್ನು ಪಡೆದ ಮೇಲೆ, ಪುಷ್ಪದಂತಿಯು ಮಾರನೆಯ ಸಂಜೆಯ ಕೈಂಕರ್ಯಕ್ಕೆ ಅಣಿ ಮಾಡಲು ಆರಂಭಿಸಿದ.

ಇಂದ್ರನರಮನೆಯಾದ ವೈಜಂತಿಯ ಹಿಂಬಾಗಿಲ ಬಳಿಗೆ ನಡೆದ. ಅರಮನೆಯ ಪಾಕಶಾಲೆಯ ಸಿಬ್ಬಂದಿಯವರು ಅಲ್ಲಿರುವ ಪರಿಚಾರಿಕರ ಗೃಹಗಳಲ್ಲಿ ವಾಸಿಸುತ್ತಾರೆ. ಸೋಮದೆ ಎಂದೊಬ್ಬ ಗಂಧರ್ವರ ಹೆಣ್ಣು, ಶಚೀದೇವಿಯ ವೈಯಕ್ತಿಕ ಅಡಿಗೆಯವಳಾಗಿ ಅಲ್ಲಿದ್ದಾಳೆ. ಶಚೀದೇವಿಗೆ ಬಯಕೆ ಬಂದಾಗ ಆಗ ರುಚಿ ಕಾಣುವಂತಹ ತಿಂಡಿತಿನಿಸುಗಳನ್ನು ಮಾಡುವುದರಲ್ಲಿ ಸೋಮದೆಯು ಎತ್ತಿದ ಕೈ. ಹಾಗೂ ಶಚೀದೇವಿಗೆ ಬಯಕೆಯು ಬರುವಂತೆ ಮಾಡಲು, ಎರಡು ಮೂರು ತಿಂಗಳುಗಳ ಹಿಂದೆ ನಡೆಸಬೇಕಾದ ಆಹಾರದ ಆರೈಕೆಯನ್ನೂ ಅವಳು ಬಲ್ಲಳು. ಸಲಹೆ ಮತ್ತು ಸಹಾಯಕ್ಕಾಗಿ ಗಂಧರ್ವರು ಆಕೆಯ ಬಳಿಗೆ ಹೋಗುವ ರೂಢಿ. ಆಕೆಯ ಬಳಿ ಹೋಗಿ ಪುಷ್ಪದಂತಿಯು ಮಾರನೆಯ ಸಂಜೆಯ ಅವಕಾಶವನ್ನು ಹೇಳಿಕೊಂಡ. ಉದಾರ ಮನಸ್ಸಿನ ಸೋಮದೆಯು "ಪುಷ್ಪ! ಅಂತಹ ಸಂದರ್ಭಗಳಲ್ಲಿ, ನವಿಲಿನ ನಾಲಿಗೆಯ ಚಟ್ನಿ, ಮೀನಿನ ಮೊಟ್ಟೆಗಳ ರಾಯತ, ಎಳ್ಳೊಡೆ

ಬಾಳಿಕಾಯಿಯ ಬೋಂಡಾ ಇವುಗಳನ್ನು ಸ್ವಲ್ಪ ಖಾರ ಮುಂದು ಮಾಡಿ ಅಡಿಗೆ ಮಾಡಿಸಬೇಕು. ಅಪ್ಸರೆಯೊಬ್ಬಳೇ ನಿನ್ನೊಡನೆ ಸಂತೋಷಕೂಟದಲ್ಲಿರುವಾಗ, ಝಿಲ್ ಝಿಲ್ ಸೋಮ ಇತ್ಯಾದಿಗಳನ್ನು ಕೊಂಡೊಯ್ಯಬೇಡ. ಅಶ್ವಿನೀಕುಮಾರರ ದವಾಖಾನೆಯಲ್ಲಿ ಮೂರು ನಕ್ಷತ್ರಗಳ ದ್ರಾಕ್ಷಾರಸವನ್ನು ಮಾರುತ್ತಾರೆ. ಬಾಣಂತಿಯಾಗಿದ್ದಾಗ ಶಚೀದೇವಿಗೆ ಅದನ್ನೇ ಕೊಡಲು ಪ್ರಾರಂಭಿಸಿದ್ದರು. ಮತ್ತೆ ಹತ್ತನೆ ದಿವಸವೇ ಅದನ್ನು ಮೊದಲು ಸಲ ಆಕೆಗೆ ಕೊಟ್ಟಿದ್ದು. ಆ ಸಂಜೆ ಮಗು ಜಯಂತನನ್ನು ನೋಡಲು ಇಂದ್ರನು ಬಂದಾಗ, ಅವನನ್ನು ಶಚಿದೇವಿ ಒಂದು ತೆರಹಾ ನೋಡಿದಳು. ಬೆದರಿದ ದೇವೇಂದ್ರ ಹಿಂತಿರುಗಿ ಓಡಿಹೋದ. ಮಾರನೆಯ ದಿನ ದೇವೇಂದ್ರನು ನನ್ನನ್ನು ಕರೆದು "ನಿನ್ನೆ ಯಾವ ಔಷಧಿಯನ್ನು ಅಥವಾ ಲೇಹ್ಯವನ್ನು ರಾಣಿಯವರು ಒಪ್ಪಿಸಿಕೊಂಡರು?" ಎಂದು ಕೇಳಿದರು. ಬಾಣಂತಿಯರು ಸೇವಿಸಬೇಕಾಗಿರುವ ಲೇಹ್ಯವನ್ನು ಗಂಡಂದಿರು ಮುಕ್ಕುವುದು ಎಲ್ಲರಿಗೂ ತಿಳಿದ ವಿಷಯ. ಹಾಗಾಗಿ ಅಚ್ಚರಿಗೊಳ್ಳದೆ ನಾನು ವಿವರವನ್ನಿತ್ತೆ. ನನಗೊಂದಿಷ್ಟು "ಮೂರು ನಕ್ಷತ್ರಗಳ ದ್ರಾಕ್ಷಾಸನ"ವನ್ನು ತಂದುಕೊಡು ಎಂದರು. ಕಳ್ಳತನದಲ್ಲಿ ಒಯ್ದು ಕೊಟ್ಟೆ. ಎರಡು ಗುಟುಕು ಕುಡಿದರು. ತೀವ್ರವಾಗಿ ನನ್ನ ಕಡೆಗೆ ನೋಡಿದರು. "ಬರೀ ಹೊಟ್ಟೆಯಲ್ಲಿ ಅದನ್ನು ಕುಡಿಯಬಾರದು. ಏನಾದರೂ ತಿಂಡಿಯನ್ನು ತಂದುಕೊಡ್ತೀನಿ" ಎಂದೆ. "ಬರಿ ಹೊಟ್ಟೆಯೇ ನಿನಗೆ, ಹಾಗಾದರೆ ಏನಾದರೂ ತಿಂದು ಬಾ" ಎಂದರು ದೇವೇಂದ್ರರು, ಎರಡೇ ಗುಟುಕಿನಲ್ಲಿ. ಪಾನಪ್ರವೀಣನಾದ ದೇವೇಂದ್ರನೇ ಹೀಗಾಗಬೇಕಾದರೆ, ಮೂರು ನಕ್ಷತ್ರಗಳ ದ್ರಾಕ್ಷಾಸವವು, ಮೂರು ಧೂಮಕೇತುಗಳ ದ್ರಾಕ್ಷಾಸವವೇ ಆಗಿರಬೇಕು. ಆದಕಾರಣ ಅದರ ಸಣ್ಣ ಕುಡಿಕೆಯೊಂದನ್ನು ಕೊಂಡು ಹೋಗು. ನೀನು ಸ್ವಲ್ಪವನ್ನೇ ಸೇವಿಸು. ಅಪ್ಸರೆಯರು ಎಷ್ಟನ್ನಾದರೂ ತಡೆದುಕೊಳ್ಳುತ್ತಾರೆ" ಎಂದು ಹೇಳಿದಳು.

"ಅದು ಸರಿ! ಆದರೆ ನೀ ಹೇಳಿದ ತಿಂಡಿಗಳನ್ನೆಲ್ಲಾ ಎಲ್ಲಿ ಮಾಡಿಸಲಿ, ಹದತಪ್ಪಿದರೆ ರುಚಿಗೆಡುತ್ತಲ್ಲಾ" ಎಂದು ಪುಷ್ಪದಂತಿ ಕೇಳಿದ.

"ನಾಳೆ ಸಂಜೆಯ ಹೊತ್ತಿಗೆ ನಾನೇ ಮಾಡಿಸಿಡುತ್ತೇನೆ. ಬೇಗ ಬಂದು ತೆಗೆದುಕೊಂಡು ಹೋಗು" ಎಂದು ಸೋಮದೆಯು ಆಶ್ವಾಸನೆ ನೀಡಿದಳು. ಸ್ವರ್ಗದ ನಾಣ್ಯದಲ್ಲಿ ಆಕೆಗೆ ಲಂಚಕೊಟ್ಟು ಪುಷ್ಪದಂತಿಯು ಅಶ್ವಿನಿ ದೇವತೆಗಳ ದವಾಖಾನೆಯ ಕಡೆಗೆ ಹೆಜ್ಜೆಗಳನ್ನು ಕುಣಿಯುತ್ತಾ ಹಾಕಿದ.

ಪಾರಿಜಾತ ವನದ ಪಕ್ಕದ ರಸ್ತೆಯಲ್ಲಿ ಹೋದರೆ ಅಶ್ವಿನಿಕುಮಾರರ ದವಾಖಾನೆಯು ಸಿಗುತ್ತದೆ. ಪುಷ್ಪದಂತಿಯು ಆ ಮಾರ್ಗದಲ್ಲಿ ನಡೆಯುತ್ತಿದ್ದಾಗ ಬನದಲ್ಲಿ ತನ್ನ ಸ್ನೇಹಿತ ಸುಮಗಂಧಿಯು ಒರಗಿ ಕುಳಿತಿದ್ದ. ಯಾವುದೋ ಗಹನವಾದ ಚಿಂತೆಯಲ್ಲಿ ಅವನು ಇದ್ದಂತೆ ಕಾಣಿಸಿತು. ಯಾವುದನ್ನೋ ಅಟ್ಟಿಸಿಕೊಂಡು ಹೋಗಿ ನೇತಿ, ನೇತಿ, ಇದು ಅದಲ್ಲ ಎಂದು ಕಂಡುದನ್ನೆಲ್ಲಾ ತಿರಸ್ಕರಿಸುವ ಯೋಗಿಯಂತೆ ಸುಮಗಂಧಿ ಕಾಣಿಸಿದ. ವಿಹ್ವಲನಾಗಿದ್ದ.

ಸಮಗಂಧಿ ಪುಷ್ಪದಂತಿಯ ಸ್ನೇಹಿತನೇನೋ ದಿಟ. ಆಪ್ತ ಸ್ನೇಹಿತನೂ ಹೌದು. ಕಾಡಮಲ್ಲಿಗೆಯ ಕಾಡುವ ಪರಿಮಳವು, ಮಾತನಾಡಲು ತೆರೆದಾಗ, ಸುಮಗಂಧಿಯ ಬಾಯಿಯಿಂದ ಸುತ್ತಲೂ ಪರಿಸರಿಸುತ್ತಿತ್ತು. ಬಲು ಸೊಂಪಿದ್ದ ಆ ಪರಿಮಳದಿಂದಲೇ, ಆ ಹೆಸರನ್ನು ಇಟ್ಟು ಅವನ ತಾಯಿ ತಂದೆಯರು ನಾಮಕರಣ ಮಾಡಿದ್ದರು. ಅವನ ಬಾಯಿಗೆ ಬಾಯಿಬಿಟ್ಟು ಈ ಸೊಂಪಿನ

ಪರಿಮಳವನ್ನು ಆಘ್ರಾಣಿಸಲು ಸ್ವರ್ಗದ ಸುಮಾರು ಹೆಣ್ಣುಗಳು ಹಾತೊರೆಯುತ್ತಿದ್ದುವು. ಈ ಕಾರಣದಿಂದಾಗಿ ಸ್ವರ್ಗವಾಸಿಗಳಾದ ಗಂಡಸರಲ್ಲಿ ಸುಮಗಂಧಿಯು ಮತ್ಸರವನ್ನು ಉಕ್ಕಿಸಿದ್ದನು. ಉಳಿದಿದ್ದ ಅವನ ಕೆಲವೇ ಸ್ನೇಹಿತರಲ್ಲಿ ಪುಷ್ಪದಂತಿಯು ತುಂಬಾ ಅನ್ಯೋನ್ಯವಾಗಿದ್ದವನು.

ಹಿಂದೊಮ್ಮೆ ಸುಮಗಂಧಿಯು ಕಿರಾತರ ಕಾಲನಿಯತ್ತ ಹೋಗಿದ್ದನು. ಮೃಷ್ಟಾನ್ನವನ್ನು ದಿನಾಗಲೂ ಭೋಜನ ಮಾಡುವ ಪುಣ್ಯವಂತನು, ಒಮ್ಮೊಮ್ಮೆ ಹಳ್ಳಿಯ ಕಡೆ ಹೋಗಿ ಸೀಬೇಕಾಯಿ, ಸೀತಾಫಲದ ಹಣ್ಣು, ರಾಗಿ ಮುದ್ದೆ, ಅವರೇಕಾಳುಗಳನ್ನು ಬಯಸುವುದಿಲ್ಲವೇ? ಅದೇ ರೀತಿ ಸುಸಂಸ್ಕೃತನಾದ ಸುಮಗಂಧಿಗೆ ಗ್ರಾಮ್ಯಸ್ಥೆಯರ ಬಯಕೆಯುಂಟಾಗಿತ್ತು. ನಂದನವನದ ಬಳಿ ತರಕಾರಿಯನ್ನು ಹೊತ್ತು ತಂದಿದ್ದ ಕಿರಾತರ ಹೆಣ್ಣೊಂದನ್ನು ಕಂಡಿದ್ದ.

ಕಿರಾತರ ಕಾಲನಿಯಲ್ಲಿ ತರಕಾರಿಯ ಕಿರಾತ ಹೆಣ್ಣನ್ನು ಕಾಣುವುದು ಕಷ್ಟವೇನೂ ಆಗಿರಲಿಲ್ಲ. ಕಿರಾತ ಹೆಣ್ಣಿಗೂ ಭಿನ್ನ ರುಚಿಯ ಅಮಲು ಏರಿತ್ತು. ಆದರೆ ಪಾಪಾಸು ಕಳ್ಳಿಯ ಪೊದೆಯ ಹತ್ತಿರ ಆ ಹೆಣ್ಣಿನೊಡನೆ ಜಾನಪದ ನೃತ್ಯ ಮಾಡಲಾರಂಭಿಸಿದಾಗ, ಭರ್ಜರಿ ದೇಹದ ಕಿರಾತನೊಬ್ಬನು ಅಲ್ಲಿಗೆ ಹಠಾತ್ತನೆ ಬಂದಿದ್ದ. ತರಕಾರಿಯ ಹೆಣ್ಣು ಆತನ ಮಗಳಾಗಿರಬೇಕೇ? ಬೈದು ಅವಳನ್ನು ಮನೆಗೆ ಕಳುಹಿಸಿ, ಕಿರಾತನು ಸುಮಗಂಧಿಯನ್ನು ದರದರ ಎಳೆದುಕೊಂಡು ತನ್ನ ಗುಡಿಸಲಿನತ್ತ ಹೋಗಿದ್ದ. ಯಾವ ಪ್ರಾಣಿಯನ್ನು ಇಂದಿನ ಅಡಿಗೆಗೆ ಗಂಡ ಹೊಡೆದು ತಂದಿದ್ದಾನೆ ಎಂದು ಕುತೂಹಲದಿಂದ ಕಿರಾತನ ಎಂಟೂ ಹೆಂಡಿರು ಗುಡಿಸಿಲಿನ ಬಾಗಿಲಾಚೆ ಬಂದು ನಿಂತರು. ಅಳುತ್ತಾ ಸುಮಗಂಧಿಯು ಮೈಯೆಲ್ಲಾ ತರಚಿಕೊಂಡು ಬಿದ್ದಿದ್ದ. ಆದರೆ ಅಳುತ್ತಿದ್ದವನ ಬಾಯಿನಿಂದ ಸೊಗಸಾದ ಪರಿಮಳವು ಹೊರಸೂಸುತ್ತಿತ್ತು. ಇದನ್ನು ಆಘ್ರಾಣಿಸಿದ ಕಿರಾತನ ಪಟ್ಟದ ಹೆಂಡತಿಯು "ಒಡೆಯ! ಇದನ್ನು ಬೇಯಿಸಿದರೆ ಎಲ್ಲರಿಗೂ ಎರಡು ತುತ್ತು ಕೂಡ ಸಿಗುವುದಿಲ್ಲ. ಆದರೆ ಇದು ಅತ್ತರೆ ಸುತ್ತಲೂ ಊದುಕಡ್ಡಿ ಹಚ್ಚಿದ ಹಾಗಾಗುತ್ತೆ. ಆದ್ದರಿಂದ ಇವನನ್ನು ಮಲಗುವ ತೊಟ್ಟಿಯಲ್ಲಿ ಕಟ್ಟಿ ಹಾಕೋಣ. ಸ್ವಲ್ಪ ಚುಚ್ಚಿದರೆ ಅಳುತ್ತದೆ. ಆಗ ಹಾಲು ಮಡ್ಡಿಯನ್ನು ಹಚ್ಚಿದ ಹಾಗಾಗುತ್ತೆ" ಎಂದಳು.

ಕಿರಾತನ ಕಾಲನಿಗೆ ಹೋಗಿದ್ದ ಸುಮಗಂಧಿಯು ಹಿಂತಿರುಗಿ ಬರಲಿಲ್ಲ, ಎಂದು ತನ್ನ ಹೆಂಡತಿ ಚಿತ್ರಲೇಖೆಯೇ ಮೊದಲು ಪುಷ್ಪದಂತಿಗೆ ತಿಳಿಸಿದ್ದು. "ನಿಮ್ಮ ಗೆಳೆಯರು ಅಲ್ಲಿ ಏನಾದರೋ. ಏನಾದರೂ ಮಾಡಬಾರದೆ?" ಎಂದು ಕಾತರ ವ್ಯಕ್ತಪಡಿಸಿದ್ದಳು. ಪುಷ್ಪವಂತಿಯು ಶ್ರೇಷ್ಠನಾದ ಶಿವಭಕ್ತ ಪರಾಯಣ. ಕಿರಾತರೂ ಶಿವಭಕ್ತರು. ಆದ ಕಾರಣ ಕಿರಾತರ ಕಾಲನಿಯ ಮುಂದಿದ್ದ ನಂದಿಯ ಬಳಿ ನಿಂತು ಶಿವಸ್ತುತಿಯನ್ನು ಮಾಡಿದಾಗ ಕಿರಾತರೆಲ್ಲರೂ ಅಲ್ಲಿಗೆ ಬಂದರು. ಶಿವಭಕ್ತ ಪುಷ್ಪದಂತಿಗೆ ಆದರಾತಿಥ್ಯ ನೀಡಿದರು. "ಏನಾಗಬೇಕಾಗಿತ್ತು ಗುರುಗಳಿಗೆ" ಎಂದು ಬಿನ್ನವಿಸಿಕೊಂಡರು.

"ನನ್ನ ಗೆಳೆಯ ಸುಮಗಂಧಿಯು ಇತ್ತ ಬಂದಿದ್ದ. ಮತ್ತೆ ಹಿಂದಿರುಗಲಿಲ್ಲ. ಇಲ್ಲಿ ಎಲ್ಲಾದರೂ ಇದಾನೆಯೇ? ಅಥವಾ ಶಿವಸಾನ್ನಿಧ್ಯವನ್ನು ಅವನಿಗೆ ದೊರಕಿಸಿ ಕೊಟ್ಟಿರಾ?" ಎಂದು ಪುಷ್ಪದಂತಿಯು ಕೇಳಿದ್ದ.

ಕಿರಾತರ ತರಕಾರಿ ಹೆಣ್ಣು ಆಗ ತನ್ನ ತಂದೆಯನ್ನು ಪುಷ್ಪದಂತಿಗೆ ಬೆರಳು ಮಾಡಿ ತೋರಿಸಿತು.

ನೆರೆದಿದ್ದ ಜನಸಮೂಹದಲ್ಲಿ ಯಾವ ಮಾಯೆಯಿಂದಲೋ ಅದು ಬಂದು ನಂದಿಯ ಬಾಲದ ಹತ್ತಿರ ಬಲವಾಗಿ ಕೂತಿತ್ತು.

ತನ್ನ ಗುಡಿಸಲಿಗೆ ಕರೆದುಕೊಂಡು ಹೋಗಿ ಅಂತಃಪುರದಲ್ಲಿ ಕಟ್ಟಿಹಾಕಿದ್ದ ಸುಮಗಂಧಿಯನ್ನು ತೋರಿಸಿ "ಇದೇನಾ ನಿಮ್ಮ ಗೆಳೆಯ ಗುರುಗಳೇ?" ಎಂದು ಕಿರಾತನು ಕೇಳಿದ.

"ಹೌದು" ಎಂದು ಹೇಳಿ ಪುಷ್ಪದಂತಿಯು ಸುಮಗಂಧಿಯನ್ನು ಅಪ್ಪಿಕೊಂಡಿದ್ದ. ಗುರುದಕ್ಷಿಣೆ ಎಂಬಂತೆ ಸುಮಗಂಧಿಯನ್ನು ಪುಷ್ಪದಂತಿಗೆ ದಾನ ಮಾಡಿದ್ದರು ಆ ಕಿರಾತರು.

"ತುಂಬಾ ನೊಂದೆಯಾ? ಬಹಳ ಕಷ್ಟವಾಯಿತೇ, ಕಟ್ಟಿಹಾಕಿದ್ದು?" ಎಂದು ಹಿಂತಿರುಗುವಾಗ ಸುಮಗಂಧಿಯನ್ನು ಪುಷ್ಪದಂತಿಯು ಕೇಳಿದ.

"ಕಟ್ಟುಗಳಿಂದ ಅಂತಹ ಕಷ್ಟವೇನೂ ಆಗಲಿಲ್ಲ. ಆದರೆ ಕಣ್ಣುಗಳು ಕಂಡುದರಿಂದ ನರಕ ಯಾತನೆಯಾಯಿತು" ಎಂದು ಸುಮಗಂಧಿಯು ಉತ್ತರಿಸಿದ್ದ.

ಇಂತಹ ಅನ್ಯೋನ್ಯವಾದ ಗೆಳೆಯನು ಪಾರಿಜಾತದ ಮರದ ಅಡಿಯಲ್ಲಿ ಬಿಕೋ ಅಂತ ಬ್ರಹ್ಮಚಾರಿಗಳ ತರಹ ಕೂತಿರುವುದನ್ನು ಕಂಡು ಪುಷ್ಪದಂತಿಗೆ ಕೆಟ್ಟ ಅನ್ನಿಸಿತು. ಅವನ ಕಷ್ಟವೇನು, ನೆರವು ಬೇಕೇ ಎಂದು ಕೇಳುವ ಕಾತರ ಉಂಟಾಯಿತು.

ಅದೂ ಅಲ್ಲದೆ ಮಾರನೆಯ ಸಂಜೆ ತನಗೆ ದೊರೆತ ಅಪ್ಸರಾವಕಾಶವನ್ನು ಗೆಳೆಯನಿಗೆ ತಿಳಿಸಿ ಅವನ ಅಸೂಯೆಯನ್ನು ಮೆಚ್ಚುಗೆಯನ್ನು ಪಡೆಯಬೇಕೆಂಬ ಹಂಬಲವು ಪುಷ್ಪದಂತಿಗೆ ಉಂಟಾಯಿತು. ನಾವು ಪಡುವ ಭೋಗ್ಯ ಸುಖವು, ಇನ್ನೊಬ್ಬರು ಕರುಬುವಂತಾದಾಗ, ಇಮ್ಮಡಿಯಾಗುತ್ತದೆ ಎಂಬುದು ಎಲ್ಲರೂ ತಿಳಿದ ವಿಷಯ.

ಹೀಗೆ ಎರಡು ಕಾರಣಗಳಿಂದ ಪುಷ್ಪದಂತಿಯು ಪಾರಿಜಾತವನದೊಳಕ್ಕೆ ಪ್ರವೇಶಿಸಿದ. ಸುಮಗಂಧಿಯ ಪಕ್ಕದಲ್ಲಿ ಕುಳಿತು ಅವನ ಬೆನ್ನನ್ನು ತಟ್ಟುತ್ತಾ,

"ಯಾಕಯ್ಯಾ ಮಂಕುಮಂಕಾಗಿ ಕೂತಿದ್ದಿ?" ಎಂದು ಕೇಳಿದ.

"ಮುಂಬರುವ ಸೊಬಗಿನ ಮುಂದೆ ಇಂದು ಮಂಕೇ" ಎಂದುತ್ತರಿಸಿದ ಸುಮಗಂಧಿ.

"ಅಂತಹಾ ಸೊಬಗು ನನಗೆ ನಾಳೆ ಸಂಜೆ ದೊರಕುವುದಿದೆ. ಅಂತಹ ಅದೃಷ್ಟ ನಿನ್ನನ್ನೂ ಕೆಡವಿಕೊಂಡಿದೆಯೇ? ಹಾಗಾದರೆ ಅದೇನು ಹೇಳಯ್ಯಾ" ಎಂದ ಪುಷ್ಪದಂತಿ,

"ಅದ್ಯಾವ ಸೊಬಗೋ ನಿನಗೆ ದೊರಕುವುದು?" ಎಂದು ಸುಮಗಂಧಿ ಕೇಳಿದ.

ಊರ್ವಶಿಯಿಂದ ಬಂದಿದ್ದ ಹಂಸ ಸಂದೇಶವನ್ನು ಪುಷ್ಪದಂತಿಯು ವಿವರಿಸಿದ. ಆದರೂ ಸಹಜವಾದ ಎಚ್ಚರದಿಂದ ಮೋಟಲಿನ ನಂಬರನ್ನಾಗಲೀ ಗುರುತನ್ನಾಗಲೀ ಹೇಳಹೋಗಲಿಲ್ಲ.

ಬರುತ್ತಿದ್ದ ನಗುವನ್ನು ತಡೆಹಿಡಿದು ಸುಮಗಂಧಿ,

"ಮೋಟಲ್ ೩೬೮ರಲ್ಲಿ ತಾನೇ ಕೈಂಕರ್ಯ?" ಎಂದು ಕೇಳಿದ.

"ಈ ಬೆಳಿಗ್ಗೆ ಊರ್ವಶಿಯ ಮನೆಯಲ್ಲಿ ಮ್ಯಾಟಿನಿ ನೃತ್ಯವಿತ್ತು. ತುಂಬಾ ಒತ್ತಾಯ ಪಡಿಸಿದ್ದರಿಂದ ನಾನು ಹೋಗಲೇ ಬೇಕಾಗಿತ್ತು. ನಾಳೆ ಸಂಜೆಯ ಸಂಭ್ರಮವನ್ನು ಊರ್ವಶಿಯು ನನಗೆ ಹೇಳಿ, ಸಂದೇಶವನ್ನು ಕಳಿಸಬೇಕು ಎಂದಳು. ಆಗ ನಾನೇ ಆ ಸಂದೇಶವನ್ನು ಹೆಣ್ಣಕ್ಷರಗಳಲ್ಲಿ ಬರೆದು ಅವಳ ಸಹಿಯನ್ನೂ ಹಾಕಿದೆ" ಎಂದ ಸುಮಗಂಧಿ.

ಇದನ್ನು ಕೇಳಿದ ಪುಷ್ಪದಂತಿಯ ಜಂಬದ ಬುರುಡೆಯು ಬಿರುಕುಬಿಟ್ಟಿತ್ತು. ತಾನು ಯಾವ ಸಾಹಸವನ್ನು ಸಾಧಿಸುತ್ತೇನೆಂದು ಜಂಭವನ್ನು ಪಟ್ಟಿದ್ದನೋ ಅದೇ ಸಾಹಸವನ್ನು ತನ್ನ ಗೆಳೆಯ ಲೀಲಾಜಾಲವಾಗಿ ನಡಸೇಬಿಟ್ಟಿದ್ದ. ಅಂದಮೇಲೆ ಅವನಿಗೆ ಅಸೂಯೆಯಾದರೂ ಹೇಗೆ ಉಂಟಾದೀತು? ಪುಷ್ಪದಂತಿಯ ಸುಖವು ಇಮ್ಮಡಿಸುವುದಿರಲಿ, ಸದ್ಯಕ್ಕೆ ಈಗಾಗಲೇ ಅರ್ಧವಾಗಿ ಹೋಗಿತ್ತು.

"ನನ್ನದನಕ ಹೇಳಿಯಾಯ್ತು! ಆದರೆ ನಾಳೆ ಸಂಜೆ ಮುಂಬರುವ ನಿನ್ನ ಮೋಜಿನ ವಿವರಗಳೇನು?" ಎಂದು ಕೇಳಿದ ಪುಷ್ಪದಂತಿ.

ಗೆಳೆಯನ ಮುಖವನ್ನೇ ದಿಟ್ಟಿಸಿ ನೋಡಿದ ಸುಮಗಂಧಿ. ಕಿರಾತರ ಕಾಲನಿಯ ಸೆರೆಯ ರಾತ್ರಿಗಳ ನೆನಪೂ ಉಂಟಾಯಿತು, ಗೆಳೆಯನಿಂದ ತಾನು ಉದ್ಧಾರ ಆದುದನ್ನೂ ಸ್ಮರಿಸಿಕೊಂಡ. ಶಿವಭಕ್ತಾಗ್ರಣಿಯ ಎದುರಿಗೆ ಸತ್ಯವನ್ನು ನುಡಿಯಬಾರದು ಎಂದುಕೊಂಡ. ಸುಳ್ಳು ಹೇಳಿ ಅವನನ್ನು ತಣಿಸಬೇಕು ಎಂದು ನಿರ್ಧರಿಸಿದ.

"ನಳಕೂಬರನ ಜತೆಯಲ್ಲಿ ಪಗಡೆಯ ಸ್ಪರ್ಧೆಯನ್ನು ಗೊತ್ತು ಮಾಡಿದ್ದೆ. ಅದನ್ನು ಗೆದ್ದರೆ ನವನಿಧಿಗಳ ಅಂಚಾದರೂ ಕೈಗೆ ಸಿಗುತ್ತೆ" ಎಂದ.

"ನಾಳೆ ಸಂಜೆ ನಿನ್ನ ಸತಿಯಾದ ಚಿತ್ರಲೇಖೆಯು ನನ್ನ ಮೋಟಲಿಗೆ ಬರುವಂತೆ ಸಂದೇಶವನ್ನು ಕಳಿಸಿದ್ದೇನೆ. ಅವಳೂ ಒಪ್ಪಿದ್ದಾಳೆ" ಎಂದು ಸುಮಗಂಧಿಯು ಹೇಗೆ ತಾನೆ ಹೇಳಬಲ್ಲ!

ಅಶ್ವಿನಿ ಕುಮಾರರ ದವಾಖಾನೆಯಿಂದ ಮೂರು ನಕ್ಷತ್ರದ ದ್ರಾಕ್ಷಾಸವವನ್ನು ಪುಷ್ಪದಂತಿ ಕೊಂಡೊಯ್ದ. ಸೋಮದೆಯೂ ಮಾರನೆಯ ಸಂಜೆಯ ಹೊತ್ತಿಗೆ ಉಪಹಾರದ ಮಡಿಪೆಟ್ಟಿಗೆಯನ್ನು ಸಿದ್ಧಪಡಿಸಿಕೊಟ್ಟಳು.

ಮೋಟೆಲ್ ೩೬೮ ರಲ್ಲಿದ್ದವರು ಬೆಳದಿಂಗಳಿನಲ್ಲಿ ಬೆವತುಹೋದರು. ಚಿತ್ರಲೇಖೆಯು ಬೆಳಗಾಗ ಹಿಂತಿರುಗಿದಾಗ, ಅವಳ ಬಾಯೆಲ್ಲವೂ ಪರಿಮಳದಿಂದ ಆವೃತವಾಗಿತ್ತು.

ಸಹಬಾಳ್ವೆಗೆ ಹೆಸರಾದವರು ಗಂಧರ್ವರು, ಅಪ್ಸರೆಯರು.

■

# ಬದ್ಬುದಳ ಬಹುಮಾನ

**ತ**ರುಣಿಯರಿಬ್ಬರು. ಅದರಲ್ಲೂ ಅಪ್ಸರಸಿಯರು ಜತೆಗೂಡಿದಾಗ, ಮಾತಿನ ಮಳೆಗೆ ಬರುವುಂಟೇ?

"ಬದ್ಬುದಾ! ಒಂದು ಗುಟ್ಟು ನಿನಗೆ ಹೇಳಬೇಕು! ಕಾರಂಥಮ ಸರೋವರದಲ್ಲಿ ಧಡೂತಿ ಮೀನೊಂದಿದೆ. ತೇಲಾಡುತ್ತ ಅದು ಈಜಾಡುವುದನ್ನು ನೋಡಿದರೆ ಮೈಯೆಲ್ಲಾ ಮುಲು ಮುಲು ಆಗುತ್ತದೆ. ಆಸೆಯಾಗುತ್ತದೆ, ಭಯವೂ ಆಗುತ್ತದೆ. ಅದರೊಡನೆ ಈಜಾಡಬೇಕು ಎಂಬ ಆಸೆ. ಇಳಿದರೆ ನುಂಗಿಬಿಡುತ್ತೇನೋ ಎನ್ನುವ ಭಯ.

ಮೀನಿನ ಹೆಜ್ಜೆಯನ್ನು ಕಂಡವರುಂಟೇನೇ? ನೃತ್ಯವನ್ನು ನೀ ಮಾಡುವಾಗ, ನಿನ್ನ ಹೆಜ್ಜೆಗಳನ್ನೂ ಮಂದಿ ಕಾಣುವುದಿಲ್ಲ. ನಿನ್ನಂತೆಯೇ ಆ ಮೀನು ಕೂಡ. ಫಳಫಳ-ಗುಳುಗುಳು ಕಣ್ಣುಗಳನ್ನು ಝುಳಪಿಸುತ್ತದೆ.

ಆದರೆ ಆ ಸರೋವರದಲ್ಲಿ ನಾವಾರೂ ಇಳಿದು ಈಜಾಡುವಂತಿಲ್ಲ. ಕ್ಷೀರಸಾಗರದ ಮಥನವಾದಾಗ, ಅಪ್ಸರಸಿಯರು ನಾವು ಜನ್ಮತಾಳಲಿಲ್ಲವೇನೇ? ಹಾಗಿದ್ದರೂ ಆ ಚೆಂದದ ಅಂದವಾದ ಮೀನು ಅಪ್ಸರಸಿಯರಾದ ನಾವು ಝುಳಕ್ಕೆ ಇಳಿದರೆ, ನಮ್ಮನ್ನೂ ನುಂಗಿ ಬಿಡುವಂತೆ ಬೆದರಿಸುತ್ತಲ್ಲೇ? ಬಿರಿಬಾಯ ಬಿಡತ್ತಲ್ಲೇ?

ಕಾಮನ ಹಬ್ಬದ ಪರೀಕ್ಷಾರ್ಥ ಎರಡು ದಿನಗಳ ಬಿಡುವು ನಮಗೆ ದೊರಕಿದೆ. ತಯ್ಯಾರಿ ತೆಗೆದುಕೊಳ್ಳಲಿ ಎಂದು. ನಮಗ್ಯಾಕೇ ತಯ್ಯಾರಿ? ಕಾರಂಥಮ ಸರೋವರದ ಬಳಿಯಲ್ಲಿರುವ ಹೋಟಲಿನಲ್ಲಿ ರಿಸರ್ವ್ ಮಾಡಿಸಿದ್ದೇನೆ. ಯಾರಿಗೂ ಹೇಳದೆ, ನಾವಿಬ್ಬರೂ ಅಲ್ಲಿಗೆ ಹೋಗಿ ಆ ಸುಂದರ ಮೀನಿನ ಚೆಂದಾಟವನ್ನು ನೋಡೋಣ. ಬಲು ಮಜ ಕಣೆ, ಆ ನೋಟ. ಆ ನೋಟದೆದುರಿಗೆ ಸಿನಿಮಾಗಳು ಸಪ್ಪೆ ಅಂದರೆ ಸಪ್ಪೆ. ಉಹ್ಞೂ ಅನ್ನಬೇಡ. ಬಾರೇ ಹೋಗಿ ಬರೋಣ."

ಎಂದಳು ವನ್ದಾ. ಹದಿನೆಂಟು ಚೈತ್ರಗಳ ಅಪ್ಸರೆಯವಳು. ಅವಳಿಗಿಂತ ಬುದ್ಬುದಾ ಒಂದು ವರ್ಷ ಕಿರಿಯಳು. ಆದರೆ ಅವರ ಮೈತ್ರಿಯು ಕಾಲಾತೀತವಾಗಿತ್ತು. ವರ್ಷವು ಹರ್ಷದಾಯಕ!

"ಹೌದೇನೇ? ವನ್ದಾ! ಅಲ್ಲಿಗೆ ನೀನು ಯಾವಾಗ ಹೋಗಿದ್ದೆ? ಯಾರ ಜತೆಯಲ್ಲಿ? ನನಗೆ ಈ ಮೊದಲೇ ಹೇಳಲೇ ಇಲ್ಲವಲ್ಲೇ?" ಎಂದು ಬುದ್ಬುದಳು ಆಕ್ಷೇಪಿಸಿದಳು.

"ನಿನಗೆ ಹೇಳಿ ಹೋಗೋಣ ಅಂತ ನಿರ್ಧರಿಸಿದ್ದೆ. ಆದರೆ ಧಢಂ ಅಂತ ಚಿತ್ರಸೇನ ಬಂದ.

ಕಾರಂಥಮದ ಹೋಟಲಿಗೆ ಅನಾಮತ್ತು ಎತ್ತಿಕೊಂಡು ಹೋದ. ಅವನನ್ನು ಕಂಡ ಕ್ಷಣದಲ್ಲಿ ನನ್ನ ನಾನೇ ಮರೆತೆ. ಅಣಿಮಾ, ಲಘಿಮಾ ಆದೆ. ಕಾರಣ ನಿನಗೆ ತಿಳಿಸಲಾಗಲಿಲ್ಲ.

ಹೋಟಲಿನಲ್ಲಿದ್ದ ಮಾಣಿಯು, ಕಾರಂಥಮದ ಸ್ಥಳಮಹಾತ್ಮೆಯನ್ನು ವಿವರಿಸಿದ. ಆಗ ಚಿತ್ರಸೇನ ಝುಳಕಕ್ಕೆ ಹೋಗಿ ಶೃಂಗಾರವನ್ನು ಮಾಡಿಕೊಂಡು ಬರಲು ಹೋಗಿದ್ದ.

ಸರೋವರವನ್ನು ನೋಡಲು, ಮತ್ತು ಅಲ್ಲಿ ಈಜಾಡುವ ಪ್ರಯತ್ನವನ್ನು ಮಾಡಲು ಎರಡು ದಿನ ಸಂಜೆಗಳ ನಂತರವೇ ಅವಕಾಶವು ದೊರೆತಿದ್ದು, ನಮಗೆ.

ಈಜುಡುಪನ್ನು ಧರಿಸಿ, ಝುಳಕಕ್ಕೆಂದು ಮುಂಜಾವಿನಲ್ಲಿ ಸರೋವರದ ಬಳಿಗೆ ಹೋದೆವು.... "ಸುಸ್ತಾಗಿದೆ ನನಗೆ, ಕಟ್ಟೆಯ ಮೇಲೆ ಕುಳಿತು ವಿಶ್ರಮಿಸಿಕೊಳ್ಳುತ್ತೇನೆ, ಬೇಕಾದರೆ ನೀನೀಗ ಹೋಗು" ಎಂದ ಚಿತ್ರಸೇನ. ನನಗಾಗ ಅತ್ಯುತ್ಸಾಹವಿತ್ತು. ಅತ್ಯಂತ ಉಲ್ಲಾಸವಿತ್ತು. ಕಾರಣ ಸರೋವರಕ್ಕೆ ಧುಮುಕಿದೆ.

ಅರೆ ಕ್ಷಣದಲ್ಲಿ ಚಂದದ ಆ ಭಾರೀ ಮೀನು ಸರ್ರಂತ ಬಂದಿತು. ತುಂಬು ಬಾಯನ್ನು ವಿಶಾಲವಾಗಿ ತೆರೆದಿತ್ತು. ಅದನ್ನು ಕಂಡು ಭಯವಾಯಿತು. ಆಶ್ಚರ್ಯವೂ ಆಯಿತು.

ನನ್ನ ಈಜುಡುಪನ್ನು ನೋಡಿದ್ದೀಯಲ್ಲಾ! ಅಂಗೈಯ್ಯಿನಲ್ಲಿ ಮರೆಮಾಚಿ ದೋರೆಗಾಯನ್ನು ಪ್ರದರ್ಶಿಸುತ್ತದೆ. ಖಗ ಮೃಗಗಳು ಕೂಡ ಬೆಬ್ಬೆರಗಾಗಿ ನೋಡುತ್ತವೆ. ಅಂತಹ ಉಡುಪಿನವಳನ್ನು, ಮೀಸೆಯನ್ನು ಬೆಳೆಸಿಕೊಂಡಿದ್ದ ಆ ಮೀನು ಹೆದರಿಸುತ್ತ ಬಂದಿತು. ಸದ್ಯ! ನನ್ನ ಪುಣ್ಯ! ತಟ್ಟಂತ ಚಿತ್ರಸೇನ ನೀರಿಗಿಳಿದು ನನ್ನ ಕೈಯನ್ನು ಹಿಡಿದು ದಡಕ್ಕೆ ಎಳೆದುಕೊಂಡು ಹೋಗಿ ತೊಡೆಯ ಮೇಲೆ ಕೂರಿಸಿಕೊಂಡು ಸಮಾಧಾನವನ್ನು ಮಾಡಿದ. "ಆ ಮೀನು ಸ್ವಲ್ಪ ವಕ್ರ ವಕ್ರವಾಗಿ ಆಡುತ್ತೆ. ಕೆಲವರರನ್ನು ಕಂಡರೆ ಬೆದರಿಸುತ್ತೆ. ಮತ್ತೆ ಕೆಲವರನ್ನು ಕಂಡರೆ ಚೆಲ್ಲಾಡುತ್ತೆ. ಆದರೆ ನೀರಿನಲ್ಲಿ ಅದು ಆಡುವುದನ್ನು ನೋಡುವುದು ಬಲು ಚೆಂದ ಕಣೆ, ಬಾರೇ ಹೋಗೋಣ" ಎಂದಳು ವನ್ದಾ.

ಬದ್ದುಬದಳು ನಗುವುದಕ್ಕೆ ಶುರು ಮಾಡಿದಳು. "ಇನ್ನೇನು ತಾನೇ ಮಾಡುತ್ತದೆಯೇ ಆ ಮೀನು! ಸರೋವರದಲ್ಲಿ ಸ್ನಾನಕ್ಕೆ ಇಳಿಯುವಾಗ ತುಂಡು ಬಟ್ಟೆಯನ್ನು ಉಟ್ಟಿದ್ದರೆ "ಮಡಿ" ಹೆಂಗಸರು ಅಂತ ಅರ್ಥವಾಗುತ್ತೆ. ಸರೋವರವು ಮೈಲಿಗೆಯಾಗುತ್ತೇನೋ ಎಂಬ ಭಯದಿಂದ, ಮೀನು ಹಾಗೆ ಹೆದರಿಸಿರಬೇಕು. ಇಷ್ಟೆಲ್ಲಾ ನೀನು ಹೇಳಿದ ಮೇಲೆ ಹೋಗಿ ನೋಡಬೇಕೆಂದು ನನಗೂ ಆಸೆಯಾಗುತ್ತಿದೆ. ಆದ್ದರಿಂದ ನಿನ್ನ ಜತೆಯಲ್ಲಿ ಬರುತ್ತೇನೆ. ಯಾರಿಗೂ ತಿಳಿಸದೆ ನಾವಿಬ್ಬರೇ ಹೋಗೋಣ" ಎಂದಳು.

* * * * *

ಮಾರನೆಯ ಪ್ರಾತಃಕಾಲ, ಹೋಟೆಲಿನಲ್ಲಿ ಎರಡೆರಡು ಬಾಳೆಕಾಯಿ ಬೋಂಡಾ ಎರಡೆರಡು ಮಸಾಲೆ ಮೊಟ್ಟೆಗಳನ್ನು ತಿಂದು ಅಪ್ಸರಸಿಯರಿಬ್ಬರೂ ಕಾರಂಥಮ ಸರೋವರದ ತಟದ ಬಳಿಗೆ ಹೊರಟರು. ಕಾಲುಹಾದಿಯ ಇಕ್ಕೆಲಗಳಲ್ಲಿ ಕಾಡುಜಾಜೀ ಬಳ್ಳಿಗಳು ಹೊರವಾಗಿ ಬೆಳೆದಿದ್ದುವು. ಹೂವು ಎಂದರೆ ಬದ್ದುಬದಳಿಗೆ ಪ್ರಾಣ. ಆದರೆ ವನ್ದಾಳಿಗೆ ಹೂವುಗಳ ಮೇಲೆ ತುಸು ತಾತ್ಸರ್ಯ. "ನಮ್ಮ ಸಮಾಜದಲ್ಲಿ ನಾವೇ ಅರಳುವ ಅರಳಿದ ಹೂವುಗಳಿದ್ದಂತೆ. ಅಂದ ಮೇಲೆ ಹೂವುಗಳು

ನಮಗೆ ಸವತಿಯರಿದ್ದಂತೆ" ಎಂದವಳ ಮನೋಗತಿ. ಕಾರಣ ಕಾಡುಜಾಜಿ ಹೂಗಳ ಬೊಂತೆ ಬೊಂತೆಯನ್ನು ಕಿತ್ತುಕೊಂಡು ಬುದ್ಬುದಾ ಮುನ್ನಡೆಯುತ್ತಿದ್ದಳು.

ಕಾರಂಧಮ ಸರೋವರದ ಉತ್ತರ ಅಂಚಿನಲ್ಲಿ ಲತಾ ಮಂಟಪವು ಒಂದಿದೆ ನೋಡಿ. ಅಲ್ಲಿ ಇಬ್ಬರೂ ಕುಳಿತರು. ಮಂಟಪದ ಹೊಸಿಲಿನಿಂದ ಕಾಲುಗಳನ್ನು ಇಳಿಬಿಟ್ಟರೆ ನಿರ್ಮಲ ನೀರಿನಲ್ಲಿ ಪಾದಗಳು ಮುಳುಗುತ್ತಿದ್ದುವು. ಎಡಗಡೆಯಿಂದ ಹೊಂಬಿಸಿಲು ಅಪ್ಸರಸಿಯರ ಮೈಮುಖಗಳ ಮೇಲೆ ಹಿತವಾಗಿ ಬೀಳುತ್ತಿತ್ತು. ಕಾಡು ಜಾಜಿಯ ಹೂಮಾಲೆಗಳನ್ನು ಬದ್ಬುದಾ ಕಟ್ಟುತ್ತಿದ್ದಳು. ಮೀನಿನ ಆಗಮನವನ್ನು ವನ್ದಾ ಕಣ್ಣಲ್ಲಿ ಕಣ್ಣಿಟ್ಟುಕೊಂಡು ನೋಡುತ್ತಿದ್ದಳು. ಮಾಲೆಗಳನ್ನು ಹೆಣೆದು ಬದ್ಬುದಾ ಮುಗಿಸಿದಳು.

"ವನ್ದಾ! ಇಲ್ಲಿಗೆ ಬಂದು ಅಲರಿಪು ಮುಗಿಸುವಷ್ಟು ಹೊತ್ತಾಯಿತು. ಮೀನಿನ ಸುಳಿವೇ ಇಲ್ಲ. ನೀರಿಗಿಳಿದು ಝಳಕವನ್ನಾದರೂ ಮುಗಿಸುತ್ತೇನೆ. ಮೀನು ಬಂದರೂ ಬರಲಿ ಅದೇನು ಮಾಡುತ್ತೋ ನೋಡಿಯೇ ಬಿಡುತ್ತೇನೆ" ಎಂದಳು ಬುದ್ಬುದಾ. ಉಟ್ಟಿದ್ದ ಉಡುಪನ್ನು ಕಳಚಿದಳು. ಇನ್ನೇನು ನೀರಿಗೆ ಇಳಿಯಬೇಕು! ಅಷ್ಟರಲ್ಲೇ ವನ್ದಾ "ಈಜುಡುಪು ಧರಿಸದೆ ಯಾರಾದರೂ ನೀರಿಗೆ ಇಳಿಯುತ್ತಾರೇನೇ? ನೀನು ತಾರದೆ ಇದ್ದರೆ ಹೋಟಲಿಗೆ ಓಡಿಹೋಗಿ ತಂದು ಕೊಡುತ್ತೇನೆ" ಎಂದಳು.

ಅಷ್ಟರಲ್ಲೇ "ಅಲ್ಲಿ ನೋಡೇ, ವನ್ದಾ! ಆ ಮೀನು ಪ್ರತ್ಯಕ್ಷವಾಗುತ್ತಿದೆ. ನಮ್ಮ ಕಡೆಗೇ ಬರುತ್ತಿದೆ. ಎಷ್ಟು ಮಜಬೂತಾದ ಮೀನು! ಅರೆ! ಮೀನಿನ ಮೈ ಎಷ್ಟು ನುಣುಪಾಗಿ ಕಾಣಿಸುತ್ತಿದೆಯೇ! ತಡವರಿಸೋಣ ಅನ್ನಿಸುತ್ತಲ್ಲೇ" ಎನ್ನುತ್ತಲೇ ಇದ್ದಳು. ಬುದ್ಬುದಾ ನಿಂತೇ ಇದ್ದಳು.

ನೀರಿನ ಮೇಲೆ ಮಿಂಚಿನಂತೆ ಚಿಮ್ಮಿ ಛಂಗುತ್ತ ನೀರಿನಂಚಿಗೆ ಆ ಮೀನು ಬಂದಿತು. ಪಕ್ಕದಲ್ಲಿದ್ದ ಹೂ ಮಾಲೆಯನ್ನು ಎತ್ತಿಕೊಂಡು ಮೀನಿನ ಮೇಲಕ್ಕೆ ಬುದ್ಬುದಾ ಎಸೆದಳು. ಆ ಮಾಲೆಯು ಮೀನಿನ ಕಂಠದ ಸುತ್ತ ಬಿದ್ದಿತು. ಮೀನು ಆಗ ಮಾತನಾಡತೊಡಗಿತು.

"ಬುದ್ಬುದಾ! ನೀರಿಗಿಳಿದು ಬಾ. ಈಜನ್ನು ಕಲಿಸುತ್ತೇನೆ. ನಿನ್ನ ಹೊಕ್ಕಳ ಮೇಲೆ, ವಕ್ಷದತ್ತ ಮತ್ಸ್ಯರೇಖೆಯಿದೆ. ಅಂದರೆ ಕಲಿತ ಮೇಲೆ ಈಜಿನಲ್ಲಿ ನಿನ್ನನ್ನು ಯಾರೂ ಸೋಲಿಸಲಶಕ್ಯ.

ನಾನೊಬ್ಬ ಡಾಲ್ಫಿನ್ ಚಕ್ರವರ್ತಿ. ಹಿಂದೊಮ್ಮೆ ನಾರೀತೀರ್ಥ ಸರೋವರದಲ್ಲಿ ರಾಣಿಯರೊಂದಿಗೆ ಜಲಕ್ರೀಡೆಯನ್ನಾಡುತ್ತಿದ್ದೆ—ಸಾಗರದಿಂದ ರಾಣಿಯರಿಬ್ಬರೊಂದಿಗೆ ನಾರೀತೀರ್ಥಕ್ಕೆ ಜಲಕ್ರೀಡೆಯಾಡಲು, ಗುಪ್ತವಾಗಿ ಆಳ ಕಾಲುವೆಯ ಮೂಲಕ ಬಂದಿದ್ದೆ. ಋಷಿಯೊಬ್ಬನು ಅರ್ಘ್ಯವನ್ನು ಬಿಡಲು ಅಲ್ಲಿಗೆ ಆಗಮನಿಸಿದ. ನಮ್ಮ ಉನ್ಮಾದಾವಸ್ಥೆಯ ಜಲಕ್ರೀಡೆಯನ್ನು ನೋಡಿದ. ಅಸೂಯೆಯಿಂದಲೋ, ಅಪಚಾರವಾಯಿತೆಂದೋ, ಕುಪಿತನಾಗಿ ಶಾಪವನ್ನು ಕೊಟ್ಟ. ಕಾರಂಧಮ ಸರೋವರದಲ್ಲಿ ಒಂಟಿಯಾಗಿ ಬಿದ್ದಿರು, ಎಂದು.

"ಜಟಾಧಾರಿ ಮಹಾತ್ಮರೇ, ಆ ಕಾರಂಧಮ ಸರೋವರದಲ್ಲಿ ಮೈ ಕುಲುಕಲು ಕೂಡ ಅವಕಾಶವಿಲ್ಲ. ನಾಗರಿಕರ ಬಸ್ಸುಗಳಲ್ಲಿ ಕೂತಂತೆ ಆಗಿಬಿಡುತ್ತೆ. ಆದ ತಪ್ಪಿಗೆ ಕ್ಷಮೆ ಕೋರುತ್ತೇನೆ. ಶಾಪ ವಿಮೋಚನೆಯು ಯಾವಾಗ? ಕೃಪೆದೋರಿ ಹೇಳಬೇಕು" ಎಂದು ಕೇಳಿಕೊಂಡೆ.

ಹಿರಿಯ ಮತ್ತು ಕಿರಿಯ ರಾಣಿಯರನ್ನು ಋಷಿಗಳು ನೋಡಿದರು. ಕನಿಕರವು ಮೂಡಿತು.

"ಮತ್ಸ್ಯರೇಖೆಯಿರುವ ಹೆಣ್ಣೊಂದು ಹೂ ಮಾಲೆಯನ್ನು ನಿನಗೆ ಹಾಕಿದಾಗ ಶಾಪ

ವಿಮೋಚನೆಯು ಆಗುತ್ತದೆ. ಆ ಹೆಣ್ಣಿಗೆ ಈಜನ್ನು ಕಲಿಸು. ಆಕೆ ನಿನ್ನನ್ನು ಸೋಲಿಸಿದಾಗ ಶಾಪ ವಿಮೋಚನೆಯಾಗಿ ಆಳ ಕಾಲುವೆಯ ಮೂಲಕ ಮಹಾಸಾಗರವನ್ನು ಸೇರಬಹುದು ಎಂದು ಅನುಗ್ರಹಿಸಿದನು.

"ಇಳಿದು ಬಾ ಬುದ್ಬುದಾ ಈಜಿನ ಎಲ್ಲಾ ಗುಟ್ಟುಗಳನ್ನೂ ಕಲಿಸುತ್ತೇನೆ. ಅಂತಃಪುರಕ್ಕೆ ತೆರಳಲು ನನಗೂ ಬಹಳ ಆತುರವಾಗಿದೆ" ಎಂದಿತು ಡಾಲ್ಫಿನ್ ಚಕ್ರವರ್ತಿ. ಬಾಲದಿಂದೊಮ್ಮೆ ಸರೋವರವನ್ನು ಝಾಡಿಸಿ ಬಡಿಯಿತು. ಭಾರಿ ಅಲೆಗಳು ಎರಡೂ ಕಡೆಗಳಲ್ಲಿ ಎದ್ದುವು. ಮಧ್ಯೆ ಕಣಿವೆಯಂತೆ ಕಾಲುದಾರಿ ಕಾಣಿಸಿತು. ಬುದ್ಬುದಾ ಆ ದಾರಿಯಲ್ಲಿ ಅಡಿಯಿಟ್ಟಳು.

ಬೆಬ್ಬರಗಾಗಿ ಲತಾಮಂಟಪದಲ್ಲಿ ಇದೆಲ್ಲವನ್ನೂ ವನ್ದಾ ನೋಡುತ್ತಲೇ ಇದ್ದಳು.

ಹತ್ತು ಹೆಜ್ಜೆಗಳನ್ನು ಬುದ್ಬುದಾ ಹಾಕುವಷ್ಟರಲ್ಲಿ ಡಾಲ್ಫಿನ್ ಸರ್ರಂತ ತಿರುಗಿ ಬಾಲದಿಂದ ಅವಳನ್ನು ಛಂಗಿಸಿದ. ಆ ರಭಸಕ್ಕೆ ಬುದ್ಬುದಾ ಡಾಲ್ಫಿನ್ನನ ಬೆನ್ನ ಮೇಲೆ ಬಗ್ಗು ಬೋರಲು ಬಿದ್ದಳು. ನುಣುಪಾದ ಬೆನ್ನಿಂದ ಎಲ್ಲಿ ಜಾರಿ ಬಿದ್ದು ಬಿಡುತ್ತೇವೆಯೋ ಎಂಬ ಸಹಜ ಭಯದಿಂದ ತೋಳು, ತೊಡೆಗಳಿಂದ ಡಾಲ್ಫಿನ್ನನನ್ನು ಬಿಗಿದು ಹಿಡಿದುಕೊಂಡಳು. ಬಿಗಿಯು ಭದ್ರವಾದ ಕೂಡಲೇ ಡಾಲ್ಫಿನ್ನು ರಭಸದಿಂದ ಈಜಾಡತೊಡಗಿತು. ತುಸು ಕೂಡ ಆಯ ತಪ್ಪದೆ ಬುದ್ಬುದಳು ನೀರಿನಲ್ಲಿ ಹರಿದಾಡಿದಳು. ನೀರಿನ ಭಯವು ಮಾಯವಾಯಿತು. ನೀರು ನೀರೆಯರೇ ಒಂದು, ನೀರನ್ನು ಬಡಿದು ಡಾಲ್ಫಿನ್ನೇ ಒಂದು, ಎನ್ನುವಂತಾಯಿತು.

ಆನಂತರ ಪಕ್ಕಪಕ್ಕದಲ್ಲಿದ್ದು ಬುದ್ಬುದಾ ಡಾಲ್ಫಿನ್ ಜತೆಗೆ ಈಜಾಡಲಾರಂಭಿಸಿದಳು.

ಅಂಗತಂಗನಾಗಿ ಆರಾಮ ಮಲಗಿ ಈಜುವುದು, ತೋಳೊಂದನ್ನೇ ಬಳಸಿಕೊಂಡು ಈಜಾಡುವುದು, ಒಡಲನ್ನು ಕೊಂಕಿಸಿ ನಿಮಿರಿಸಿ, ಆ ಚಲನದಿಂದಲೇ ನೀರಿನಲ್ಲಿ ಮುನ್ ಸಾಗುವುದು; ಹಂಸದಂತೆ ನೀರಿನ ಮೇಲೆ ಪವಡಿಸಿ ಚಲನದಿಂದ ಸರಿಯುವುದು; ಇತ್ಯಾದಿ ಇತ್ಯಾದಿ ಗಳೆಲ್ಲವನ್ನೂ ಮೊದಲ ಕಲಿಕೆಯಲ್ಲಿಯೇ ಕರ ಪಾದಗತ ಮಾಡಿಕೊಂಡಳು. ಅಂದಿನ ಪಾಠವು ಮುಗಿಯಿತು.

ಇದನ್ನು ಕಂಡ ವನ್ದಾಳಿಗೆ ಆಶ್ಚರ್ಯ, ಮೆಚ್ಚುಗೆ ಹಾಗೂ ಅಸೂಯೆ. ಲತಾಮಂಟಪಕ್ಕೆ ಬುದ್ಬುದಳು ಹಿಂತಿರುಗಿದಾಗ, ವನ್ದಾ ಡಾಲ್ಫಿನ್ನನ್ನು ನೋಡಿ, ಹಿಂದೆಯೇ ನಿಂತಿದ್ದಳು. ಮಂಟಪದ ಹೊಸ್ತಿಲ ಬಳಿ ಬುದ್ಬುದಳು ಮೈ ಕೈಗಳನ್ನು ಥರಥರಿಸಿದಳು ನೀರೆಲ್ಲವೂ ಸರಿದು ಬೀಳುವಂತೆ.

ಆಗ ಡಾಲ್ಫಿನ್ ತನ್ನ ಬಲ ಪಕ್ಕದಿಂದ, ಪಂಚರಂಗಿ ಪುಟ್ಟ ಮೀನೊಂದನ್ನು ಬುದ್ಬುದಳತ್ತ ಛಂಗಿಸಿದ, ಅದು ಬುದ್ಬುದಳ ಹೊಕ್ಕಳಿಗೆ ಬಡಿದ ಕೂಡಲೇ ಸ್ವಾಭಾವಿಕವಾಗಿ ಅಂಗೈಗಳಿಂದ ಅದನ್ನು ಭದ್ರವಾಗಿ ಹಿಡಿದಳು. "ಪುಟ್ಟ ಈ ಮೀನನ್ನು ಪಾಕ ಮಾಡಿಸಿ, ಸೇವಿಸು ಬುದ್ಬುದಾ. ಆ ತಿನಿಸಿನಿಂದ ಆಯಾಸ ಪರಿಹಾರವಾಗುತ್ತದೆ. ಉತ್ಸಾಹ ಉಂಟಾಗುತ್ತದೆ. ನಂತರ ತಾಸೊಂದು ವಿಶ್ರಮಿಸಿಕೊ. ಸಂಜೆಯ ಮುಂದೆ ಎರಡನೆಯ ಪಾಠಕ್ಕೆ ಇಲ್ಲಿಗೆ ಬಾ. ದ್ವಿತೀಯ ಪಾಠವು ಮುಗಿದ ಮೇಲೆ ಪ್ರಾಯಶಃ ಕಲಿಸುವುದೇನೂ ಉಳಿದಿರುವುದಿಲ್ಲ. ನನ್ನ ಸೆರೆಯೂ ಬಿಡಬಹುದು" ಎಂದ ಡಾಲ್ಫಿನ್ ಚಕ್ರವರ್ತಿ. ಕಾರಂಥಮದಲ್ಲಿ ಮಾಯವಾದ.

ಪಂಚರಂಗೀ ಪುಟ್ಟ ಮೀನನ್ನು ಎದೆಗವುಚಿಕೊಂಡು ಅಂಗೈಗಳಿಂದ ಭದ್ರವಾಗಿ ಮುಚ್ಚಿಕೊಂಡು

ಬುದ್ಬುದಾ ಲತಾಮಂಟಪದ ಹೊಸಿಲನ್ನು ದಾಟಿದಳು. ಆಗ ಮುಂದೆ ಬಂದ ಅವಳ ಮೈಯನ್ನೆಲ್ಲಾ ಒರೆಸಿ ವನ್ದಾ ಸೀರೆಯನ್ನು ಉಡಿಸಿದಳು. ಒಬ್ಬರನ್ನೊಬ್ಬರು ತಬ್ಬಿಕೊಂಡು ಹೋಟಲಿಗೆ ಹಿಂತಿರುಗಿದರು. ಮತ್ಸ್ಯರೇಖೆಯನ್ನು ಪಡೆದ ಹೆಣ್ಣು, ಗಂಡಿಗೆ ಮೆಚ್ಚು; ಹೆಣ್ಣಿಗೆ ಒಪ್ಪು. ವನ್ದಾಳ ಅಸೂಯೆಯೆಲ್ಲವೂ ಮಾಯವಾಗಿ ಆಸೆಯೊಂದೇ ಹೆಡೆಯಾಡಿಸತೊಡಗಿತ್ತು.

ಪತ್ರೊಡೆಯ ಜತೆಗೆ ನಂಜಿಕೊಂಡು, ಮಾಣಿ ತಂದು ಬಡಿಸಿದ ಪಂಚರಂಗಿ ಮೀನನ್ನು ಬುದ್ಬುದಳೊಬ್ಬಳೇ ಚಪ್ಪರಿಸುತ್ತ ತಿಂದಳು. "ಅದನ್ನು ಕಂಡರೆ ನನಗೆ ಬೇಸರ ಬರುತ್ತೆ. ಬದಲು ನಿನ್ನನ್ನೇ ತಿಂದುಬಿಡೋಣ ಎನಿಸುತ್ತೆ" ಎಂದಳು ವನ್ದಾ.

ಕಾರಂಥಮದ ಹೋಟಲಿನ ಮಾಣಿ ಕರಾವಳಿ ಪ್ರದೇಶದಲ್ಲಿ ನರಮಾನವನಾಗಿದ್ದ. ದೋಣಿಯ ಅಪಘಾತದಲ್ಲಿ ಅಕಸ್ಮಾತ್ ಸಿಕ್ಕಿ, ಸ್ವರ್ಗಸ್ಥನಾಗಿದ್ದ. ಆದರೆ ಹಳೆಯ ಜನ್ಮದ ವಾಸನೆಯು ಹಸಿರಾಗಿಯೇ ಇತ್ತು. ಆದಕಾರಣ ಸ್ವರ್ಗದ ವಿಹಾರ ಸ್ಥಳಗಳಲ್ಲಿ, ಹೋಟಲುಗಳಲ್ಲಿ, ಆಗೊಮ್ಮೆ ಈಗೊಮ್ಮೆ ಕರಾವಳಿಯ ಮತ್ಸ್ಯ ಬ್ರಾಹ್ಮಣರ ತಿಂಡಿ ತಿನಸುಗಳ ಸೊಬಗು ಸವಿಯನ್ನು, ಸ್ವರ್ಗೀಯರಿಗೂ, ಸ್ವರ್ಗದ ಪ್ರವಾಸಿಗಳಿಗೂ, ಉಣಿಸುತ್ತಿದ್ದ. ಬುದ್ಬುದಳು ಅಂದು ಮಧ್ಯಾಹ್ನ ಮಾಣಿಯ ಪಾಕದ ಅವರ್ಣನೀಯ ಸವಿಯನ್ನು ಅನುಭವಿಸಿದ್ದಳು. ವನ್ದಾಳಿಗೆ ಆ ಪುಣ್ಯವಿರಲಿಲ್ಲ. "ಬೇಗ ಉಂಡು, ನಮ್ಮ ಕೋಣೆಯನ್ನು ಸೇರಿಕೊಂಡರೆ ಸಾಕು" ಎಂದು ಆ ಪಾಪಿಯ ಹೆಬ್ಬಯಕೆ; ಆ ಬಿರಿ ಬಿಸಿಲಿನಲ್ಲಿ.

ಡಾಲ್ಫಿನ್ನಿನ ಮೇಲೆ ಬುದ್ಬುದಾಳ ಪ್ರೀತಿ, ಬುದ್ಬುದಾಳ ಮೇಲೆ ವನ್ದಾಳ ಪ್ರೀತಿ, ಡಾಲ್ಫಿನಿನ್ನ ಮೇಲೆ ವನ್ದಾಳ ಆಕ್ರೋಶ. ಇವೆಲ್ಲ ಮನದಾಳದಾಳದ ಭೂತಗಳು, ಮಧ್ಯಾಹ್ನದ ವಿಶ್ರಾಂತಿಗೆಂದು ಮಲಗಿದ ಅಪ್ಸರಸಿಯರಿಬ್ಬರನ್ನೂ ಕೆಣಕಿ, ಕುಲುಕಿ ನಲುಗು ಮಾಡಿದವು. ಕನಸು ಕಾಣುತ್ತಿದ್ದರೋ, ನನಸು ಅನುಭವಿಸಿದರೋ, ಇಬ್ಬರಿಗೂ ತಿಳಿಯದು. ಆದರೆ ಇಬ್ಬರೂ ತುಸು ಹೊತ್ತು ಗಾಢ ನಿದ್ರೆಯನ್ನನುಭವಿಸಿದರು.

* * * * *

ಹಿಮಾಲಯದ ಕಂಚೆನ್‌ಜುಂಗಾದ ಶಿಖರದಲ್ಲಿ ರವಿಯು ಪಶ್ಚಿಮದಲ್ಲಿ ಮೋಡಗಳ ಸೆರಗುಗಳ ಮಧ್ಯೆ, ಒಕ್ಕಣ್ಣನ್ನು ಮಿಟುಕಿಸುತ್ತಿದ್ದುದು ಕಾಣಿಸುತ್ತಿತ್ತು. ಆ ಮುಹೂರ್ತದಲ್ಲಿ ಬುದ್ಬುದಾ ಮತ್ತು ವನ್ದಾ ಹೋಟಲಿನಿಂದ ಹೊರಟು ಕಾರಂಥಮ ಸರೋವರ ಲತಾಮಂಟಪವನ್ನು ಸೇರಿದರು.

ಡಾಲ್ಫಿನ್ ಚಕ್ರವರ್ತಿಯು ಆ ಮುಹೂರ್ತದಲ್ಲಿ ಸರೋವರದಲ್ಲಿ ತಲೆ ಎತ್ತಿದ. ಮುಖದ ಇಕ್ಕೆಲಗಳಲ್ಲಿ ಹೊರವಾಗಿ ಮೂಡಿದ್ದ ಸಿಂಹಕೇಶಗಳನ್ನು ಕುಣಿಸಿದ. ಕುಣಿತವನ್ನು ಕಂಡ ಬುದ್ಬುದಾ ಝುಳಕಕ್ಕೆ ಉಟ್ಟ ಉಡುಪಿನಲ್ಲಿ ಇಳಿದಳು. ಈಜಾಡತೊಡಗಿದಳು. ಹಿಂಬಾಲಿಸುತ್ತ ಆಕೆಯನ್ನು ಹಿಂದಕ್ಕೆ ಸೆಳೆದು ವಶಪಡಿಸಿಕೊಂಡು, ಪ್ರೌಢ ಶಿಕ್ಷಣವನ್ನೀಯಲು, ಡಾಲ್ಫಿನ್ ಚಕ್ರವರ್ತಿಯು ಬಲು ಪ್ರಯಾಸಪಟ್ಟ. ಕೊನೆಗೆ ಸೋಲನ್ನೊಪ್ಪಿಕೊಂಡ. "ಶಿಷ್ಯಾತ್ ಇಚ್ಛೇತ್ ಪರಾಜಯಂ" ಈ ಸೂತ್ರವನ್ನು ಅತ್ಯಂತ ಸಂತೋಷದಿಂದ ಡಾಲ್ಫಿನ್ ಚಕ್ರವರ್ತಿ ಅನುಭವದಿಂದ, ಅನುಮೋದಿಸಿದ.

ಅಂತರ್ಗತನಾದ ಕಾರಂಥಮ ಸರೋವರದಲ್ಲಿ. ಆಳ ಕಾಲುವೆಯಲ್ಲಿ ಮಹಾ ಸಾಗರವನ್ನು

ಸೇರಿ, ಅಂತಃಪುರದ ರಾಣಿಯರನ್ನು ಕಾಣಲು ಅವಸರದಿಂದ ಹರಿದು ಹೋದ. ಅವನಿಗೆ ಶಾಪ ವಿಮೋಚನೆಯು ಆಗಿತ್ತು.

ಬದ್ಬುದಾ, ವನ್ದಾ ಇಬ್ಬರೂ ಕಾರಂಧಮ ಹೋಟಲಿಗೆ ನಸು ಸಂಜೆಯಲ್ಲಿ ಹಿಂತಿರುಗಿದರು. ರಾತ್ರಿಯ ಭೋಜನಕ್ಕೆ ಇಬ್ಬರೂ ಕುಳಿತಾಗ,—"ಮೋಜಿನ ಮೀನಿನ ಚಕ್ಕಂದವನ್ನು ನೋಡಲು ನಿನ್ನ ಕರೆತಂದೆ. ಈಗ ಈಜುವುದನ್ನು ಪ್ರೌಢೆಯಂತೆ ನೀನು ಕಲಿತೆ. ಅಪ್ಸರಸಿಯರು ನಾವು ನೀರು ನೀರೆಯರು. ಸಮುದ್ರ ಮಥನವಾದಾಗ ಸಾಗರದಲ್ಲಿ ತೇಲಿಬಂದವರು. ತಿರುಗಿ ಸಾಗರದಾಳಕ್ಕೆ ಮುಳುಗುವುದು ಪಾಪಕರ್ಮ" ಎಂದಳು ವನ್ದಾ.

"ಹಾಗನ್ನಬೇಡ, ಅಕ್ಕಾ—ಕಲಿತ ಯಾವ ವಿದ್ಯೆಯೂ, ಒಂದಲ್ಲ ಒಂದು ದಿನ ಪ್ರಯೋಜನಕ್ಕೆ ಬಂದೇಬರುತ್ತದೆ" ಎಂದನ್ನುತ್ತಾ ಅಕ್ಕನನ್ನು ತೆಕ್ಕೆಯಲ್ಲಿ ಹಾಕಿಕೊಂಡು ಬುದ್ಬುದಾ, ಬುಳುಬುಳುಗುಟ್ಟುತ್ತಾ ಸಂತೈಸಿದಳು.

* * * * *

ಯಕ್ಷರ ರಾಜಧಾನಿಯಾದ ಅಲಕಾಪುರಿಯಲ್ಲಿ ಪ್ರತಿವರ್ಷವೂ ಕನಕೋತ್ಸವವು ಬಹಳ ಸಂಭ್ರಮದಿಂದ ಆಚರಿಸಲ್ಪಡುತ್ತದೆ. ಉತ್ಸವದ ಅಂಗವಾಗಿ ಅಖಿಲ ಸ್ವರ್ಗದ ಕ್ರೀಡಾಸ್ಪರ್ಧೆಗಳು ನಡೆಸಲ್ಪಡುತ್ತವೆ. ಅಷ್ಟ ದಿಕ್ಪಾಲಕರ ರಾಜ್ಯಗಳಿಂದ ಅತ್ಯುತ್ತಮ ಕ್ರೀಡಾಪಟುಗಳನ್ನು ಸ್ಪರ್ಧೆಗೆ ಕಳುಹಿಸುತ್ತಾರೆ. ಕ್ರೀಡಾಸ್ಪರ್ಧೆಗಳಲ್ಲಿ ವಿಜಯವನ್ನು ಗಳಿಸಿದರೆ, ವಿಜಯಿಗಳ ರಾಜ್ಯದಲ್ಲಿ ಸಂಭ್ರಮವೋ ಸಂಭ್ರಮ. ಆ ರಾಜ್ಯದ ಪಾಲಕನು, ತುಸು ದಿನಗಳು, ತಾನೇ ಇಂದ್ರನಾದಂತೆ ಹೆಮ್ಮೆ ಪಡುತ್ತಾನೆ. ವಿಜಯವನ್ನು ಗಳಿಸಿಕೊಟ್ಟವರನ್ನು ಆಲಿಂಗಿಸಿಕೊಂಡು ಬಿರುದು ಬಾವಲಿಗಳನ್ನು ಕೊಡುತ್ತಾನೆ. ಕ್ರೀಡಾ ವಿಜೇತರು ರಾಷ್ಟ್ರದ ಗೌರವವನ್ನು ಮತ್ತು ಮೆಹನತ್ತನ್ನು ಎತ್ತಿ ಹಿಡಿದು ಅತ್ಯುತ್ತಮ ರಾಷ್ಟ್ರ ಪ್ರೇಮಿಗಳಾದರು ಎನ್ನುವ ನಂಬಿಕೆಯು ಸ್ವರ್ಗದಲ್ಲೆಲ್ಲಾ ಗಾಢವಾಗಿ ಮೂಡಿತ್ತು. ಆದ ಕಾರಣ ಸ್ವರ್ಗಾಧಿಪತ್ಯಕ್ಕೆ ಒಳಗಾದ, ಸಣ್ಣ ಪುಟ್ಟ ರಾಜ್ಯಗಳೂ ಅಲಕಾಪುರಿಯ ಕನಕೋತ್ಸವದ ಸ್ಪರ್ಧೆಗಳಲ್ಲಿ ಭಾಗವಹಿಸಲು ಅತ್ಯುತ್ಸುಕರಾಗಿದ್ದವು.

ಕ್ರೀಡಾ ಸ್ಪರ್ಧೆಗಳು ಅಂತಿಮ ಹಂತವನ್ನು ಮುಟ್ಟಿದಾಗ, ಪ್ರಶಸ್ತಿ ವಿತರಣೆಯ ಸಂಭ್ರಮದ ಸಭೆಯು ನಡೆಯುತ್ತಿತ್ತು. ಯಕ್ಷರ ಮಹಾರಾಜನಾದ ಕುಬೇರನು ಅಂದು ಅಲಂಕೃತನಾಗಿ ಅಧ್ಯಕ್ಷತೆಯನ್ನು ವಹಿಸುತ್ತಿದ್ದ. ಮಿಕ್ಕೆಲ್ಲಾ ದಿವಸಗಳಲ್ಲಿ ಕುಬೇರನ ಉಡುಪು ಕಂಗಾಳಿಗಳಂತಿರುತ್ತಿದ್ದುವು. ಕಾಳು ಕಾಳುಗಳನ್ನು ಕೂಡಿಟ್ಟರೆ ಕೋಟೆಯು ಸುರಕ್ಷಿತವಾಗಿರಲು ಸಾಧ್ಯ. "ಯದ್ ಯದಾಚರತಿ ಶ್ರೇಷ್ಠಃ" ಎಂಬಂತೆ ಕುಬೇರನು ತನ್ನ ರಾಜ್ಯದ ಪ್ರಜೆಗಳಿಗೆ ಮೇಲ್ಪಂಕ್ತಿಯನ್ನು ಹಾಕುತ್ತಿದ್ದ. ಸಣ್ಣ ಪುಟ್ಟ ಉಳಿತಾಯಗಳಿಂದ ಕುಬೇರನಾಗಬಹುದು ಎಂದು ಪ್ರತ್ಯಕ್ಷ ಪ್ರಮಾಣವನ್ನು ನೀಡುತ್ತಿದ್ದ. ತ್ರಿಮೂರ್ತಿಗಳು ಗೆಳೆತನದಿಂದ, ಒಂದಾಗಿ ಆನಂದ ಪಡುವಾಗ, ಮೂವರೂ ಸೌಭಾಗ್ಯ ಸದನದಲ್ಲಿ ಒಕ್ಕೂಡುತ್ತಿದ್ದರು. ಸೌಭಾಗ್ಯ ಸದನವು ಕುಬೇರನದು. ಆದರೆ ಅವ ಅದರ ಹೊರ ಕುಟೀರದಲ್ಲಿ ವಾಸಿಸುತ್ತಿದ್ದ. ಮೂರೂ ಪುರಾತನ ಮೂರ್ತಿಗಳು ಅಲ್ಲಿ ಅನಿರೀಕ್ಷಿತವಾಗಿ ಕಾಲ-ವಿಧಿಯ ನಿಯಮದಂತೆ ಹಠಾತ್ ಒಕ್ಕೂಡಿದಾಗ ಕುಬೇರನೇ ಆತಿಥೇಯ. ಅವನೇ ತ್ರಿಮೂರ್ತಿಗಳ ಆರಾಧ್ಯ ಸೇವಕ.

ಪರಮ ಪದವಿಯನ್ನು ಪಡೆದ, ಪಡೆದಿದ್ದರೂ ನಂಬದಿದ್ದ, ಅಲಕಾಪುರಿನಾಥ, ಕುಬೇರನು ಯಾವ ಸಂಪತ್ಸುಖವನ್ನು ಅನುಭವಿಸದೆ ಇದ್ದರೂ ಅಂದು ಮಾತ್ರ ಅಧ್ಯಕ್ಷನಾಗಿ ಮೆರೆಯುತ್ತಿದ್ದ. ಆತನನ್ನು ಪ್ರಚೋದಿಸಿ ಆಡಿಸುತ್ತಿದ್ದ ರಾಣಿ ಋದ್ಧಿ ದೇವಿಯು, ಬಹುಮಾನಗಳನ್ನು ತನ್ನ ಅಮೃತ ಹಸ್ತದಿಂದ ವಿನಿಯೋಗಿಸುತ್ತಿದ್ದಳು. ದುಂದುಭಿಗಳು ಆಗ ಮೊಳಗುತ್ತಿದ್ದವು. ಮಹಾರಾಣಿ ಋದ್ಧಿ ದೇವಿಯು ಹೇಳಿದಂತೆ, ಚಾಚೂ ತಪ್ಪದೆ ಜಿಪುಣ ಕುಬೇರನು ಆ ದಿನ ಬಿಡುಗೈ ದೊರೆಯಾಗಿರುತ್ತಿದ್ದ. ಆದ ಕಾರಣ ಕನಕೋತ್ಸವವು ತ್ರಿಮೂರ್ತಿಗಳನ್ನು ಬರಮಾಡಿಕೊಳ್ಳುತ್ತಿತ್ತು. ಎಂದಾದರೂ ಸಾಲವನ್ನು ಪಡೆಯಬೇಕಾದರೆ, ಕುಬೇರನು ಕುರಿಯಲೇ ಬೇಕು. ಅವರುಗಳೆದುರಿಗೆಲ್ಲಾ ತಾನು ಅಧ್ಯಕ್ಷನಾಗುವುದು, ಕುಬೇರನಿಗಿಂತ ಋದ್ಧಿ ದೇವಿಗೆ ಬಹಳ ಖುಷಿಯನ್ನುಂಟುಮಾಡುತ್ತಿತ್ತು.

ಕುಬೇರನಿಗೆ ಒಬ್ಬನೇ ಮಗ. ನಳಕೂಬರ ಎಂದವನ ನಾಮಧೇಯ. ಬಲು ರೂಪವಂತನವ. ಋದ್ಧಿಯು ನಳಕೂಬರನನ್ನು ಬಲು ಮುದ್ದಿಸುತ್ತಿದ್ದಳು. ಅಪ್ಪನ ಅಂಕೆ ಶಿಕ್ಷೆಗೆ ನಳಕೂಬರ ಸಿಕ್ಕುತ್ತಿರಲಿಲ್ಲ. ಹಾಗಾಗಿ ಆಟ ಪಾಠಗಳಲ್ಲಿ ಅವ ಸದಾ ನಿರತನಾಗಿರುತ್ತಿದ್ದ. ಆದರೆ ಖರ್ಚುಮಾಡಲು ಹಣವು ಅಪ್ಪನಿಂದ ದೊರೆಯುತ್ತಿರಲಿಲ್ಲ. "ಜೀವಮಾನವೆಲ್ಲಾ ದುಡಿದು ಕೂಡಿಟ್ಟ ಹಣವನ್ನೆಲ್ಲಾ, ನನ್ನ ವರ್ಷದ ತಿಥಿಯ ಹೊತ್ತಿಗೆ ದುಂದುಮಾಡಿ ಮುಗಿಸಿ ಬಿಡುತ್ತೀ" ಎಂದು ಬೈಯುತ್ತಾ ಆಗೊಮ್ಮೆ ಈಗೊಮ್ಮೆ ಲಾಲಿಪಾಪ್ ಕೊಳ್ಳಲು ಹತ್ತು ಪೈಸೆಗಳನ್ನು ಕೊಡುತ್ತಿದ್ದ. ವರ್ಷಕ್ಕೆ ಅಗತ್ಯವಾದ ಹಣವನ್ನು ಪಡೆಯಲು, ನಳಕೂಬರನಿಗೆ ಒಂದೇ ಉಪಾಯವಿತ್ತು.

ಅದೇನೆಂದರೆ, ಕನಕೋತ್ಸವದ ಕ್ರೀಡಾಕೂಟಗಳೊಂದರಲ್ಲಿ ಜಯವನ್ನು ಗಳಿಸುವುದು; ತಾಯಿ ಋದ್ಧಿ ದೇವಿಯಿಂದ ಅತುಳೈಶ್ವರ್ಯದ ಬ್ಲಾಂಕ್ ಚೆಕ್ಕೊಂದನ್ನು ಪಡೆಯುವುದು. ಇಡೀ ವರ್ಷಕ್ಕೆ ಅದನ್ನು ನಿಶ್ಚಿಂತತೆಯಿಂದ ಉಪಯೋಗಿಸಿ, ಉಪಭೋಗವನ್ನು ಸಿದ್ಧಮಾಡಿಕೊಳ್ಳುವುದು.

ಅಲಕಾಪುರಿಯಲ್ಲಿ ನವನಿಧಿಗಳನ್ನಿರಿಸಿರುವ ದುರ್ಗಮವಾದ ಕೋಟೆಯ ಸುತ್ತಲೂ ಆಳವಾದ ಮತ್ತು ಅಗಲವಾದ ಜಲ ತುಂಬಿದ ಕಂದಕಗಳಿದ್ದುವು. ಸಹೋದರನಾದ ರಾವಣನು ಕೂಡ, ಆ ಕಂದಕಗಳನ್ನು ದಾಟಲು ಸಾಧ್ಯವಿರಲಿಲ್ಲ. ಕಂದಕಗಳಲ್ಲಿ ಮೊಸಳೆ ಷಾರ್ಕ್ ಮುಂತಾದ ಮತ್ಸ್ಯ ಮತ್ತು ಮಿಶ್ರ ಜಾತಿಯ ಜಲಚರಗಳು ಕಾವಲು ಕಾಯುತ್ತಿದ್ದುವು. ಕಂದಕಗಳ ಹೊರವಲಯದಲ್ಲಿ ರಕ್ಷಕ ಯಕ್ಷ ಸಿಬ್ಬಂದಿಯು ಹಗಲಿರುಳೂ ಸರ್ಪಗಾವಲನ್ನು ಹಾಕಿರುತ್ತಿತ್ತು. ಎಲ್ಲ ಮಕ್ಕಳಂತೆ ನಳಕೂಬರನಿಗೆ ನೀರಿನಲ್ಲಿ ಆಡುವುದೆಂದರೆ ಬಾಲ್ಯದಿಂದಲೂ ಬಲು ಇಷ್ಟ. ಕಂದಕದ ವಿಶಾಲ ನೀರಿನಲ್ಲಿ, ಬಿದ್ದು ಮುಳುಗಿ ಎದ್ದು, ಈಜಾಟವನ್ನು ಕಲಿತಿದ್ದ. ಸ್ಫುರದ್ರೂಪಿಯಾಗಿದ್ದ ಎಳೆಯ ನಳಕೂಬರನನ್ನು ಕಂಡರೆ ಗಂಗಾಮಾತೆಗೂ ಬಲು ವಾತ್ಸಲ್ಯ. ಆದ ಕಾರಣವೋ ಏನೋ ಒಮ್ಮೆಯಾದರೂ ನಳಕೂಬನು ಅಪಾಯಕ್ಕೀಡಾಗಲಿಲ್ಲ. ಷಾರ್ಕುಗಳ ವೇಗಕ್ಕಿಂತಲೂ ಮಿಗಿಲಾಗಿ ಈಜಿ, ಜಲಕ್ರೂರ ಜಂತುಗಳಿಂದ ನಳಕೂಬರನು ತಪ್ಪಿಸಿಕೊಳ್ಳುತ್ತಿದ್ದ. ಈ ರೀತಿಯಲ್ಲಿ ಈಜಾಡುವ ಆಟದಲ್ಲಿ ನಳಕೂಬರನು ಅತ್ಯಂತ ಪ್ರೌಢತೆಯನ್ನು ಗಳಿಸಿಕೊಂಡಿದ್ದ. ಮಾತೆ ಋದ್ಧಿ ದೇವಿಯನ್ನು ಮರಳುಮಾಡಿ, ಕ್ರೀಡಾ ಸ್ಪರ್ಧೆಗಳಲ್ಲಿ, ಈಜುವ ಸ್ಪರ್ಧೆಯೇ ಅತ್ಯುತ್ತಮ: ಆ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಬ್ಲಾಂಕ್ ಚೆಕ್ ಬಹುಮಾನವು ವಿತರಣೆಯಾಗಬೇಕು, ಎಂದು ಒಪ್ಪಿಸಿದ್ದ. ವಯಸ್ಸಿನ ಪರಿಮಿತಿಗೆ ತಕ್ಕಂತೆ

ನಡೆಯುವ ಈ ಸ್ಪರ್ಧೆಗಳಲ್ಲಿ, ಬಲು ವರ್ಷಗಳಿಂದಲೂ ನಳಕೂಬರನೇ ವಿಜಯಿಯಾಗಿ, ವರ್ಷದ ತುಂಬು ಖರ್ಚನ್ನು ಗಳಿಸಿಕೊಳ್ಳುತ್ತಿದ್ದ. ಕನಕೋತ್ಸವದ ಕ್ರೀಡಾ ಸ್ಪರ್ಧೆಗಳ ರೀತಿನೀತಿಯು ಹೀಗಿತ್ತು.

* * * * *

ಸಲ್ಲುತ್ತಿರುವ ವರ್ಷದಲ್ಲಿ ನಳಕೂಬರನಿಗೆ ೨೨ರ ಪ್ರಾಯವು ಮೂಡಿತ್ತು. ಕಪೋಲ ಕೇಶಗಳು ಸಿಂಹಗಳನ್ನೂ ಅಣಕಿಸುತ್ತಿದ್ದುವು. ಅವನ ಕಾಮ್ಯಗಳೂ ಹೊರವಾಗಿದ್ದುವು, ತೀವ್ರವಾಗತೊಡಗಿದ್ದುವು. ಅಂದ ಮೇಲೆ ಸ್ಪರ್ಧೆಯಲ್ಲಿ ವಿಜಯವನ್ನು ಗಳಿಸಿ, ಬ್ಲಾಂಕ್ ಚೆಕ್ಕನ್ನು ತುಂಬು ತುಂಬಬೇಕು, ಎನ್ನುವ ಅಗತ್ಯವೂ ಆಕಾಂಕ್ಷೆಯೂ ನಳಕೂಬರನಲ್ಲಿ ಉನ್ಮಾದಾವಸ್ಥೆಗೆ ಏರಿದ್ದುವು.

ನಳಕೂಬರನು ಸ್ಪರ್ಧಿಸುತ್ತಾನೆ ಎಂದು ತಿಳಿದಾಗ ಹೆಚ್ಚು ಸಂಖ್ಯೆಯಲ್ಲಿ ಸ್ಪರ್ಧಿಗಳು ಪ್ರವೇಶಿಸುತ್ತಿರಲಿಲ್ಲ. ಕೈ ತೋರಿಸಿ ಅವಲಕ್ಷಣ ಎಂದೇಕೆ ಅನಿಸಿಕೊಳ್ಳಬೇಕು? ಕೇವಲ ಚಟದಿಂದ ಒಬ್ಬಿಬ್ಬ ಯಕ್ಷರು, ಒಬ್ಬಿಬ್ಬ ತಾತ್ಕಾಲಿಕ ಸ್ವರ್ಗೀಯರು ಮಾತ್ರ ಸ್ಪರ್ಧೆಗೆ ಇಳಿಯುತ್ತಿದ್ದರು.

ಅದರ ಸ್ಪರ್ಧಾಪಟ್ಟಿಗೆ ಈ ವರ್ಷ, ಬುದ್ಬುದಾ ತನ್ನ ಅರ್ಜಿಯನ್ನು ಗುಜರಾಯಿಸಿದ್ದಳು. ಮನರಂಜನೆಯ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅವಳನ್ನೂ ಮತ್ತು ವನ್ದಾಳನ್ನೂ ವಿಶಿಷ್ಟ ಆಮಂತ್ರಿತ ಕಲೆಗಾರ್ತಿಯರನ್ನಾಗಿ ಆಹ್ವಾನಿಸಲಾಗಿತ್ತು. ಅಲಕಾಪುರಿಗೆ ಬಂದ ಮೇಲೆ ಕ್ರೀಡಾ ಸ್ಪರ್ಧೆಗಳ ವಿವರಗಳನ್ನು ಕಂಡಾಗ, ಈಜಿನ ಸ್ಪರ್ಧೆಯಲ್ಲಿ ಭಾಗವಹಿಸಿ ಭಂಡಾರವನ್ನು ಪಡೆಯುವ ಆಸೆಯು ಬುದ್ಬುದಳಿಗೆ ಉಂಟಾಯಿತು. ವನ್ದಾಳ ಪ್ರೇರಣೆಯೂ ಬಲವಾಗಿತ್ತು.

ಪೂರ್ವ ಅಭ್ಯಾಸಕ್ಕಾಗಿ ಈಜುವ ಸರಸಿನ ಬಳಿಗೆ ಬುದ್ಬುದಾ ಹೋದಳು. ಕಳಕೂಬರನು ಅದಕ್ಕಾಗಿಯೇ ಬಂದಿದ್ದ. ಅವನನ್ನು ಬುದ್ಬುದಾ ನೋಡಿದಳು. ಕಾರಂಧಮ ಸರೋವರದಲ್ಲಿ ಡಾಲ್ಫಿನ್ ಅನ್ನು ನೋಡಿದಾಗ ಎದೆಯು ಹೇಗೆ ಡವಡವ ಗುಟ್ಟಿತೋ ಹಾಗೆಯೇ ಈಗಲೂ ಆಯಿತು. ಹೊಕ್ಕಳ ಮೇಲಿದ್ದ ಮತ್ಸ್ಯ ರೇಖೆಗಳು ವಿಲವಿಲನೆ ಒದ್ದಾಡಿದುವು. ಪುಣುಕಾಡತೊಡಗಿದುವು. ಯಾವ ಪ್ರತಿಕ್ರಿಯೆಯನ್ನೂ ನಳಕೂಬರನು ವ್ಯಕ್ತಪಡಿಸಲಿಲ್ಲ. ಅಭ್ಯಾಸವನ್ನು ಇತರ ಸ್ಪರ್ಧಿಗಳೊಡನೆ ಇಬ್ಬರೂ ಕೈಗೊಂಡರು.

ಸ್ಪರ್ಧಾ ಪ್ರಾತಃಕಾಲವು ಮೂಡಿತು. ಸ್ಪರ್ಧಿಗಳು ಸಿದ್ಧರಾಗಿದ್ದರು. ಸ್ಪರ್ಧಾ ತೀರ್ಮಾನಗಾರರಾದ ವ್ಯಾಯಾಮ ಸಚಿವನಾದ ಪ್ರಹಾಸನು, ಇಬ್ಬರು ಸಹಪರೀಕ್ಷಕರೊಂದಿಗೆ ಸಕಲ ಸಲಕರಣೆಗಳ ಜತೆಗೆ ಹಾಜರಾಗಿದ್ದ. ಅಧ್ಯಕ್ಷನಾದ ಕುಬೇರನೂ ರಾಣಿ ಋದ್ಧಿ ದೇವಿಯೂ ತಮ್ಮ ಸಿಂಹಾಸನಗಳಲ್ಲಿ ಮಂಡಿತರಾಗಿದ್ದರು. ವಿಶೇಷ ಆಹ್ವಾನಿತರಾದ ತ್ರಿಮೂರ್ತಿಗಳೂ ಪ್ರತಿಷ್ಠಿತ ಆಸನಗಳನ್ನು ಅಲಂಕರಿಸಿದ್ದರು, ಹಂತವೊಂದರ ಕೆಳಗೆ.

ಸ್ಪರ್ಧಿಗಳು ಹಾಜರಾಗಲಿ ಎಂದು ದುಂದುಭಿಗಳು ನಾಂದಿಯನ್ನು ಪ್ರಾರಂಭಿಸಿದರು. ಹಾಜರಾದವರು ಇಬ್ಬರೇ, ನಳಕೂಬರ ಮತ್ತು ಬುದ್ಬುದಾ. ಅಭ್ಯಾಸ ಮಾಡಲು ಬಂದಿದ್ದ ಇತರ ಸ್ಪರ್ಧಿಗಳು ಇವರಿಬ್ಬರ ಈಜು ಚತುರತೆಯನ್ನು ಕಂಡು, ವೃಥಾ ಶ್ರಮವೇಕೆ? ಎಂದು ಹಿಂದಾಗಿದ್ದರು. ಹೆಣ್ಣಿನ ಕೂಡ ಸ್ಪರ್ಧಿಸಬೇಕಾಯಿತಲ್ಲ, ಎಂದು ನಳಕೂಬರನಿಗೆ ಅರೆಕ್ಷಣ ಅನ್ನಿಸಿತು. ಗಂಡಿನ ಪೌರುಷಕ್ಕೆ ಅವಮಾನವಲ್ಲವೇ? ಲಾಗಾಯ್ತಿನಿಂದ ಲಿಬ್ ಪ್ರಚಾರ ಇತ್ತಲ್ಲವೇ ಇದ್ದೇ?

ಸ್ಪರ್ಧೆಯು ಪ್ರಾರಂಭವಾಗಲಿ ಎಂದು ವ್ಯಾಯಾಮ ಸಚಿವ ಪ್ರಹಾಸರು ಆಣತಿ ಇತ್ತರು. ಬುದ್ಬುದಾಳ ಬಳಿಗೆ ವನ್ನಾ ಓಡೋಡಿ ಬಂದಳು. "ಈಜುಡುಪನ್ನು ಹಾಕಿಕೊಂಡೇ ನೀರಿಗಿಳಿಯಬೇಕು. ಕಾರಂಥಮದಲ್ಲಿ ನಾವಿಬ್ಬರೇ ಇದ್ದುದು. ಹುಟ್ಟುಡುಪಿನಲ್ಲಿ ಇಳಿದಿದು ತಪ್ಪೆನಿಸಲಿಲ್ಲ. ಇಲ್ಲಿ ಹಾಗಾಗದು. ಕುಬೇರನ ಮತ್ತೊಂದು ಹೆಸರು ನರವಾಹನ ಎಂದು. ಅರಸರ ಮುಂದೆ ಅವಮಾನವಾಗುತ್ತೆ. ಆದ್ದರಿಂದ ಈಜುಡುಪು ಅತ್ಯಗತ್ಯ ಮತ್ತು ಅನಿವಾರ್ಯ" ಎಂದಳು. "ಅದನ್ನು ಬಿಗಿಯಾಗಿ ಧರಿಸಿದರೆ ಮೈಯ್ಯೆಲ್ಲಾ ಮುಲುಮುಲುಗುಟ್ಟುತ್ತದೆ. ಈಜಲು ತೊಂದರೆಯಾಗುತ್ತದೆಯಲ್ಲೇ" ಎಂದಳು ಬುದ್ಬುದಾ. "ಹಾಗಾದಾಗ ಈಜುವುದು ರಭಸವಾಗಬಹುದು. ಮಾತು ಸಾಕು, ನೀರಿಗಿಳಿ" ಎಂದಳು ವನ್ನಾ.

ವ್ಯಾಯಾಮ ಸಚಿವರು ಲೊಟ್ಟೆ ಹೊಡೆದರು. ಪಿಸ್ತೂಲು ಬಾರಿಸಿದಂತಾಯಿತು. ಸ್ಪರ್ಧಿಗಳಿಬ್ಬರೂ ನೀರಿಗೆ ಬಿದ್ದು ಈಜತೊಡಗಿದರು.

ಸ್ಪರ್ಧಾಮಾರ್ಗವು ಒಂದು ಯೋಜನ ದೂರವಿತ್ತು. ಅಲ್ಲಿಗೆ ಹೋಗಿ ಅಲ್ಲಿರಿಸಿದ್ದ ಕಮಲವನ್ನು ತೆಗೆದುಕೊಂಡು ಮರಳಿ ಹಿಂತಿರುಗಬೇಕಾಗಿತ್ತು. ಕಮಲವನ್ನು ಋದ್ಧಿದೇವಿಗೆ ಅರ್ಪಿಸಬೇಕಾಗಿತ್ತು. ಮೊದಲ ಐದು ಘಳಿಗೆಗಳು ನಳಕೂಬರನು ಮುಂದಿದ್ದ. ನಂತರ ಬುದ್ಬುದ ಮುಂದಾದಳು. ತುಂಬಾ ಮುಂದಾದಳು. ಕಮಲವನ್ನು ತೆಗೆದುಕೊಂಡು ಬಂದು ಋದ್ಧಿದೇವಿಗೆ ಬುದ್ಬುದಳು ಅರ್ಪಿಸಿದ ಹತ್ತು ಘಳಿಗೆಗಳಾದ ಮೇಲೆ ನಳಕೂಬರನ ಹಿಂತಿರುಗಿ ಬಂದು ಕಮಲವನ್ನು ತಾಯಿಗೆ ಅರ್ಪಿಸಿದ; ಪೆಚ್ಚು ಮುಖವನ್ನು ಹಾಕಿಕೊಂಡು.

ರಾಣಿ ಋದ್ಧಿಗೆ ಈಗ ಯೋಚನೆಗಿಟ್ಟುಕೊಂಡಿತು. ವಿಜಯೀಗೆ ಕೊಡಬೇಕಾದ ಬ್ಲಾಂಕ್ ಚೆಕ್ಕನ್ನು ಕೊಟ್ಟರೆ, ಮಗ ವರ್ಷವೆಲ್ಲಾ ದರಿದ್ರನಂತಿರಬೇಕು. ಆದರೆ ತ್ರಿಮೂರ್ತಿಗಳು ಮತ್ತು ಯಕ್ಷ ಮಹಾಶಯರೆದುರು ಬಹುಮಾನವನ್ನು ಕೊಡದೆ ಇರುವಂತಿಲ್ಲ. ಇಂತಹ ಕ್ಲಿಷ್ಟ ಸಂದರ್ಭಗಳಲ್ಲಿ ಸ್ತ್ರೀ ಬುದ್ಧಿಯು ಪ್ರಳಯಾಂತಕವಾಗುತ್ತದೆ. ಅತಿ ಚುರುಕಾಗುತ್ತದೆ.

"ವಿಜಯೀ ಬುದ್ಬುದಾ, ಇಷ್ಟವಾದ ಯಾವ ಬಹುಮಾನವನ್ನಾದರೂ ಈ ದಿನ ಕೊಡುವ ನಿಯಮ. ಬೇಕಾದ್ದನ್ನು ಕೇಳು. ನೀಡುತ್ತೇನೆ" ಎಂದಳು ರಾಣಿ ಋದ್ಧಿದೇವಿ.

ಹೆಣ್ಣು ಹೆಂಗಸು ಏನನ್ನು ಕೇಳಬಹುದು? ಕೆಲವು ಜವಹಿರಿಗಳನ್ನು ಕೇಳಬಹುದು. ಅಥವಾ ಅಡಿಗೆ ಪಾತ್ರೆಗಳ ಸೆಟ್ಟೊಂದನ್ನು ಕೇಳಬಹುದು. ಅಪ್ಸರೆಯಾದ್ದರಿಂದ ಗೆಜ್ಜೆ ಗೊಲಸುಗಳನ್ನು ಬಂಗಾರದಲ್ಲಿ ಮಾಡಿಕೊಡಿ ಎನ್ನಬಹುದು. ಕೈಯಲ್ಲಿರುವ ಬ್ಲಾಂಕ್ ಚೆಕ್ಕನ್ನು ನೀಡಿ ಎಂದೆಂದೂ ಕೇಳಲಾರಳು ಎಂದು ರಾಣಿ ಋದ್ಧಿಯ ವಿಚಾರ.

"ಕೇಳಿದ್ದನ್ನು ಕೊಡ್ತೀರಾ?" ಎಂದು ಬೊಗಸೆ ಕಣ್ಣುಗಳನ್ನು ಮಾಡಿಕೊಂಡು ಬುದ್ಬುದಾ ಕೇಳಿದಳು.

"ಅದನ್ನೇ ನಾನು ಹೇಳಿದೆನಲ್ಲವೇ, ಮಗಳೆ" ಎಂದಳು ರಾಣಿ ಋದ್ಧಿದೇವಿ

"ನಳಕೂಬರನನ್ನು ನನಗೆ ಬಹುಮಾನವಾಗಿ ಕೊಡಿ" ಎಂದಳು ಬುದ್ಬುದಾ.

"ಮತ್ತು ಎರಡನೆಯವನಾದರೂ ನಳಕೂಬರನಿಗೆ ಮೊದಲ ಬಹುಮಾನ ಕೊಡಿ" ಎಂದಳು.

ಮನೆಯ ಐಶ್ವರ್ಯವು ಮನೆಯಲ್ಲೇ ಉಳಿಯುತ್ತದೆಯಲ್ಲಾ ಎನ್ನುವ ಸಂತಸದಿಂದ ಕುಬೇರನು "ರಾಣಿ ಒಪ್ಪಿಗೆ ಕೊಡು" ಎಂದು ನುಡಿದ. ಸಕಲರಿಗೂ ಸಂತಸವಾಯಿತು.

ಡಾಲ್ಫಿನ್ ಅರಸನು ಕಲಿಸಿದ ಈಜು ವಿದ್ಯಾಪಾರಂಗತೆಯನ್ನು ನಿನಗೂ ಕಲಿಸಿ ಕೊಡುತ್ತೇನೆ ಎಂಬ ಆಶ್ವಾಸನೆಯನ್ನು ನಳಕೂಬರನಿಗೆ ಬುದ್ಬುದಾ ನೀಡಿದಳು. ಕನಕೋತ್ಸವದ ಸಂಭ್ರಮವು ಕ್ರೀಡೋತ್ಸವದ ಸಡಗರದೊಂದಿಗೆ ಕೂಡಿಕೊಂಡು, ಅಲಕಾಪುರಿಯು ಅದ್ದೂರಿಪುರಿಯಾಯಿತು. ಯಕ್ಷಕನ್ಯಾಪಿತೃಗಳು ತಮ್ಮ ರಾಜ್ಯದ ಯುವರಾಜನು ಪರರಾಷ್ಟ್ರದ ಹೆಣ್ಣನ್ನು ಸ್ವೀಕರಿಸಿದನಲ್ಲಾ ಎಂದು ಮತ್ಸರಪಟ್ಟರು. ಯಕ್ಷ ಕನ್ಯೆಯರು ಮಾತ್ರ ಅಪ್ಸರಸಿಯು ಎಷ್ಟು ದಿನ ಈ ಬಂಧನದಲ್ಲಿ ಇರಲು ಸಾಧ್ಯ? ಕಂಡುದನ್ನೇ ಕಂಡು ಕಂಡು ಬೇಸರ ತುಂಬಿ ಖಂಡಿತವಾಗಿಯೂ ಓಡಿ ಹೋಗುತ್ತಾಳೆ ಎಂಬ ಆಸೆಯನ್ನು ಉಳಿಸಿಕೊಂಡಿದ್ದರು.

ಮನರಂಜನಾ ಕಾರ್ಯಕ್ರಮವು ಮುಗಿದ ನಂತರ, ತೌರೂರಿಗೆ ಒಂಟಿಯಾಗಿ ಮತ್ತೆ ಹಿಂತಿರುಗುವಾಗ, ಅವಳನ್ನು ಬಿಗಿದಪ್ಪಿಕೊಂಡು ಬುದ್ಬುದಾ ಬುಳುಬುಳನೆ ಅಳುತ್ತಾ ಮಧ್ಯೆ ಮಧ್ಯೆ ನಗುತ್ತಾ "ಮರೆಯಬೇಡ ವನ್ದಾ, ಆಗಿಂದಾಗ್ಗೆ ಹಂಸ ಸಂದೇಶಗಳನ್ನು ಕಳುಹಿಸುತ್ತಿರು" ಎಂದು ಹೇಳಿದಳು. "ನೀನೂ ಹಾಗೆಯೇ ಮಾಡು, ನಳಕೂಬರನಿಂದ ವಿರಾಮವು ದೊರಕಿದಾಗ" ಎಂದು ವನ್ದಾ ಹೇಳಿ, ಹಂಸತೂಲಿಕಾ ಹೆಲಿಕಾಪ್ಟರಿನಲ್ಲಿ ಕುಳಿತು ಹಿಂತಿರುಗಿದಳು.

ವ್ಯಾಯಾಮ ಸಚಿವನಾದ ಪ್ರಹಾಸನು ಬುದ್ಬುದಳ ಕ್ರೀಡಾಪಟುತ್ವವನ್ನು ಕಂಡು ಹಿರಿಹಿಗ್ಗುತ್ತಿದ್ದ.

# ಮೇನಕೆಯ ತಾಯ್ತನ

**ನಂ**ದನವನದ ಲತಾಗೃಹದ ಬಳಿಗೆ, ಕಿರುಕಿರು ಹೆಜ್ಜೆಗಳಾದರೂ ಬಿರುಬಿರನೆ ಇಡುತ್ತಾ ಸುಂದರ ಯುವತಿಯೊಬ್ಬಳು ನಡುಹಗಲಿನಲ್ಲಿ ನಡೆದು ಹೋದಳು. ಲತಾಗೃಹದ ಹೊರ ಅಂಗಳದಲ್ಲಿ ತಾನು ಕೊಂಡೊಯ್ದಿದ್ದ ಸಾಮಗ್ರಿಗಳನ್ನು ವಾರಣವಾಗಿ ಸಜ್ಜುಗೊಳಿಸಿದಳು. ಅಂಗಳದ ಹೊರಸ್ಥಂಬದ ಬಳಿಯಲ್ಲಿ ರಜತಪಾತ್ರೆಯನ್ನು ಇರಿಸಿದಳು. ಗಿಂಡಿಯಿಂದ ಆ ಪಾತ್ರೆಗೆ ಹಾಲನ್ನು ಸುರುವಿದಳು. ಅನತಿ ದೂರದಲ್ಲಿ ತೂಗುಹಲಗೆಯನ್ನು ನಿಲ್ಲಿಸಿದಳು. ಶ್ವೇತಪತ್ರವನ್ನು ಹಲಗೆಗೆ ಲಗತ್ತಿಸಿದಳು. ಬಲಗೈಯಲ್ಲಿ ಕಂಚುಕವನ್ನು ಹಿಡಿದು ಎಡಗೈಯಲ್ಲಿ ವರ್ಣಗಳಿದ್ದ ಹರಿವಾಳವನ್ನು ಹಿಡಿದು ಚಿತ್ರರಚನೆಗೆ ಸಿದ್ಧಳಾದಳು.

ಪಿಲ್ಲಿ, ಪಿಲ್ಲೀೀ ಎಂದು ಮಾದಕ ದನಿಯಲ್ಲಿ ಕರೆಯಿತ್ತಳು.

ಲತಾಗೃಹದ ಹಿತ್ತಲ ಕೊಠಡಿಯಿಂದ ಬೆಕ್ಕು ಓಡಿಯೋಡಿ ಬಂದಿತು. ರಜತಪಾತ್ರೆಯತ್ತ ಧಾವಿಸಿತು. ಅದರೊಳಗಿದ್ದ ಹಾಲನ್ನು ಕಂಡು ಮೀಸೆಯನ್ನು ಕುಣಿಸಿತು. ನಂತರ ಭೋಜನಪೂರ್ವ ಬ್ರಾಹ್ಮಣರು ಒಂದು ಕಾಲದಲ್ಲಿ ಘೋಷಿಸುತ್ತಿದ್ದಂತೆ, ಮಂತ್ರವನ್ನು ಉಚ್ಚರಿಸಿತು. "ಮಿಯಾಂವಾಯ ಸ್ವಾಹ, ಮಿಯಾಂನಾವ ಇದನ್ನಮಮ" ಎಂಬಂತೆ ಅದರ ಮಿಯಾಂವ್ ಕೇಳಿಸಿತು.

ಈ ಮಂತ್ರಘೋಷಣೆಯು ಲತಾಗೃಹದಲ್ಲೆಲ್ಲಾ ಪಸರಿಸಿತು. ಲತಾಗೃಹದ ಹಿತ್ತಲ ಕೊಠಡಿಗೂ ಅತಿಕ್ರಮಿಸಿತು. ಇದನ್ನು ಕೇಳಿಸಿಕೊಂಡ ಬೆಕ್ಕಿನ ಮರಿಗಳೆರಡು ಕಿವಿಯನ್ನು ನಿಮಿರಿಸಿದವು. ಬೆನ್ನನ್ನು ಬಿಲ್ಲಿನಂತೆ ಬಾಗಿಸಿದವು. ಬಾಲವನ್ನು ಧ್ವಜದಂತೆ ಎತ್ತಿದವು. ಮಂತ್ರಕ್ಕೆ ಪ್ರತಿಧ್ವನಿಯನ್ನು ನುಡಿಸುತ್ತಾ, ಕಿರು ಕೊರಲುಗಳಿಂದ ಮಿಂಯಾವ್ ಎನ್ನುತ್ತ, ತಾಯ ಬಳಿಗೆ ಓಡಿದವು. ಮಕ್ಕಳು ಬಂದುದನ್ನು ಕಂಡು ತಾಯಿಬೆಕ್ಕು ರಜತಪಾತ್ರೆಗೆ ಬಾಯಿ ಹಾಕಿ, ಹಾಲನ್ನು ಹೀರಲು ಪ್ರಾರಂಭಿಸಿತು. ಮಕ್ಕಳೆರಡೂ ತಾಯ ಸ್ತನಗಳಿಗೆ ಬಾಯಿ ಹಾಕಿ ತಾವೂ ಹೀರಲು ಆರಂಭಿಸಿದವು. ಉದರ ಪೂರ್ತಿಯಾಗಿ ಹಾಲು ಕುಡಿದು ತಾಯಿ ಬೆಕ್ಕು ಎಡ ಪಾರ್ಶ್ವದ ಮೇಲೆ ಪವಡಿಸಿತು. ಇನ್ನೂ ಹಾಲು ಕುಡಿಯುತ್ತಿದ್ದ ಮರಿಗಳು ಸ್ತನದ ರುದ್ರಾಕ್ಷಿಗಳನ್ನು ತುಟಿಗಳಿಂದ ಬಿಗಿ ಹಿಡಿದು, ತಮ್ಮ ಉದರ ಪೋಷಣೆಯನ್ನು ಮುಂದುವರಿಸುತ್ತಿದ್ದುವು. ಕ್ಷುದ್ಬಾಧೆಯು ನಿವಾರಣೆಯಾದ ಕಾರಣದಿಂದಲೂ, ಮಕ್ಕಳ ಸ್ತನ್ಯಪಾನ ಮಾಡುತ್ತಿರುವ ಸಂಭ್ರಮವೂ, ತಾಯಿಬೆಕ್ಕಿನ ಮುಖದ ಮೇಲೆ ಅಮಿತಾನಂದದ ಕಳೆಯನ್ನು ಮೂಡಿಸಿದ್ದುವು. ಮಕ್ಕಳತ್ತ ತನ್ನ ಎರಡೂ ಕಣ್ಣುಗಳನ್ನು ಕೇಂದ್ರೀಕರಿಸಿ ತಾಯಿಬೆಕ್ಕು ಆನಂದ ಸಮಾಧಿಯನ್ನು ಗಳಿಸಿಕೊಂಡಿತ್ತು.

ಅನಾದಿ ಅನಂತವಾದ ಈ ದೃಶ್ಯವನ್ನು ಯುವತಿಯು ಶ್ವೇತಪತ್ರದ ಮೇಲೆ ವರ್ಣರಂಜಿತವಾಗಿ ಚಿತ್ರಿಸಲು ಉದ್ಯುಕ್ತಳಾಗಿದ್ದಳು. ಆಕೆಯು ಆಗ ಕಾಣುತ್ತಿದ್ದ ಸೌಂದರ್ಯದ ಸೊಬಗು ಆಕೆಯ ಬೆರಳುಗಳಿಗೆ ಪಾದರಸದೋಪಾದಿಯಲ್ಲಿ ಹರಿದು, ವರ್ಣ ರಂಜಿತ ಚಿತ್ರದ ಸೃಷ್ಟಿಗೆ ನೆರವಾಗಿದ್ದಿತು. ಆಕೆಯ ಬಲತೋಳಿನ ಮೇಲೆ ಆ ವೇಳೆಯಲ್ಲಿ ಇಳಿದಿದ್ದ ಜೇಡರ ಹೆಣ್ಣೊಂದು ತೋಳಮೇಲೆ ಹರಿದಾಡುತ್ತಾ ಚಿತ್ರವನ್ನು ನೋಡಲು ಸ್ಥಳವನ್ನು ಹುಡುಕುತ್ತಿದ್ದಂತಿತ್ತು. ಹುಳುವಿನ ಪರದಾಟವು ಚಿತ್ರಿಸುತ್ತಿದ್ದ ಯುವತಿಯ ಮನಃಪಟಲದ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡಲಿಲ್ಲ. ಯುವತಿಯ ಏಕಾಗ್ರಚಿತ್ತತೆಯು, ಸೌಂದರ್ಯಾನುಭವವು ಮತ್ತು ಸೌಂದರ್ಯಾರಾಧನೆಯು ಅಷ್ಟು ಅತ್ಯುಗ್ರವಾಗಿತ್ತು. ಕಂಡ ಸುಂದರ ದೃಶ್ಯ, ವರ್ಣಚಿತ್ರ, ಮತ್ತು ತಾನೂ, ಅವಿಚ್ಛಿನ್ನವಾದ ಅಯೋನಿಜವಾದ ಆದ್ಯಂತ ರಹಿತವಾದ, ಆನಂದಾನುಭವದಲ್ಲಿ ಒಂದೇ ಆಗಿದ್ದಿತು.

ವರ್ಣಚಿತ್ರ ರಚನೆಯಲ್ಲಿ ತಾಯಿಬೆಕ್ಕಿನ ಮುಖದ ಪಾತ್ರವು ಹಿರಿದಾಗಿತ್ತು. ಮುಖಕ್ಕಿಂತ ಮುಖವನ್ನು ನಡಸುತ್ತಿದ್ದ ಮಾನಸಿಕ ಭಾವನೆಯು ಚಿತ್ರದಲ್ಲಿ ಪ್ರತ್ಯಕ್ಷವಾಗಿತ್ತು. ಅಂದರೆ ಚಿತ್ರವನ್ನು ವೀಕ್ಷಿಸಿದ ಕಣ್ಣುಗಳಿಗೆ ಬೆಕ್ಕಿನ ಮಾನಸಿಕ ಆನಂದಾನುಭವವು ಸುಲಭವಾಗಿ ಕಾಣಿಸುತ್ತಿತ್ತು. ಕೃತಕೃತ್ಯರಾದ ಕಲಾರಾಧಕರ, ಮತ್ತು ಸಹೃದಯ ಕಲಾರಸಿಕರ ನಡುವೆ ಇರಬೇಕಾದ ಈ ಸಂಪರ್ಕವನ್ನು ಯುವತಿಯು ಅತ್ಯುತ್ತಮ ರೀತಿಯಲ್ಲಿ ಸಾಧಿಸಿದ್ದಳು. ಚಿತ್ರರಚನೆಯು ಇನ್ನೇನು ಪೂರ್ಣವಾಯಿತು.

ಅಷ್ಟರಲ್ಲಿ ಲತಾಗೃಹದ ಬಳಿಗೆ ಧಾವಿಸಿ ಬರುತ್ತಿದ್ದ ಯುವತಿಯೊಬ್ಬಳು "ಎಷ್ಟು ಹೊತ್ತಿನಿಂದ ನಿನ್ನನ್ನು ಹುಡುಕುತ್ತಿದ್ದೀನಮ್ಮಾ! ಚಿತ್ರಲೇಖಾ! ಮನೆಯಲ್ಲಿ ನೀನಿರಲಿಲ್ಲ. ಯಾರಿಗೂ ಎಲ್ಲಿಗೆ ಹೋಗುತ್ತೀನಿ ಎಂದು ಹೇಳಿರಲಿಲ್ಲ. ಕಲಾಶಾಲೆಗೆ ಹೋದೆ. ಅಲ್ಲಿಗೆ ನೀನು ಹೋಗಿದ್ದೆಯೆಂದೂ, ಕೆಲವೇ ಕ್ಷಣಗಳಲ್ಲಿ ಹೊರ ಹೊರಟೆಯೆಂದೂ ಹೇಳಿದರು. ಆದರೆ ಎಲ್ಲಿಗೆ ಅಂತ ಅವರಿಗೂ ಗೊತ್ತಿರಲಿಲ್ಲ. ನಿನ್ನ ಬಾಯ್ ಫ್ರೆಂಡ್ ವಿದ್ಯಾಧರನನ್ನು ವಿಚಾರಿಸಿದೆ. ನನಗೂ ತಿಳಿಯದು ಅಂದ. ನಿನ್ನ ಎರಡನೆಯ ಹವ್ಯಾಸದ ಸುಳಿವು ಗೊತ್ತಿತ್ತು. ಆದಕಾರಣ ಇಲ್ಲೇನಾದರೂ ಬಂದು ಚಿತ್ರ ರಚನೆಗೆ ಏಕಾಂತದಲ್ಲಿ ತೊಡಗಿದ್ದೀಯೇನೋ ಎಂದು ಊಹಿಸಿ ಬಂದೆ. ಎಷ್ಟು ಹೊತ್ತಿನಿಂದ ಇಲ್ಲಿ ಇದ್ದೀ" ಎಂದು ಹೇಳುತ್ತಾ ಹತ್ತಿರ ಹತ್ತಿರಕ್ಕೆ ಬಂದಳು.

ತಲೆಯನ್ನು ತಿರುಗಿಸಿ, ಬಂದವರಾರೆಂದು ಚಿತ್ರಲೇಖೆಯು ನೋಡಲಿಲ್ಲ. ಬಂದ ಯುವತಿಯು ಅಂದಿದ್ದು ಆಕೆಗೆ ಕೇಳಿಸಿದಂತೆಯೂ ಇರಲಿಲ್ಲ. ಕಾರಣ ಬಂದಾಕೆಯು ಚಿತ್ರಲೇಖೆಯನ್ನು ಸಮೀಪಿಸಿದಾಗ ದನಿಯನ್ನು ಇಳಿಸಿದಳು. ಇನ್ನೂ ಹತ್ತಿರವಾದಾಗ ಮಾತನ್ನು ನಿಲ್ಲಿಸಿದಳು. ಕೇವಲ ಸಮೀಪವಾದಾಗ ಉಸಿರಾಡುವುದನ್ನೂ ಹಗುರಿಸಿದಳು. ಚಿತ್ರಲೇಖೆಯ ಬೆನ್ನ ಹಿಂದೆ ನಿಶ್ಶಬ್ದವಾಗಿ ನಿಂತು, ತೋಳ ಮೇಲೆ ಇಣಕಿ, ಸೃಷ್ಟಿಯಾಗುತ್ತಿದ್ದ ಚಿತ್ರವನ್ನು ನೋಡಿದಳು. ನೋಡುತ್ತ, ನೋಡುತ್ತ ತಾನೂ ಭಾವ ಸಮಾಧಿಯಲ್ಲಿ ಮಿಂದು ಮುಳುಗಿದಳು. ಚಿತ್ರವು ಸಂಪೂರ್ಣವಾಯಿತು. ಕೆಳಗಿನ ಎಡದ ಮೂಲೆಯಲ್ಲಿ ಜಾಜಿಯ ಹೂವೊಂದನ್ನು ಚಿತ್ರಲೇಖೆಯು ಕುಂಚದ ಎರಡು ಸ್ಪರ್ಶನಗಳಿಂದ ಚಿತ್ರಿಸಿದಳು. ಅದೆ ಅವಳ ಚಿತ್ರಗಳ ಹಸ್ತಾಕ್ಷರದ ಸಹಿ.

ನಂತರ ಹಿಂದೆ ಹಿಂದಕ್ಕೆ ನಡೆಯಲು ಚಿತ್ರಲೇಖೆಯು ತೊಡಗಿದಳು. ತುಸು ದೂರದಿಂದ

ಚಿತ್ರವನ್ನು ವೀಕ್ಷಿಸಿದರೆ ಅದರ ಸೊಬಗನ್ನು ಪೂರ್ಣ ಕಾಣಬಹುದು. ಹಿನ್ ಹೆಜ್ಜೆಯನ್ನು ಹಾಕಲಾರಂಭಿಸಿದ ಚಿತ್ರಲೇಖೆಯ ಜತೆಗೂ ಹಿಂದಿದ್ದ ಯುವತಿಯು, ತಾನೂ ಹಿನ್ ಹೆಜ್ಜೆಗಳನ್ನು ಇಡಲಾರಂಭಿಸಿದಳು. ಎಂಟು ಹತ್ತು ಹೆಜ್ಜೆಗಳನ್ನು ಇರಿಸಿರಬಹುದು. ಆಗ ಪುಷ್ಪ ಕುಂಡವೊಂದನ್ನು ಎಡವಿ, ಹಿಂದಿದ್ದ ಯುವತಿಯು ಬಿದ್ದಳು. 'ಅಯ್ಯಯ್ಯಪ್ಪಾ' ಎನ್ನುತ್ತ ಬಿದ್ದಳು. ಆ ಸದ್ದು ಚಿತ್ರಲೇಖೆಯನ್ನು ಭಾವ ಸಮಾಧಿಯಿಂದ ಎಚ್ಚರಿಸಿತು. ಹಿಂತಿರುಗಿ ಅವಳು ನೋಡಿದಳು. ಬಿದ್ದ ಹೆಣ್ಣನ್ನು ಕಂಡು ಕಂಪಿಸಿದಳು.

"ಏನಾಯ್ತು! ಮೇನಕಕ್ಕ! ನೀವು ಯಾವಾಗ ಬಂದಿರಿ. ಪುಷ್ಪ ಕುಂಡವನ್ನು ಎಡವಿ ಯಾಕೆ ಬಿದ್ದಿರಿ. ಅದು ಕಾಣಿಸಲಿಲ್ಲವೇ? ಪೆಟ್ಟಾಯಿತೇ?"

—ಎಂದು ಕಾತರದಿಂದ ಹಾಗೂ ಆದರದಿಂದ ವಿಚಾರಿಸಿದಳು.

ಬಿದ್ದಿದ್ದ ಮೇನಕೆಯು ಎದ್ದು, ಧೂಳಾದ ಮೈ ಭಾಗವನ್ನು ಕೊಡವಿಕೊಳ್ಳುತ್ತಾ "ಅಂತಹುದೇನೂ ಪೆಟ್ಟಾಗಲಿಲ್ಲ. ದಟ್ಟವಾಗಿ ಬೆಳೆದ ಗರಿಕೆಯ ಹುಲ್ಲಿನ ಮೇಲೆ ಬಿದ್ದಿದ್ದು ಪುಣ್ಯ" ಎಂದು ಆರಂಭಿಸಿ, ತಾನು ಬಂದಾಗಿನಿಂದ ಚಿತ್ರರಚನೆಯನ್ನು ಯಾವ ರೀತಿಯಲ್ಲಿ ಆಸಕ್ತಿಯಿಂದ ನೋಡುತ್ತಿದ್ದಳೆಂಬುದನ್ನು ವಿವರಿಸಿದಳು. "ಆದರೂ, ಚಿತ್ರಲೇಖಾ! ನಿನ್ನ ಕಲಾ ಕೌಶಲ್ಯಕ್ಕೆ ತಲೆದೂಗಬೇಕಮ್ಮಾ! ಕೈ ಹಿಡಿದ ಕಾರ್ಯದಲ್ಲಿ ಸಂಪೂರ್ಣವಾಗಿ ಮಗ್ನಳಾಗುತ್ತೀಯಲ್ಲ! ನಿನ್ನಂತಹ ಎಳೆಯ ವಯಸ್ಸಿನವರಲ್ಲಿ ಅಂತಹ ಏಕಾಗ್ರಚಿತ್ತತೆಯೂ ವಿರಳವಮ್ಮ?! ಆದುದರಿಂದಲೇ ಕಲಾಧಿದೇವತೆಯು ನಿನ್ನ ಕುಂಚಗಳ ಮೇಲೆ ಸುಸೂತ್ರವಾಗಿ ನೃತ್ಯಗೈಯುತ್ತಿದ್ದಾಳೆ. ಹಾಲುಣ್ಣುತ್ತಿರುವ ಮರಿ ಬೆಕ್ಕುಗಳನ್ನು ನೋಡುತ್ತ, ತಾಯಿ ಬೆಕ್ಕು ಅನುಭವಿಸುವ ಆನಂದವನ್ನು ಚಿತ್ರದ ಪ್ರೇಕ್ಷಕರು ಕೂಡ ಕಾಣುವಂತಿದೆಯಲ್ಲೇ! ಅದ್ಭುತವಮ್ಮಾ! ಅದ್ಭುತ!! ಇದೊಂದು ಚಿತ್ರದಿಂದಲೇ ನಿನಗೆ ಯಶಸ್ವೀ ಪ್ರಶಸ್ತಿಯು ದೊರಕುತ್ತದೆ" ಎಂದು ತನ್ನ ಮೆಚ್ಚುಗೆಯನ್ನೂ ಸೂಚಿಸಿದಳು.

"ಅಕ್ಕ! ಚಿತ್ರಕಲೆಯಲ್ಲಿ ಮಕ್ಕಳ ತರಹ ಇರುವ ನನ್ನನ್ನು ನೀವು ಹೊಗಳುವುದು ನಿಮ್ಮ ಆದರದ ಸಂಕೇತ ಅನ್ನುವುದು ನನಗೂ ತಿಳಿದಿದೆ. ಆದರೂ ನಿಮ್ಮ ಆಶೀರ್ವಾದಕ್ಕೆ ತಲೆಬಾಗುತ್ತೇನೆ. ಆದರೆ ನನ್ನನ್ನು ಹುಡುಕಿಕೊಂಡು ಬಂದ ಕಾರಣವೇನು? ಅದನ್ನು ತಿಳಿಸಲೇ ಇಲ್ಲವಲ್ಲ" ಎಂದು ಚಿತ್ರಲೇಖೆಯು ಕೇಳಿದಳು.

"ಸ್ಫಟಿಕ ಮಣಿಯನ್ನು ದಿಟ್ಟಿಸಿ ನೋಡಿ ಭವಿಷ್ಯವನ್ನು ನುಡಿಯುತ್ತಾರಲ್ಲಾ! ಅದರಲ್ಲಿ ನಿನಗೆ ನಂಬಿಕೆಯು ಇದೆಯೋ ಇಲ್ಲವೋ ನಾನು ಅರಿಯೆ. ಆದರೆ ಹಾಗೆ ಭವಿಷ್ಯ ನುಡಿಯುವ ಸ್ವಧಾದೇವಿಯಲ್ಲಿ ನನಗೆ ನಂಬುಗೆಯಿದೆ. ಅಗ್ನಿದೇವನ ಎರಡನೆಯ ಹೆಂಡತಿಯಾದ ಸ್ವಧಾದೇವಿಯನ್ನು ನೀನು ನೋಡಿಲ್ಲವೇ? ಆಕೆಯು ಪರಿಚಿತರಿಗೆ ಸ್ಫಟಿಕ ಮಣಿಯನ್ನು ನೋಡಿ ಭವಿಷ್ಯವನ್ನು ನುಡಿಯುವುದುಂಟು. ಆ ರೀತಿಯಲ್ಲಿ ಆಕೆ ಒಮ್ಮೆ ಸ್ಫಟಿಕ ಮಣಿಯನ್ನು ನೋಡಿದಾಗ ತನ್ನ ಭವಿಷ್ಯವನ್ನು ತಿಳಿಯಬಯಸಿದಾಗ, ತನ್ನ ಗಂಡಸು ಸಪ್ತ ಋಷಿಗಳ ಪತ್ನಿಯರಲ್ಲಿ ವಾರ ಮಾಡಿಕೊಂಡು ಕ್ರೀಡಿಸುತ್ತಿದ್ದುದು ತಿಳಿಯಿತು. ಒಬ್ಬಳೆ ಸವತಿಯಿದ್ದಾಳೆ ಎಂದುಕೊಂಡಿದ್ದ ಅವಳಿಗೆ ತುಂಬಾ ಬೇಸರವಾಯಿತು. ಆದಕಾರಣ ತನ್ನ ಗಂಡನ ಮೊದಲ ಹೆಂಡತಿಯಾದ ಸ್ವಾಹಾದೇವಿಯನ್ನು ಒಲಿಸಿಕೊಂಡಳು. ಅವಳ ಬೆಂಬಲವನ್ನು ಪಡೆದು ಅಗ್ನಿದೇವನನ್ನು ಸಂಪೂರ್ಣ ಹತೋಟಿಯಲ್ಲಿಟ್ಟು

ಕೊಂಡಳು. ಅಂದರೆ ಸ್ವಪ್ರಯತ್ನದಿಂದ, ಸೂಚಿತವಾಗಿರುವ ಭವಿಷ್ಯವನ್ನು ಅನುಕೂಲಕರವಾಗಿ ಮಾರ್ಪಡಿಸಬಹುದು ಎನ್ನುವುದು ಖಚಿತವಾಯಿತು. ಆದಕಾರಣವೇ ನಾನು ಆಕೆಯ ಬಳಿಗೆ ಸಲಹೆಗೆ ಹೋಗಿದ್ದೆ.

ಕೆಲವು ದಿನಗಳಿಂದಲೂ ಬಲಗಣ್ಣು ಇದ್ದಕ್ಕಿದ್ದಂತೆ ಹಾರಲು ಪ್ರಾರಂಭವಾಯಿತು. ಕಂಡವರು, ಇವಳೇಕೆ ಈ ರೀತಿ ಕಣ್ಣು ಮಿಟುಕಿಸುತ್ತಾಳೆ ಎಂದು ತಪ್ಪು ಅರ್ಥವನ್ನು ಗ್ರಹಿಸುವರೇನೋ ಎಂಬ ಹೆದರಿಕೆಯಾಯಿತು. ಇದು ಶುರುವಾದ ಕೆಲವೇ ಘಳಿಗೆಗಳಲ್ಲಿ ಬಲಎದೆಯು ತನ್ನಷ್ಟಕ್ಕೆ ತಾನೇ ಥರಥರಿಸಲಾರಂಭಿಸಿತು. ಯಾವುದೋ ಅದೃಶ್ಯವಾಗಿರುವ ರಸಿಕನು ಬಲ ಕುಚದ ಮೇಲೆ ಬೆರಳಾಡಿಸಿ ಕುಚಗುಳಿಯಾಡುತ್ತಿದ್ದಾನೆಯೋ ಎಂಬಂತೆ ಅಂತರಾತ್ಮವು ನುಡಿಯುತ್ತಿತ್ತು. ಕುಳಿತಿದ್ದಲ್ಲೇ ಹಗೂರಾಗಿ ಕುಣಿಯಲೇ ಎನಿಸುತ್ತಿತ್ತು. ಎಲ್ಲಿ ಯಾವ ಸಭೆಯಿರಲಿ ಹೀಗಾಗಹತ್ತಿತು. ಕಂಡವರು ಏನೆಂದುಕೊಂಡಾರು? ಇವಳಿಗೆ ಹುಚ್ಚೋ ಬೆಪ್ಪೋ ಶಿವಲೀಲೆಯೋ ಅಮರಿಕೊಂಡಿರಬೇಕು ಎಂದಂದುಕೊಳ್ಳುವುದಿಲ್ಲವೇ? ಅದೇ ರೀತಿಯಲ್ಲಿ ಇದ್ದಕ್ಕಿದ್ದಂತೆ ಬಲ ತೊಡೆಯು ಕುಣಿಯಲಾರಂಭಿಸಿತು. ಎಷ್ಟೋ ಹತೋಟಿಯಲ್ಲಿಡಲು ಪ್ರಯತ್ನಿಸಿದರೂ, ಆ ಭಾಗದ ಸೀರೆಯು ಎದ್ದು ಅಲೆಯಲೆಯಾಗುವುದು ತಪ್ಪಲಿಲ್ಲ. ಇದನ್ನು ಕಂಡವರನಕ ಈಕೆ ಮದನ ಮಸ್ತಿ ಲೇಹವನ್ನು ಗಡದ್ದು ತಿಂದಿದ್ದಾಳೆ ಎಂದಂದುಕೊಂಡರೆ ಆಶ್ಚರ್ಯವೇನೂ ಇರಲಿಲ್ಲ. ಅಪ್ಸರೆಯರು ಮದನ ಮಸ್ತಿ ಲೇಹವನ್ನು ತಿನ್ನುವಂತಾದರೆ ಭಾರೀ ಮುಪ್ಪು ಅವರಿಗೆ ಅಡರಿದೆ ಎಂದು ಅರ್ಥ ಬರುತ್ತದೆ. ಯಾವ ಹೆಣ್ಣಾದರೂ ವಯಸ್ಸು ಮೀರಿತು ಎಂದರೆ ನೇಣುಹಾಕಿಕೊಳ್ಳುವುದು ಕ್ಷೇಮ ಎಂದು ಅನಿಸದೇ ಇರದು. ಹಾಗಾಗಿ ನನ್ನ ಕೊರಗು ಮಿತಿಮೀರಿತು. ಅನಂಗನೇನಾದರೂ ಈ ರೀತಿಯಲ್ಲಿ ನನ್ನ ಅಂಗಗಳನ್ನು ನಲಿಸುತ್ತಿರುವನೋ ಎಂಬ ಅನುಮಾನವು ಬಾರದಿರಲಿಲ್ಲ. ಆದರೆ ಅನಂಗನು ಪಾರ್ಶ್ವವಾಯುವಿನಂತೆ ಅರ್ಧ ದೇಹವನ್ನು ಮಾತ್ರ ನಲಿಸುವುದು ಯಾರಿಗೂ ತಿಳಿಯದು. ನಂಬಲೂ ಕಷ್ಟ. ಹಾಗಾಗಿ ಇದು ಯಾವುದೋ ಭೂತ ಚೇಷ್ಟೆ ಇರಬೇಕು ಎಂದು ಸಂಶಯವು ಮೂಡಿತು. ಹಿಂದೊಮ್ಮೆ ಗಂಧಮಾದನ ಪರ್ವತದ ಕಿಬ್ಬಿಯಲ್ಲಿ ವಿದ್ಯಾಧರನೊಂದಿಗೆ ವಾರಾಂತ್ಯ ಮೋಜಿಗೆಂದು ಹೋಗಿದ್ದೆ. ಸ್ವಲ್ಪ ಮೈ ಮರೆತಿದ್ದಾಗ ಯಾವುದೋ ಗಾಳಿಯು ಹರಿದಾಡಿದಂತಾಯಿತು. ಭಯವೂ ಆಯಿತು. ಕಿರಿಚಿಕೊಂಡೂ ಬಿಟ್ಟೆ. ಸಮಾಧಾನ ಪಡಿಸಲೋಸುಗ ವಿದ್ಯಾಧರ ಗೆಳೆಯನು "ಕೆಟ್ಟ ಕನಸು ಬಿದ್ದಿರಬೇಕು. ನವಿಲು ಮೊಟ್ಟೆಯನ್ನು ಉಪ್ಪು ಮುಂದು ಮಾಡಿ ತಿಂದರೆ ಕೆಟ್ಟ ಕನಸುಗಳು ಬೀಳುವುದು ಸ್ವಾಭಾವಿಕ" ಎಂದು ಹೇಳಿದ. ಅಂತಹ ಸಮಯದಲ್ಲಿ, ಅಂತಹ ಸ್ಥಳದಲ್ಲಿ ಯಾರಾದರೂ ಎದುರಿಗೆ ವಿದ್ಯಾಧರನಿರುವಾಗ ತೂಕಡಿಸುವುದಕ್ಕೆ ತೊಡಗುತ್ತಾರೆಯೇ? ಆದುದರಿಂದಲೇ ಯಾವುದೋ ಗಾಳಿ ಚೇಷ್ಟೆ ಇದು, ಎಂತದೋ ಕಿಬ್ಬಿಯ ಭೂತದ ಕಾಟವಿರಬೇಕು ಎಂದನ್ನಿಸಿತು. ಈ ಚಿಹ್ನೆಗಳು ತೋರಿ ಬಂದಾಗ, ಆಗ ತೋರಿದ ಅನುಮಾನವು, ಈಗ ಬಲವಾಯಿತು. ಈ ಚೇಷ್ಟೆಯ ಮೂಲವನ್ನು ತಿಳಿದುಕೊಳ್ಳಲು ಸ್ವಧಾದೇವಿಯ ಬಳಿಗೆ ಹೋಗಿದ್ದೆ. ಸಂಭವಿಸುತ್ತಿದ್ದ ಲಜ್ಜೆಯೇರಿಸುವಂತಹ ಘಟನೆಗಳನ್ನು ಆಕೆಗೆ ವಿವರಿಸಿದೆ.

"ಇದು ಗಾಳಿಯ ಚೇಷ್ಟೆಯೂ ಅಲ್ಲ, ಭೂತದ ಕಾಟವೂ ಅಲ್ಲ, ಈ ಚಿಹ್ನೆಗಳೆಲ್ಲಾ ನನಗೆ ಚಿರಪರಿಚಿತ. ಸಪ್ತಋಷಿ ಪತ್ನಿಯರನ್ನು ನನ್ನ ಗಂಡನೊಂದಿಗೆ ಸ್ಫಟಿಕ ಮಣಿಯಲ್ಲಿ ಕಂಡಾಗ ನನಗೂ

ನಿನಗಾಗುತ್ತಿರುವ ಹಾಗೆಯೇ ಆಯಿತು. ಮೂರು ದಿನಗಳು ಬಿಡದೆ ಪರಂಗಿಯ ಕಾಯಿ ಪಲ್ಯವನ್ನು ದಾಸಿಯು ಮಾಡಿ ಉಣಿಸಿದಳು. ನಾಲ್ಕನೆಯ ದಿನದಿಂದ ಸೌಭಾಗ್ಯಳಾದೆ. ನೀನೂ ಹಾಗೆ ಮಾಡು ಸರಿಹೋಗುತ್ತೆ" ಎಂದಳು.

"ಬರುವುದೇನೋ ಬಂದಿದ್ದಾಯಿತು. ನೀನು ಹೇಳಿದಂತೆ ಮಾಡಿಯೂ ಮಾಡುತ್ತೇನೆ. ಅದರಿಂದ ಗುಣ ಹೊಂದುವೆನೆಂಬ ನಂಬಿಕೆಯೂ ಇದೆ. ಆದರೂ ಸ್ಫಟಿಕ ಮಣಿಯನ್ನು ದಿಟ್ಟಿಸಿ ನೋಡುವುದರಿಂದ ತಪ್ಪೇನೂ ಆಗಲಾರದಲ್ಲ" ಎಂದು ನಾನಂದೆ.

"ಅನುಮಾನವು ಮೂಡಿದಾಗ ಮಾತ್ರ ಹಾಗೆ ನೋಡಬೇಕು ನಾನು. ವೃಥಾ ನೋಡಬಾರದು ಎಂಬ ನೇಮವಿದೆ. ಆದರೆ ಅಷ್ಟು ಆಸೆಯಾದರೆ ನಿನ್ನ ಕಣ್ಣಿಗೆ ಅಂಜನ ಹಚ್ಚುತ್ತೇನೆ. ನೀನೇ ಮಣಿಯನ್ನು ದಿಟ್ಟಿಸಿ ನೋಡು" ಎಂದು ಸ್ವಧಾದೇವಿಯು ನುಡಿದಳು.

ಹಾಗೆಯೇ ಮಾಡಿದೆ. ಸ್ವಲ್ಪ ಹೊತ್ತು ದಿಟ್ಟಿಸಿ ನೋಡುವಲ್ಲಿ ಮಣಿಯ ತುಂಬಾ ಕಾರ್ಗತ್ತಲೆಯು ತುಂಬಿಕೊಂಡಿತು. ನಂತರ ಸ್ವಲ್ಪ ಸ್ವಲ್ಪವಾಗಿ ಬೆಳಕಾಡಲಾರಂಭಿಸಿತು. ಯಾವುದೋ ನಮ್ಮ ಜಾತಿಯದೇ ಹೆಣ್ಣು ಕಾಣಿಸಿತು. ದಿಟ್ಟಿಸಿ ನೋಡುತ್ತಲೇ ಇದ್ದೆ. ಆ ಹೆಣ್ಣು ಊರ್ವಶಿ ಎಂದು ಖಚಿತವಾಯಿತು. ಆಮೇಲೆ ಅವಳೊಡನೆ ನೀನು ಕಾಣಿಸಿಕೊಂಡೆ. ಹೇಗೂ ಆಕೆಯ ಸಖಿ ಅವಳೊಡನೆ ಕಾಣಿಸಿದ್ದು ಸಹಜ ಎಂದುಕೊಂಡೆ. ನಂತರ ನೀವಿಬ್ಬರೂ ಎಲ್ಲಿಗೋ ವಿಹರಿಸಲು ಹೋದಂತೆ ಕಾಣಿಸಿತು. ನಿರ್ಜನ ಲೋಕವಾಗಿತ್ತು. ಅಲ್ಲಿ ನೀವಿಬ್ಬರೂ ಕಾಣಿಸುತ್ತಿದ್ದಿರಿ. ಹಠಾತ್ತನೆ ದೈತ್ಯನೊಬ್ಬನು ಕಾಣಿಸಿಕೊಂಡ. ನಿಮ್ಮಿಬ್ಬರನ್ನೂ ಎತ್ತಿಕೊಂಡು ತನ್ನ ರಾಜ್ಯಕ್ಕೆ ಓಡಿಹೋದ. ಆ ದೈತ್ಯನ ರೂಪವನ್ನು ಈಗ ಸ್ಮರಿಸಿಕೊಂಡರೂ ಭಯವಾಗುತ್ತಮ್ಮ! ಆಗ, ನೋಡುತ್ತಿದ್ದಾಗ, ಮೈಯೆಲ್ಲಾ ಬೆವರು ಮಣಿಗಳಿಂದ ತುಂಬಿಹೋಯಿತು. ಮುಖವೂ ಬಿಳುಚಿಕೊಂಡಿತು. ಇದನ್ನು ಕಂಡ ಸ್ವಧಾದೇವಿಯು "ಯಾವುದೋ ಭಯಾನಕ ದೃಶ್ಯವನ್ನು ನೋಡುತ್ತಿದ್ದೀ! ನಿನಗದು ಸಂಬಂಧಪಟ್ಟಿದ್ದರೆ ಭಯಕ್ಕಿಂತ ಹೆಚ್ಚಾಗಿ ಕುತೂಹಲವು ನಿನ್ನ ಮುಖದಲ್ಲಿ ಕಾಣಿಸುತ್ತಿತ್ತು. ಆದುದರಿಂದ ನಿನಗೆ ಸಂಬಂಧವಿರದ ಯಾವುದೋ ದೃಶ್ಯ ಎಂದು ಊಹಿಸುತ್ತೇನೆ. ಕಾರಣ, ನೋಡುವುದನ್ನು ನಿಲ್ಲಿಸು" ಎಂದಳು. ನನ್ನ ಕಣ್ಣುಗಳ ಮೇಲೆ ನವಿಲುಗರಿಯನ್ನು ಆಡಿಸಿದಳು. ಅಂಜನವು ಮಾಯವಾಯಿತು. ಸಹಜ ರೂಪದ ಸ್ಫಟಿಕ ಮಣಿಯು ಕಾಣಿಸಿತು.

"ನಿನ್ನನ್ನು ಕಂಡರೆ ನನಗೆ ತುಂಬಾ ಪ್ರೀತಿಯಿದೆ ಎನ್ನುವುದು ನಿನಗೂ ತಿಳಿದಿದೆ. ಆ ಕಾರಣದಿಂದಲೇ ನಿನ್ನ ಭವಿಷ್ಯದ ಒಂದು ಘಟನೆಯು ನನಗೆ ಕಾಣಿಸಿರಬೇಕು. ಈಗ ನೀನು ಎಚ್ಚರ ವಹಿಸುವುದು ಅಗತ್ಯ. ಊರ್ವಶಿಯೊಂದಿಗೆ ಕಾಣದ ಸ್ಥಳಕ್ಕೆ ಯಾವ ಕಾರಣದಿಂದಲೂ ಹೋಗಬೇಡ. ಇದನ್ನು ನಿನಗೆ ತುರ್ತಾಗಿ ತಿಳಿಸಲು, ಓಡಿಯೋಡಿ ಹುಡುಕಿಕೊಂಡು ಬಂದೆ"

—ಎಂದು ಮೇನಕೆಯು ನುಡಿದಳು.

"ಮೇನಕಕ್ಕ! ನಿಮ್ಮ ವಿಶ್ವಾಸಕ್ಕೆ ಅನಂತ ವಂದನೆಗಳು. ನಿಮ್ಮ ಎಚ್ಚರಿಕೆಯ ನುಡಿಯನ್ನು ನೆನಪಿನಲ್ಲಿಡುತ್ತೇನೆ. ಒಡತಿಯು ಕರೆದಾಗ ಸಖಿಯು ಇಲ್ಲವೆನ್ನಲು ಸಾಧ್ಯವಿಲ್ಲ. ಹಾಗಾಗಿ ಊರ್ವಶಿಯು ಕರೆದಾಗ, ನೀವು ಹೇಳಿದುದನ್ನು ಆಕೆಗೆ ತಿಳಿಸುತ್ತೇನೆ. ದೈತ್ಯರ ಮೇಲೆ ಆಕೆಗೆ ಯಾವ ಅನುರಾಗವೂ ಇಲ್ಲ. ಹಾಗೂ ಆಕೆಗೆ ಭೂಲೋಕದ ವೀರ ಚಕ್ರವರ್ತಿಗಳ ನಿಕಟ ಸ್ನೇಹವಿದೆ. ಒಂದು

ವೇಳೆ ದೈತ್ಯರ ಬಾಧೆಯು ಒದಗಿದರೆ ಚಕ್ರವರ್ತಿಗಳಾದರೂ ಸಂರಕ್ಷಣೆಗೆ ಬಂದೇ ಬರುತ್ತಾರೆ ದೈತ್ಯರನ್ನು ಭೂಲೋಕದ ಚಕ್ರವರ್ತಿಗಳು ಸುಲಭವಾಗಿ ಸೋಲಿಸಬಲ್ಲರು. ಅದೂ ಅಲ್ಲದ ಪುರೂರವಸ್ ಚಕ್ರವರ್ತಿಯನಕ ಬಲು ಶೂರ. ಹಾಗೂ ಊರ್ವಶಿಯ ಊರುಗಳ ವಶಿಯಾದವ ಅಂದಮೇಲೆ ಭವಿಷ್ಯದಲ್ಲಾಗಬಹುದಾದುದನ್ನು ಸ್ವಪ್ರಯತ್ನದಿಂದ ನಿವಾರಿಸಿಕೊಳ್ಳಲು ಸುಲಭವಾಗುತ್ತದೆ ಆದುದರಿಂದ ಊರ್ವಶಿಯ ಜೊತೆಗೆ ಎಲ್ಲಿಗೆ ಪ್ರವಾಸವನ್ನು ಕೈಗೊಂಡರೂ, ಪ್ರವಾಸದ ವೇಳಾಪಟ್ಟಿಯನ್ನು ಪುರೂರವಸ್ಸನಿಗೂ ಒಂದು ಪ್ರತಿಯು ತಲುಪುವಂತೆ ಏರ್ಪಡಿಸುತ್ತೇವೆ ನಾವೆಲ್ಲಾದರೂ ಕಾಣೆಯಾದರೆ ಈಗ ಆತ ರಕ್ಷಣೆಗೆ ಬಂದೇ ಬರುತ್ತಾನೆ" ಎಂದು ಚಿತ್ರಲೇಖೆಯು ಹೇಳಿದಳು.

"ಹುಷಾರು ಹೆಣ್ಣಮ್ಮಾ ನೀನು, ಆದರೂ ನನಗೆ ತಿಳಿಯ ಬಂದುದನ್ನು ಹೇಳಿಬಿಟ್ಟರೆ ನನ್ನ ಮನಸ್ಸಿಗೆ ಹಾಯ್ ಎನಿಸುತ್ತೆ. ಆದುದರಿಂದ ಹೇಳಿದೆ. ಹೋಗಿ ಬರ್‍ತೀನಿ. ಆದರೂ ಈ ನೆಪದಿಂದ ನಿನ್ನ ಚಿತ್ರಕಲಾ ಪ್ರವೀಣತೆಯನ್ನು ಹಸಿಯಾಗಿ ಕಾಣುವ ಭಾಗ್ಯ ಒದಗಿತು. ಚಿತ್ರದ ತಾಯ್ ಬೆಕ್ಕಿನ ಸಂತಸದ ಮುಖವನ್ನು ಮರೆಯಲು ಸಾಧ್ಯವೇ ಇಲ್ಲ" ಎಂದು ಹೇಳಿ ಮೇನಕೆಯು ನಂದನವನದಿಂದ ಹಿಂತಿರುಗಿದಳು.

*　　*　　*　　*　　*

ಮಹಲಿಗೆ ಮೇನಕೆಯು ಹಿಂತಿರುಗಿದಾಗ ಬಿಸಿಲಿನ ಝಳದಿಂದ ಅವಳ ಕೋಮಲ ಮುಖವು ಕೆಂಪೇರಿ ದಣಿದಂತಿತ್ತು. ಆದರೂ ಯಾವುದೋ ಅಸಮಾಧಾನದಿಂದ ತಪಿಸುತ್ತಿರುವಂತೆ ದಾಸಿಗೆ ಕಾಣಿಸಿತು. ಇದು ಕೇವಲ ದೇಹದ ಬಳಲಿಕೆಯಲ್ಲ ; ಮಾನಸಿಕ ಹಂಬಲವೂ ಕೂಡಿಕೊಂಡಿರಬೇಕು, ಎಂದು ಅನುಭವಸ್ಥಳಾದ ದಾಸಿಯು ಯೋಚಿಸಿದಳು. ಬೇಗ ಶೈತ್ಯಾಗಾರಕ್ಕೆ ಹೋದಳು. ಅದರ ಬಾಗಿಲನ್ನು ಬಿಡಿಸಿ ಹಿಮಾಚ್ಛಾದಿತವಾದ ಬಾದಾಮಿ ಕ್ಷೀರದ ಲೋಟಗಳಲ್ಲಿ ಒಂದನ್ನು ತೆಗೆದುಕೊಂಡು ಒಡತಿಯ ಬಳಿಗೆ ಬಂದು, ಕೊಟ್ಟಳು. ಆರಾಮಾಸನದಲ್ಲಿ ಕುಳಿತ ಒಡತಿಯ ಕಾಲ ಬಳಿ ಕುಳಿತು ಒಡತಿಯ ಮೀನಖಂಡಗಳನ್ನು ಬಿಡಿ ಬಿಡಿಯಾಗಿ ಒತ್ತಲು ಪ್ರಾರಂಭಿಸಿದಳು.

ಮೀನಖಂಡಗಳನ್ನು ದಾಸಿಯು ಹಿತವಾಗಿ ಒತ್ತಲಾರಂಭಿಸಿದಾಗ ಮೇನಕೆಯು ಮೀನ್ ಅಕ್ಷಿಯಾಗುತ್ತಿದ್ದಳು. ತನ್ನ ಆಳ ಮನಸ್ಸಿನ ಹಂಬಲವನ್ನೆಲ್ಲ ಹೇಳಿಕೊಂಡು, ತತ್ ಕಾರಣ ಹಗುರ ಮನಸ್ಕಳಾಗಿ ಸಂತಸಚಿತ್ತಳಾಗುತ್ತಿದ್ದಳು. ಆಗ ಅವಳ ಕಣ್ಣುಗಳು ಬಂಗಾಲೀ ಚಿತ್ರಗಳ ಹೆಣ್ಣುಗಳಂತೆ, ಮೀನಿನ ರೂಪವನ್ನು ಹೊಂದುತ್ತಿದ್ದುವು.

ಶೀತಲವಾದ ಬಾದಾಮಿ ಕ್ಷೀರವನ್ನು ಚಪ್ಪರಿಸುತ್ತ, ಹಾಯ್ ಎನ್ನುವಂತೆ ದಾಸಿಯು ಕಾಲುಗಳನ್ನು ಒತ್ತುತ್ತಿರುವಾಗ, ಮೇನಕೆಯು ಆತ್ಮಗತಂ ರೀತಿಯಲ್ಲಿ ನುಡಿಯಲಾರಂಭಿಸಿದಳು.

"ಚಿತ್ರಲೇಖೆಯು ದಿಟವಾಗಲೂ ಸ್ಫೂರ್ತಿಯ ಆಗರ ಕಣೆ! ತಾಯಬೆಕ್ಕಿನ ಮುಖದ ಆನಂದದ ಭಾವವನ್ನು ಎಷ್ಟು ಯಶಸ್ವಿಯಾಗಿ ಚಿತ್ರಿಸಿದ್ದಳು ಅಂತ! ತಾನು ಕುಡಿಯುವ ಹಾಲು ಸಂತಸವನ್ನು ಕೊಡುತ್ತಿದ್ದರೂ, ಮಕ್ಕಳಿಗೆ ಹಾಲನ್ನು ಊಡಿಸುವುದು ಅದಕ್ಕಿಂತಲೂ ಮಿಗಿಲಾದ ಸಂತಸವನ್ನು ಈಯುವುದು ಎಂಬ ಸತ್ಯವನ್ನು ಚಿತ್ರದಲ್ಲಿ ಕಾಣಿಸಿದ್ದಳು. ಈಗ ಇದ್ದು ನಾಳೆ ಇರದ

ಈ ದೇಹದ ಪ್ರಯೋಜನವು ಇಷ್ಟೇ ಇರಬೇಕು—ಸ್ವೀಕರಿಸುವ ಸಂತೋಷಕ್ಕಿಂತ ವಿನಿಯೋಗಿಸುವ ಸಂತೋಷವು ಮಿಗಿಲು, ಇಂತಹ ಸಂತೋಷದ ಪರಮಾವಧಿಯೇ ಅಮಿತಾನಂದ. ಈ ತೆರನ ಆನಂದದ ತುಸು ಅನುಭವವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದೇ ಬಾಳಿನ ಧ್ಯೇಯ. ಭೂಲೋಕದ ತಪಸ್ವಿಗಳು ಇದನ್ನೇ 'ತೇನ ತ್ಯಕ್ತೇನ ಭುಂಜೀಥಾಃ' ಎಂದು ಉದ್ಗರಿಸಿದರು. ತಾಯಬೆಕ್ಕಿನ ಅಮಿತಾನಂದದ ಸೊಬಗನ್ನು ಕಂಡು ನನಗೆ ಮಾತ್ಸರ್ಯವುಂಟಾಯಿತು.

ಹದಿನಾರು ವರ್ಷಗಳ ಹಿಂದೆ, ಶಾಪಗ್ರಸ್ತಳಾಗಿ ಭೂಲೋಕಕ್ಕೆ ಶಿಕ್ಷೆಯನ್ನನುಭವಿಸಲು ಹೋಗಿದ್ದಾಗ, ನನಗೂ ಒಂದು ಮಗುವಾಗಿತ್ತು. ಅದಕ್ಕೆ ಕಾಲಕಾಲದಲ್ಲಿ ಹಾಲೂಡಿಸಿ ಅದರ ಬೆಳವಣಿಗೆಯನ್ನು ಕಂಡು ಹಿಗ್ಗುವ ಭಾಗ್ಯವನ್ನು ಅಲ್ಲಗಳೆದೆ. ನನ್ನ ಸುಖಕ್ಕೆಂದು ಮಗುವನ್ನು ಅನಾಥಳನ್ನಾಗಿ ಮಾಡಿ ಸ್ವರ್ಗಕ್ಕೆ ಹಿಂದಿರುಗಿದೆ. ಇಷ್ಟು ದಿವಸ ದೇವೇಂದ್ರನ ಒಡ್ಡೋಲಗದಲ್ಲಿ ಮೈಮರೆತು ಮೋಜು ಮಾಡಿದೆ.

ಆದರೆ ಆ ತಾಯಬೆಕ್ಕಿನ ಸಂತಸದ ಆನಂದವನ್ನು ಎಂದೂ ನಾನು ಅನುಭವಿಸಲೇ ಇಲ್ಲ. ಸ್ವಾರ್ಥದಿಂದ ಮಂಕು ಹಿಡಿದಂತಾಗಿ ಪಾರಮಾರ್ಥಿಕ ಆನಂದವನ್ನು ಕಾಣದಾದೆ.

ಹೆತ್ತ ಹೆಣ್ಣು ಮಗುವನ್ನು ಕಾಡಿನಲ್ಲಿ ಬಿಟ್ಟು ಬಂದೆ. ನನ್ನ ಆಗಿನ ಗಂಡನೋ ಮಗುವಿನ ಹೊಣೆಯು ನನ್ನದಲ್ಲ ಎಂದು ಕೈ ಎತ್ತಿ ಝಾಡಿಸಿ ನಡೆದುಬಿಟ್ಟ. ಗಂಡಸಿನ ಹೃದಯವೇ ಈ ರೀತಿ ಕಠಿಣವಾದುದು.

ಪಾಪ! ಆ ಮಗುವು ಯಾವುದೋ ಋಷಿಯ ಅನಾಥಾಶ್ರಮದಲ್ಲಿ ಈಗ ಬೆಳೆಯುತ್ತಿದೆಯಂತೆ. ಕಾಲಕಾಲಕ್ಕೆ ತಕ್ಕಂತೆ, ಹಾಲೂ ಹಣ್ಣಿನ ರಸ, ಎಳ್ಳೂ, ಬೆಲ್ಲ, ಕಲ್ನಾರು, ಬಾದಾಮಿ, ಗೋಡಂಬಿ, ದೀಪ ದ್ರಾಕ್ಷಿ, ಇವುಗಳನ್ನು ಬೆಳೆಯುವ ಹೆಣ್ಣಿಗೆ ಕೊಡಬೇಕು ಎಂಬ ಅರಿವು ಸಂಸಾರದಲ್ಲಿ ಮೀಯದ ಗಡ್ಡದ ಋಷಿಗೆ ಹೇಗೆ ತಿಳಿಯಬೇಕು? ಮಗಳು ಎಂಬ ಆದರವಿದ್ದರೂ, ಅನುಭವವು ಇರದಿದ್ದರೆ ಏನು ಪ್ರಯೋಜನ? ಸೂಕ್ತ ಕಾಲದಲ್ಲಿ ಪ್ರಾಪ್ತವಾಗುವ ದೈಹಿಕ ಬದಲಾವಣೆಗಳನ್ನೂ, ಆಕಸ್ಮಿಕಗಳನ್ನೂ ಕಂಡು, ಅರಿಯದ ಹೆಣ್ಣು ಬೆದರಬಹುದು. ತಂದೆಯಂತಿದ್ದರೂ ಗಂಡಿನ ಬಳಿಯಲ್ಲಿ ಅವನ್ನೆಲ್ಲ ಹೇಳಿಕೊಳ್ಳಲು ಹೆಣ್ಣು ಸ್ವಾಭಾವಿಕವಾಗಿ ಲಜ್ಜಿಸುತ್ತದೆ. ಹಾಗಾಗಿ ತಿಳಿವು ಮೂಡಲು ತುಂಬಾ ತ್ರಾಸು.

ಇಷ್ಟೂ ಕಾಲ ಸ್ವಾರ್ಥ ಸುಖಕ್ಕಾಗಿ ಮೈ ಮರೆತಿದ್ದೆ. ಹದಿನಾರು ವರ್ಷಗಳಾದವು. ಆದರೂ ಕಾಲ ಮಿಂಚಿಲ್ಲ. ತಾಯ್ತನದ ಹೊಣೆಯನ್ನು ಪೂರೈಸಲೇಬೇಕು. ಈಗಿಂದೀಗಲೇ ಶಕುಂತಲೆಯ ಬಳಿಗೆ ಹೋಗಿ, 'ಮಗಳೇ! ಹೆಣ್ಣಿನ ಮರ್ಮಗಳೆಲ್ಲಾ ಈ ರೀತಿ ಈ ರೀತಿಯವು. ಇದನ್ನು ಕಲಿತು ರೂಢಿಸಿಕೊಂಡು, ಸುಭಗಳಾಗು, ಆಯುಷ್ಮಂತಳಾಗು. ಮುತ್ತೈದೆಯಾಗು' ಎಂದು ಹರಸಿ ಬರಬೇಕು" ಎಂದಳು.

* * * * *

ಕಣ್ವರ ಆಶ್ರಮದಲ್ಲಿ ಆ ಬೆಳಿಗ್ಗೆ ಶಕುಂತಲೆಯು ನದಿಯ ಬಳಿಗೆ ಬಳುಕುತ್ತಾ ನಡೆದಳು. ಆಶ್ರಮದ ಅರ್ಘ್ಯಪಾತ್ರೆಗಳನ್ನು ತಲೆಯ ಮೇಲೊಂದು ಸೊಂಟದ ಮೇಲೊಂದು ಇರಿಸಿಕೊಂಡು ನಡೆಯುತ್ತಿದ್ದುದರಿಂದ ಬಳುಕುತ್ತಿದ್ದಳೋ ಅಥವಾ ಪ್ರಾಪ್ತ ವಯಸ್ಸಿಗೆ ಸಹಜವಾದ ಬಳುಕುವಿಕೆಯೋ

ಹೇಳಬರುವಂತಿರಲಿಲ್ಲ. ನಾರ ಪಟ್ಟೆಯ ಮಡಿಗಳನ್ನು ಹಿಡಿದುಕೊಂಡು, ಸಖಿಯರು ಹಿಂದೆ ನಡೆದು ಬರುತ್ತಿದ್ದರು. ಆಶ್ರಮದ ಹರಿಣಿಗಳು ಬೆಂಗಾವಲಿಗಾಗಿ ಸುತ್ತಲೂ ಬೆರಗು ಬೆರಗಾಗಿ ನೋಡುತ್ತ ನಡೆಯುತ್ತಿದ್ದವು. ಖಗವಿಹಂಗಮಗಳು ಹಿನ್ನೆಲೆಯ ಸಾಮೂಹಿಕ ಗಾನದಂತೆ ಕೊರಲ ದನಿಯನ್ನು ನುಡಿಸುತ್ತಿದ್ದವು.

ಇಷ್ಟೆಲ್ಲಾ ಸಂಭ್ರಮಕ್ಕೆ ಒಂದು ಕಾರಣವಿತ್ತು; ಕಳೆದ ನಾಲ್ಕು ದಿನಗಳಿಂದಲೂ ಶಕುಂತಲೆಯು ಆಶ್ರಮದ ಹೊರಕುಟೀರವೊಂದರಲ್ಲಿ ಏಕಾಂತವಾಗಿದ್ದಳು. ಈ ದಿನದಂದು ನದಿಗೆ ಹೋಗಿ ಐದು ನೀರು ಹಾಕಿಕೊಂಡ ಮೇಲೆ ಆಶ್ರಮದಲ್ಲಿ ಎಲ್ಲರೊಂದಿಗೂ ಇರಲು ಅವಕಾಶವಿತ್ತು. ಮಡಿ ಮೈಲಿಗೆ ಎಂದರೆ ಕಣ್ವರಿಗೆ ತುಂಬಾ ನಿಯಮ, ಮತ್ತು ಶ್ರದ್ಧೆ.

ನದಿಯಲ್ಲಿ ಮಿಂದು, ನಾರು ಪಟ್ಟೆಯನ್ನು ಶಕುಂತಲೆಯು ಧರಿಸಿದಳು. ಮಂಡಿಯ ಮೇಲೆ ಅಂಚು ಬರುತ್ತಿದ್ದ ನಾರು ಮಡಿಯನ್ನು ಬಿಗಿಯಾಗಿ ಕಚ್ಚೆ ಹಾಕಿ ಕಟ್ಟಿಕೊಂಡಾಗ ಮಿನಿಸ್ಕರ್ಟಿನ ಅಂಚಿನ ಮೇಲೆ ಹೊಡೆದಂತಿತ್ತು. ಬಳ್ಳಿ ಹೂವುಗಳಿಂದ, ತಲೆ ತೋಳುಗಳನ್ನು ಸಿಂಗರಿಸಿಕೊಂಡಳು. ಹರಿಣಿಗಳ ಜತೆಯಲ್ಲಿ ಹರಿಣಿಯಂತೆ ಚಕ್ಕಂದವಾಡಿದಳು. ಶಿರದಿಂದ ಇಳಿದು ಬಂದಿದ್ದ ತುದಿಜಡೆಯು ಕಾಳಿಂಗನಂತೆ ಅವಳ ಮೊಣಕಾಲುಗಳ ಬಳಿ ವಾಲಾಡುತ್ತಿತ್ತು. ವಕ್ಷಸ್ಥಳವನ್ನು ಅಲಂಕರಿಸಿದ್ದ ನಾರು ಪಟ್ಟೆಯು, ಬಲು ಪ್ರಯಾಸದಿಂದ ಬಿಗುಮಾನದಿಂದ ತನ್ನ ಕಾರ್ಯನಿರ್ವಹಣೆಯನ್ನು ಮಾಡಿತ್ತು. ಉಷಃಕಾಲದ ಮಂದಮಾರುತನು ಆಕೆಯ ಒಡಲಿನ ಪರಿಮಳವನ್ನು ವನದಲ್ಲಿ ಪಸರಿಸಿದಾಗ, ಬಳ್ಳಿಗಳ ಮೇಲಿದ್ದ ಮೊಗ್ಗುಗಳು ಚಕಿತಗೊಂಡು ಅರಳಿದುವು. ಆಗ ಆಕೆಯನ್ನು ಕಂಡ ಸಖಿಯರು, "ಅಯ್ಯೋ! ಪರಮಾತ್ಮ! ನಮಗೆ ಗಂಡು ಜನ್ಮವನ್ನು ಅನುಗ್ರಹಿಸಬಾರದಾಗಿತ್ತೆ!" ಎಂದು ಮಮ್ಮಲ ಮರುಗಿದರು.

ಆಶ್ರಮದಲ್ಲಿ ಆ ವೇಳೆಗೆ ವಟುಗಳು ಸಾಮವೇದವನ್ನು ಕಲಿಯಲು ತೊಡಗಿದ್ದರು. ಸಾಮಗಾನವು ನದಿಯ ತಟಕ್ಕೆ ಶಹನಾಯ್ ವಾದನದಂತೆ ಹಿತವಾಗಿ ಹಗೂರಾಗಿ ಕೇಳಿಸಲಾರಂಭಿಸಿತು. ನಾಂದಿಯಂತಿದ್ದ ಈ ಗಾನವನ್ನು ಕೇಳಿದಾಗ, ಶಕುಂತಲೆಯು, ಸಖಿಯರು ಹರಿಣಿಗಳೂ ಕೂಡ, ವೇದಘೋಷದ ತಾಳಕ್ಕೆ ಸರಿಯಾಗಿ ಹೆಜ್ಜೆಗಳನ್ನಿಟ್ಟು ನೃತ್ಯ ಮಾಡಲಾರಂಭಿಸಿದರು. ಇದು ನೃತ್ಯವೆಂಬ ಅರಿವು ಅವರಿಗಾರಿಗೂ ಇರಲಿಲ್ಲ. ಪ್ರಕೃತಿ ಸಹಜವಾದ ಅಂತರಂಗದ ಪ್ರೇರಣೆಯು, ಬಹಿರಂಗದ ಸಾಮಗಾನಕ್ಕೆ ಸಮನ್ವಯಗೊಳ್ಳುವಂತೆ ಹೆಜ್ಜೆಗಳು ಅಡಿಯಿಡಲಾರಂಭಿಸಿದ್ದುವು.

ಈ ದಿವ್ಯ ದೃಶ್ಯವನ್ನು ಸೂರ್ಯದೇವನು ನಿಟ್ಟಿ ನೋಡಿದರೆ ಶಕುಂತಲೆಗೆ ದೃಷ್ಟಿ ತಾಕಬಹುದು ಎಂದುಕೊಂಡೋ ಏನೋ ಮೇಘವೊಂದು ಅಂತರಿಕ್ಷದಲ್ಲಿ ಅಡ್ಡಾಡಿ, ಶಕುಂತಲೆಯನ್ನು ಸೂರ್ಯನ ಕಿರಣಗಳಿಂದ ಮರೆಮಾಚಿತು.

ಆ ಮೇಘವನ್ನೇ ವಾಹನವನ್ನಾಗಿ ಮಾಡಿಕೊಂಡಿದ್ದ ಮೇನಕೆಯು, ಅಂತರಿಕ್ಷದಿಂದ ಶಕುಂತಲೆಯು ಎಲ್ಲಿರುವಳೆಂಬುದನ್ನು ಗಮನಿಸಿ, ನದೀ ತಟದಲ್ಲಿ ಬನದ ಅಂಚಿನ ಬಳಿ ಇಳಿದು ಪ್ರತ್ಯಕ್ಷವಾದಳು. ಮಗಳನ್ನು ಕಂಡು, ಸೂಕ್ತ ಸಲಹೆಗಳನ್ನು ಕೊಟ್ಟು, ತಾಯ್ತನದ ಕರ್ತವ್ಯವನ್ನು ಪರಿಪಾಲಿಸಲು ಬೃಹಸ್ಪತ್ಯಾಚಾರ್ಯರ ಅನುಮತಿಯನ್ನೂ ಆಶೀರ್ವಾದವನ್ನೂ ಪಡೆದು ಬಂದಿದ್ದಳು; ಆ ಬೆಳಿಗ್ಗೆ.

ವನದ ಅಂಚಿನಿಂದ, ಮಗಳು, ಸಖಿಯರು ಮತ್ತು ಹರಿಣಗಳೊಂದಿಗೆ ದೂರದಿಂದ ಕೇಳಿ ಬರುತ್ತಿದ್ದ ಸಾಮಘೋಷಣೆಗೆ ಅನುವಾಗಿ ಹೆಜ್ಜೆಗಳನ್ನು ಗೆಜ್ಜೆಗಳಂತೆ ನಡಿಸುತ್ತಿರುವುದನ್ನು ಸ್ವಲ್ಪ ಕಾಲ ವೀಕ್ಷಿಸಿದಳು. ಅಚ್ಚರಿಯಾಗಿ ವೀಕ್ಷಿಸಿದಳು. ಯಾವ ತಾಯಿಯ ಸಂರಕ್ಷಣೆಯಲ್ಲೂ, ಯಾವ ಮಗಳೂ, ಆ ವಯಸ್ಸಿನಲ್ಲಿ ಅಷ್ಟು ಆಪ್ಯಾಯಮಾನವಾದ ಅಂಗಸೌಷ್ಠವದಿಂದ ವರ್ಧಿಸಿದ್ದುದನ್ನು ಮೇನಕೆಯು ಕಂಡಿರಲೇ ಇಲ್ಲ. ಅಪ್ಸರೆಯರ ಪರಿಚಯವು ಅವಳಿಗೆ ನಿಕಟವಾಗಿತ್ತು. ಗಂಧರ್ವ ಹೆಣ್ಣುಗಳು ಮುಂಬರುವುದನ್ನೂ ಆಕೆಯು ಸಾಕಷ್ಟು ಕಂಡಿದ್ದಳು. ಕಿರಾತರ ಕಾಲನಿಯಲ್ಲಿ ಕೂಡ ಈ ತೆರನ ದೃಢ ದೇಹದ ಸೊಬಗನ್ನು ಆಕೆಯು ನೋಡಿರಲಿಲ್ಲ. ಆದಕಾರಣ ಮಗಳನ್ನು ಕಣ್ಣಾಲಿಗಳನ್ನು ಮಿಟುಕಿಸದೆ ನೋಡಿದಳು.

ಸಾಮವೇದದ ಘೋಷಣೆಯು ಮುಗಿಯಿತು. ತದನುಸಾರವಾಗಿ ಹೆಜ್ಜೆಗಳು ಸ್ತಬ್ಧವಾದುವು. ಮೈಮನಗಳನ್ನು ಆ ತನಕ ಮರೆತಿದ್ದ ಶಕುಂತಲೆಯು ಈಗ ಎಚ್ಚೆತ್ತು ಕಣ್ಣುಗಳನ್ನು ಸುತ್ತಲೂ ಹರಿಸಿದಳು. ಆಗ ವನದ ಅಂಚಿನಲ್ಲಿ, ನದಿಯ ತಟದಲ್ಲಿ ಅಪರಿಚಿತ ಯುವತಿಯೊಬ್ಬಳು ನಿಂತಿರುವುದು ಕಾಣಿಸಿತು. ಆಶ್ರಮಕ್ಕೆ ಆಗಮಿಸಿದ ಅಭ್ಯಾಗತರನ್ನು ಸ್ವಾಗತಿಸಿ ಉಪಚರಿಸುವುದು ಆಶ್ರಮದ ಕಟ್ಟಳೆ. ಆದಕಾರಣ ಶಕುಂತಲೆಯು ಅತ್ತ ನಡೆದು—

"ಸ್ವಾಗತವಮ್ಮಾ ನಿಮಗೆ, ತಾವು ಯಾರು? ಎಲ್ಲಿಂದ ಬಂದಿರಿ. ನಿಮ್ಮ ಸೇವೆಯನ್ನು ಯಾವ ರೀತಿಯಲ್ಲಿ ಮಾಡುವ ಭಾಗ್ಯ ನಮ್ಮದು. ಇದನ್ನೆಲ್ಲ ಉತ್ತರಿಸುವ ಮೊದಲು ಆಶ್ರಮಕ್ಕೆ ನಡೆಯುವ; ಅಲ್ಲಿ ಆದರಾತಿಥ್ಯಗಳನ್ನು ಸ್ವೀಕರಿಸಿದ ನಂತರ ಉತ್ತರವನ್ನು ಕೊಡುವಿರಂತೆ ಅಮ್ಮಾ" ಎಂದಳು.

ಸಾದರದಿಂದ ಶಕುಂತಲೆಯು ಸ್ವಾಭಾವಿಕವಾಗಿ ನುಡಿದ "ಅಮ್ಮಾ" ಶಬ್ದದಲ್ಲಿ ಅನಾದಿ ಅನಂತವಾದ ಒಲವು ತುಂಬಿತ್ತು. ಅದನ್ನು ಕೇಳಿಸಿಕೊಂಡ ಮೇನಕೆಗೆ, ನನ್ನ ಪರಿಚಯವನ್ನು ಮಗಳು ವಾಸ್ತವವಾಗಿ ಗುರುತಿಸದೇ ಇದ್ದರೂ, ಅವಳ ಅಂತರಾಳದಲ್ಲಿ ನಾನ್ಯಾರೆಂಬುದು ಆಕೆಗೆ ನಿಶ್ಚಯವಾಗಿ ಕಾಣಿಸಿದೆ ಎಂಬ ವಿಶ್ವಾಸವು ಮೂಡಿತು.

ಈ ತೆರನ ವಿಶ್ವಾಸವು ಮೂಡಿದುದರಿಂದಲೇ ಮೇನಕೆಯು ಮುಂದೆ ಬಂದು ಶಕುಂತಲೆಯನ್ನು ಅಪ್ಪಿ ಆಲಿಂಗಿಸಿ ಮುದ್ದಾಡಿದಳು. ನಂತರ ಉಸಿರು ಹತೋಟಿಗೆ ಬಂದನಂತರ, "ನಿನ್ನೊಂದಿಗೆ ಎರಡು ಮಾತುಗಳನ್ನು ರಹಸ್ಯವಾಗಿ ಆಡಬೇಕು, ನಾನು ಮೇನಕೆ, ನಿನ್ನ ಹೆತ್ತಮ್ಮ" ಎಂದು ಮಗಳ ಕಿವಿಯಲ್ಲಿ ಪಿಸು ಉಸುರಿದಳು.

ಹವಳದಂತಿದ್ದ ತನ್ನ ತುಟಿಗಳನ್ನು ಶಕುಂತಲೆಯು ದುಂಡು ಮಾಡಿದಳು. ಅರ್ಧ ಚಂದ್ರಾಕೃತಿಯಲ್ಲಿ ಬಲ ಹೆಬ್ಬೆರಳು, ತೋರ ಬೆರಳುಗಳನ್ನು ವಕ್ರಿಸಿದಳು. ದುಂಡು ಬಾಯಿನ ಬಳಿ ಅದನ್ನು ತಂದಿರಿಸಿದಳು. ಉಸಿರೆಳೆದುಕೊಂಡು ಕೆನ್ನೆಗಳನ್ನು ಉಬ್ಬಿಸಿದಳು, ನಂತರ ನಿಶ್ವಾಸವನ್ನು ಸರ್ರನೆ ನಡೆಸಿದಳು.

ಹಿಂದೊಮ್ಮೆ ಗೋಪಿಕಾ ಸ್ತ್ರೀಯರೊಂದಿಗೆ ಕೇಳಿಯಾಡುತ್ತಿದ್ದ ಕೃಷ್ಣಪರಮಾತ್ಮನು ರುಕ್ಮಿಣಿಯು ಬಂದುದನ್ನು ಕಂಡನಂತೆ. ರುಕ್ಮಿಣಿಯ ಕಾಂತನಾಗ ಏಕಾಂತವನ್ನು ಬಯಸಿದನಂತೆ. ಮುರಲಿಯನ್ನು ತುಟಿಗೆ ಹಿಡಿದು ಒಂದು ಸಣ್ಣ ಪಲ್ಲವಿಯನ್ನು ನುಡಿಸಿದನಂತೆ. ಆ ನುಡಿಯನ್ನು ಕೇಳಿ ಗೋಪಿಕಾ ಸ್ತ್ರೀಯರೆಲ್ಲರೂ ಹಾಲಿನ ಕುಂಭಗಳನ್ನೆತ್ತಿಕೊಂಡು, ಯಮುನಾ ತೀರದಿಂದ ತಮ್ಮ ತಮ್ಮ ಮನೆಗಳಿಗೆ

ಸರಸರನೆ ನಡೆದು ಹೋದರಂತೆ. ಮುರಲಿಯ ವಶೀಕರಣ ಶಕ್ತಿಯು ಆ ರೀತಿಯಲ್ಲಿ ಗೋಪಿಯರನ್ನು ಮೋಹಗೊಳಿಸಿತ್ತಂತೆ. ಬಳಿಗೆ ಬರಲೂ ಅದು ಕರೆ ಈಯುತ್ತಿತ್ತು. ಬೇಗ ತೊಲಗಿಹೋಗಲೂ ಅದು ಅನುವಾಗಿತ್ತು ಎಂದು ಹೇಳುತ್ತಿದ್ದರಂತೆ. ಇದು ವಾಸ್ತವವಾದುದೋ ಇಲ್ಲವೋ ಪರಮಾತ್ಮನೇ ಬಲ್ಲ.

ಆದರೆ ಶಕುಂತಲೆಯು ವಕ್ರಿಸಿದ್ದ ಅರ್ಧ ಚಂದ್ರಾಕೃತಿಯ ಬೆರಳುಗಳ ಮಧ್ಯೆ ಉಸಿರು ಹರಿಸಿದಾಗ, ಮುರಲಿಯ ನಾದವಾದಂತಾಯಿತು. ಆಗವಳ ಕೆನ್ನೆಗಳೆರಡರಲ್ಲೂ ಮತ್ತು ಗಲ್ಲದಲ್ಲೂ ಮುದ್ದುಗುಳಿಗಳು ಮೆರೆದುವು. ಮುಖವು ಸಂಧ್ಯಾರಾಗದಿಂದ ಶೋಭಾಯಮಾನವಾಯಿತು.

ಮಗಳ ಮುಖದ ಮೇಲಿನ ಹಾವಭಾವ ವಿಲಾಸಗಳ ಸಡಗರವನ್ನು ಮೇನಕೆಯು ಕಂಡಳು. ಅವಳ ವದನದಿಂದ ಹೊರಬಿದ್ದ ಮುರಲೀನಾದವನ್ನು ಕೇಳಿ ಅವಾಕ್ಕಾದಳು.

ಯಾರೋ ನಡೆದ ಸಪ್ಪಳವಾಯಿತು. ಮನೇಕೆಯು ಅತ್ತ ನೋಡಿದಳು. ಸಖಿಯರೂ ಹರಿಣಿಗಳೂ, ಎಲ್ಲವೂ ಆಶ್ರಮದತ್ತ ನಡೆದು ಹೋಗುತ್ತಿದ್ದುವು. ಶಕುಂತಲೆಯೊಬ್ಬಳೇ ತಾಯಿಯ ಬಳಿ ಉಳಿದುಕೊಂಡಳು.

“ರಹಸ್ಯದ ಎರಡು ಮಾತುಗಳು ಯಾವುದಮ್ಮಾ? ಬೇಗ ಹೇಳಮ್ಮ” ಎಂದು ಕುತೂಹಲದಿಂದ ಅಮ್ಮನನ್ನು ತಬ್ಬಿಕೊಂಡು ಮಗಳು ಕೇಳಿದಳು.

“ತಾಯ್ತನದ ಕರ್ತವ್ಯವನ್ನು ಈಗಲಾದರೂ ಪಾಲಿಸೋಣ ಎಂದು ನಾನು ಬಂದೆ. ಚಿತ್ರಲೇಖೆಯು ರಚಿಸಿದ್ದ ತಾಯ್ ಚಿಕ್ಕ ಚಿತ್ರವನ್ನು ಕಂಡು ಈ ಹಂಬಲವು ನನ್ನಲ್ಲಿ ಉಕ್ಕಿತು. ನನ್ನ ಮಗಳು, ತಾಯ ಉಪಚಾರವಿಲ್ಲದೆ ಸೊರಗಿರುತ್ತಾಳೆ. ಕೃಶಗೊಂಡಿರುತ್ತಾಳೆ. ಯೌವ್ವನದ ಆಟಪಾಟಗಳನ್ನು ಕಲಿತಿರುವುದಿಲ್ಲ ಎಂದು ಹೆದರಿದ್ದೆ. ಬಹಳ ಖಿನ್ನಳೂ ಆಗಿದ್ದೆ. ನಿನಗೆ ತಿಳಿವಳಿಕೆಯನ್ನು ನೀಡಲು ಆತುರದಿಂದ ಬಂದೆ.”

“ಆದರೆ ನಿನ್ನನ್ನು ಈಗ ಕಣ್ಣು ತುಂಬಾ ನೋಡಿದೆ. ವೇದಘೋಷಕ್ಕೆ ಅಣಿಯಾಗಿ ಹೆಜ್ಜೆ ಹಾಕುವುದನ್ನು ನೋಡಿದಾಗ, ನಟರಾಜನೇ ನಿನ್ನ ಪಾದಗಳನ್ನು ನಡಿಸುತ್ತಿದ್ದ ಎನಿಸಿತು. ನೀನು ನವ್ಯ ಯುವತಿಯರಂತೆ ‘ಸೀಟಿ’ ಹಾಕಿದುದನ್ನು ಕಂಡು ಕೇಳಿದಾಗ, ಆ ಮೋಹಕ ಸೀಟಿಗೆ ಗಂಧರ್ವರು ತಲೆ ಬಾಗುತ್ತಾರೆ ಎಂದೂ ಖಚಿತವಾಯಿತು. ಅಂದಮೇಲೆ ನಿನಗೆ ತಾಯಾಗಿ ನಾನು ಕಲಿಸುವುದು ಒಂದೂ ಇಲ್ಲ.

“ಆದರೆ ರಹಸ್ಯವಾಗಿ ಇಷ್ಟು ಮಾತ್ರ ಹೇಳುತ್ತೇನೆ.

“ನಿನ್ನ ಹಾಗೆ, ನಿನ್ನ ಈ ವಯಸ್ಸಿನಲ್ಲಿ, ನಾನೇನಾದರೂ ಒಡಲ ಸೌಭಾಗ್ಯದಿಂದ ತುಂಬಿಕೊಂಡಿದ್ದರೆ, ನಿನಗೆ ಇನ್ನೂ ಮೂರು ವರ್ಷ ಹೆಚ್ಚು ವಯಸ್ಸಾಗಿರುತ್ತಿತ್ತು ಎಂದು ಮಾತ್ರ ಹೇಳಬಲ್ಲೆ” ಎಂದಳು.

ನಂತರ ಕೃತಕಾರ್ಯಳಾಗಿ ಆತಂಕವಿಲ್ಲದೆ ಸ್ವರ್ಗಕ್ಕೆ ಮೇನಕೆಯು ಹಿಂತಿರುಗಿದಳು. ತಾಯಿ ಅಂದುದನ್ನು ಅರ್ಥ ಮಾಡಿಕೊಳ್ಳುತ್ತ, ಅರ್ಥವಾದಾಗ, ಮೂರು ವರ್ಷಗಳ ಹಸಿರು ಪ್ರಾಯವನ್ನು ಪೋಲು ಮಾಡಿದೆನೇ, ನಾನು! ಎಂದು ತುಸು ಖಿನ್ನಳಾಗಿ ಶಕುಂತಲೆಯು ಆಶ್ರಮಕ್ಕೆ ನಡೆದಳು.

■

# ಜೇಬುಗಳ್ಳ ಜಿಮ್ಮಿ

**ಬೆ**ಳಿಗ್ಗೆ ಕಾಫಿ ಕುಡಿಯುತ್ತಾ ಪೇಪರ್ ಓದುತ್ತಿದ್ದೆ. ರಾಜೀವಪುರದ ಮೂರು ಬೇರೆ ಬೇರೆ ಕಡೆಗಳಲ್ಲಿ ಜೇಬುಗಳ್ಳತನವಾದ ವಿವರಗಳು ಪ್ರಕಟಿಸಲ್ಪಟ್ಟದ್ದವು. "ಈ ಊರು ತುಂಬಾ ಜೇಬುಗಳ್ಳರೇ ಸೇರಿಕೊಂಡಿದ್ದಾರೆಯೇ? ಈ ಕಸುಬು ಈ ಪಟ್ಟಣದಲ್ಲಿ ಅಷ್ಟು ಪ್ರವರ್ಧಮಾನಕ್ಕೆ ಯಾಕೆ ಬಂತು?" ಎಂದೆಲ್ಲ ಯೋಚನೆಗಳು ತೋರಿದವು. ಎರಡು ದಿನ ಇದ್ದು ಹೋಗುವವ ನಾನು, ನನಗೇಕೆ ಇದರ ಚಿಂತೆ ಎಂದು ಕಾಫಿ ಮುಗಿಸಿದೆ. ಜೇಬಿನಿಂದ ಸಿಗರೇಟ್ ತೆಗೆದೆ. ಬಾಯಲ್ಲಿಟ್ಟು ಹತ್ತಿಸೋಣ ಅಂತೀನಿ, ಕಡ್ಡಿ ಪೆಟ್ಟಿಗೆಯೇ ಇಲ್ಲ. ಎಲ್ಲಿ ಹುಡುಕಿದರೂ ಕೊಠಡಿಯಲ್ಲಿ ಕಡ್ಡಿ ಪೆಟ್ಟಿಗೆ ಸಿಗಲಿಲ್ಲ. ಬೇಗ ಮೂಲೆ ಅಂಗಡೀಗೆ ಹೋಗಿ ಕೊಂಡುಕೊಂಡು ಬರೋಣ ಅಂತ ಹೊರಬಿದ್ದೆ.

ಮೂಲೆ ಅಂಗಡೀಲಿ ಒಂದೊಂದು ಸಿಗರೇಟ್ ಅಥವಾ ಬೀಡಿಯನ್ನು ಕೊಂಡು, ಅಂಗಡಿ ಅಂಚಿನಲ್ಲಿಟ್ಟಿದ್ದ ಹಣತೆಯಿಂದ ಅದನ್ನೂ ಹಚ್ಚಿಕೊಂಡು ಹೋಗುವ ಗಿರಾಕಿಗಳು ಮುತ್ತಿದ್ದರು. ಕಾರ್ಖಾನೆಗೆ ಹೊತ್ತಿಗೆ ಸರಿಯಾಗಿ ಹೋಗಬೇಕಾದವರು, ಅವರ ಕೆಲಸ ಮುಗಿಯಲಿ ಆಮೇಲೆ ಕೊಂಡರಾಯಿತು ಎಂದು ಅಲ್ಲೇ ನಿಂತೆ.

೧೮-೨೦ ವರ್ಷದ ಯುವಕನೊಬ್ಬ ಬಂದ. ನನ್ನನ್ನು ಸರಿಸಿಕೊಂಡೇ ಆ ಜನಸಂದಣಿಯಲ್ಲಿ ನುಗ್ಗಿದ. "ಒಂದು ಬರ್ಕ್ಲಿ ಕೊಡ್ರಿ ಹೊತ್ತಾಯಿತು" ಅಂತ ಕೂಗುತ್ತಾ ನುಗ್ಗಿದ. "ಎಲಾ ಇವನ, ಎಷ್ಟು ಅವಸರ ಇವನಿಗೆ" ಅಂತ ಅವನನ್ನೇ ಹಿಂದಿನಿಂದ ನೋಡ್ತಾ ಇದ್ದೆ. ಅವನ ಬಲಗೈ ಮೆಲ್ಲಗೆ ಪಕ್ಕದಲ್ಲಿದ್ದವನ ಷರಾಯಿ ಜೇಬಿನತ್ತ ಹೋಯಿತು. ಪಕ್ಕದಲ್ಲಿದ್ದವನ ಮೇಲೆ ವಾಲಿದ. ಆ ಕ್ಷಣಾರ್ಧದಲ್ಲಿ ಷರಾಯಿ ಜೇಬಿನೊಳಗೆ ತನ್ನ ಕೈಯನ್ನು ಇಳಿಬಿಟ್ಟು ಹೊರಕ್ಕೆ ತೆಗೆದಿದ್ದ. ಅವನಿಗೆ ದಕ್ಕಿದ್ದು ಒಂದು ಕಡ್ಡಿಪೆಟ್ಟಿಗೆ.

ಇದನ್ನು ಕಣ್ಣಾರೆ ಕಂಡಮೇಲೆ ಸುಮ್ಮನಿರುಕ್ಕಾಗುತ್ತೇ? ಅವನ ಬಲಗೈ ಮಣಿಕಟ್ಟನ್ನು ನಾನು ಹಿಡಿದೆ. ಬಲವಾಗಿ ಹಿಡಿದೆ. ತತ್‌ಕ್ಷಣ ಅವನು ಹಿಂತಿರುಗಿದ. ನನ್ನನ್ನು ನೋಡಿದ. ಹಿಂದಕ್ಕೆ ಸರಿದು ತಲೆ ಬಗ್ಗಿಸಿದ. "ನಿಮ್ಮ ಹಿಂದೆ ಸ್ಟೇಷನ್ನಿಗೆ ಬರ್ತೀನಿ. ಇಲ್ಲಿ ಗಲಾಟೆ ಎಬ್ಬಿಸಬೇಡಿ, ನಿಮ್ಮ ದಮ್ಮಯ್ಯ ಅಂತೀನಿ. ಇಲ್ಲಿ ಗಲಾಟೆ ಎಬ್ಬಿಸಿದರೆ, ಈ ಜನರೆಲ್ಲಾ ಸೇರಿಕೊಂಡು ನನ್ನ ತೌಡು ಹರೀತಾರೆ" ಎಂದು ಪಿಸುದನಿಯಲ್ಲಿ ಗೋಗರೆದ.

'ಓಹೋ! ನನ್ನನ್ನು ಪೋಲೀಸಿನವನು ಎಂದು ಈ ಜೇಬುಗಳ್ಳ ತಪ್ಪು ತಿಳಿದುಕೊಂಡು ಹೀಗಂದಿದ್ದಾನೆ. ನನಗೆ ಬೇಕಾದ್ದು ಕಡ್ಡಿ ಪೆಟ್ಟಿಗೆ. ಅದು ಇವನ ಹತ್ತಿರ ಇದೆ. ಬಂದ ಕೆಲಸ ಆದಹಾಗೆ ಆಯಿತು. ಈಗ ಇವನನ್ನು ನನ್ನ ಕೊಠಡಿಗೆ ಕರೆದುಕೊಂಡು ಹೋಗಿ ಜೇಬುಗಳ್ಳರ ಜೀವನ ಪರಿಚಯ

ಮಾಡಿಕೊಳ್ಳೋಣ' ಎಂದೆನಿಸಿತು. ಸಿಗರೇಟ್ ಹಚ್ಚಿಕೊಂಡು ಅವನನ್ನು ಹಿಡಿದುಕೊಂಡು ನನ್ನ ಕೊಠಡಿಗೆ ಬಂದೆ. ಬಾಗಿಲು ಹಾಕಿ ಅವನನ್ನು ಕೂರಿಸಿದೆ.

"ಇಂತಹ ಕೆಲಸ ಮಾಡೋಕ್ಕೆ ನಿನಗೆ ನಾಚಿಕೆಯಾಗೋಲ್ಲವೇ" ಎಂದೆ.

ಕೈ ಮೇಜಿನ ಮೇಲೆ ಬಿದ್ದಿದ್ದ ಪತ್ರಿಕೆಯನ್ನು ಅವನು ನೋಡಿದ. ನಂತರ ನನ್ನ ಕಡೆ ತಿರುಗಿ "ಇದನ್ನು ಓದಿದಿರಾ ಸರ್ ಬೆಳಿಗ್ಗೆ" ಅಂದ. "ಅದಕ್ಕೇನಾ ಸಾರ್ ನಮ್ಮ ಮೇಲೆ ಇಷ್ಟು ಖಾರವಾಗಿರೋದು ಸಾರ್" ಅಂದ. "ನೀವು ಪೋಲೀಸಿನವರು ಅಂದುಕೊಂಡಿದ್ದೆ. ಈ ಕೊಠಡಿಗೆ ನೀವು ಕರಕೊಂಡು ಬಂದ ಮೇಲೆ ಅಲ್ಲ ಅಂತ ಅರ್ಥವಾಯಿತು" ಎಂದ.

"ಪೇಪರಿನಲ್ಲಿ ನಿಮ್ಮವರ ಸುದ್ದಿಯೇ ಬಂದಿದೆ. ಒಬ್ಬ ಬಡ ಪಿಂಚಿನ್‌ದಾರನಿಂದ ತಿಂಗಳ ಪಿಂಚನನ್ನು ಲಪಟಾಯಿಸಿದ್ದೀರಿ. ಅರೆಕಣ್ಣು ಕಾಣುವ ಮುದುಕ. ಸರ್ಕಾರ ಕೊಡುವ ಪಿಂಚಿನ್ ಹಣ ಗೊತ್ತೇ ಇದೆ. ಅದರಲ್ಲಿ ತಿಂಗಳ ೧೦-೧೨ ದಿನ ಮಾತ್ರ ಊಟಕ್ಕೆ ಸಾಧ್ಯ. ಅಂತಹುದನ್ನೂ ಹೊಡೆದಿದ್ದೀರಲ್ಲ, ನಿಮಗೆ ನಾಚಿಕೆಯಾಗೋಲ್ಲವೇ?" ಎಂದೆ.

ತಲೆ ತಗ್ಗಿಸಿದ. ಮಾತೇ ಆಡಲಿಲ್ಲ. ಖಿನ್ನನಾಗಿದ್ದ.

"ಅಲ್ಲ ಕಣಯ್ಯ ರೈತಾಪಿ ಜನ, ಹಳ್ಳಿಯವ ಪೇಟೆಗೆ ಬೆಲ್ಲ ತಂದು ಹಾಕಿ, ಹಣ ಪಡೆದು ಹಳ್ಳಿಗೆ ಬಸ್ಸಿನಲ್ಲಿ ಹಿಂತಿರುಗುವಾಗ, ಅವನ ಕಿಸೆಗೆ ಕೈಹಾಕಿ ಖಾಲಿ ಮಾಡಿದ್ದೀರಲ್ಲ. ವರ್ಷದ ಸಂಪಾದನೆಯನ್ನು ಅವನು ಕಳಕೊಂಡು ಬಡಕೊಂಡನಂತಲ್ಲ, ಸ್ವಲ್ಪವೂ ಕನಿಕರವೇ ಇಲ್ಲವೇ. ಎಂತಹ ಕಠಿಣ ಹೃದಯಿಗಳಯ್ಯಾ" ಎಂದೆ.

ತಲೆ ಎತ್ತಲೇ ಇಲ್ಲ. ಮಾತನ್ನೂ ಆಡಲಿಲ್ಲ. ಪಶ್ಚಾತ್ತಾಪ ಮೂಡಿದಂತಿತ್ತು.

"ಕಾಲೇಜಿನಲ್ಲಿ ಓದುವ ವಿದ್ಯಾರ್ಥಿ, ಅಲ್ಲಿ ಇಲ್ಲಿ ಭಿಕ್ಷೆ ಬೇಡಿಕೊಂಡು ಪರೀಕ್ಷೆಗೆ ಕಟ್ಟುವುದಕ್ಕೆ ಅಂತ ಹಣ ಇಟ್ಟುಕೊಂಡಿದ್ದರೆ ಅದನ್ನು ಫಮಾಯಿಸಿ ಬಿಟ್ಟಿದ್ದೀರಲ್ಲ. ಬೆಳೆಯೋ ಹುಡುಗನ ಮನಸ್ಸಿಗೆ ಎಂತಹ ಆಘಾತವಾಗಿರಬೇಕು, ಯೋಚಿಸಿದಿರಾ" ಎಂದೆ.

ಆಗ ತಲೆ ಎತ್ತಿದ. ಆಗ ಮಾತನಾಡಿದೆ.

"ಪೇಪರಿನಲ್ಲಿ ಅರ್ಥಂಬರ್ಥ ಸುದ್ದಿಗಳನ್ನು ಪ್ರಕಟಿಸುತ್ತಾರೆ ಸಾರ್. ಓದಿದ ಜನ ಮರುಗಲಿ ಕೆರಳಲಿ ಅಂತ. ಪೂರ್ತಿ ವಿಷಯವನ್ನು ಪ್ರಕಟಿಸುವುದೇ ಇಲ್ಲ. ಪಿಂಚಿನ್‌ದಾರ ಹಣವನ್ನು ಎಲ್ಲಿ ಕಳ್ಕೊಂಡ ಗೊತ್ತೇ ಸಾರ್! ಸೇಂದಿ ಪಡಖಾನೆ ಹತ್ತಿರ ದೊಂಬಿಯಲ್ಲಿ ನಿಂತಿದ್ದಾಗ. ಬಡವನಿಗೆ ಅಲ್ಲಿ ಯಾವ ಕೆಲಸ ಸಾರ್!

ರೈತಾಪಿ ಜನ, ಹಳ್ಳಿಮುಕ್ಕ ಅಂದರಲ್ಲ ಸಾರ್, ಅವನು ಜೇಬು ಖಾಲಿ ಮಾಡಿಸಿಕೊಂಡಿದ್ದು ಎಲ್ಲಿ ಗೊತ್ತೆ ಸಾರ್! ಜೂಜಿನ ಕಟ್ಟೆ ಹತ್ತಿರ ಸಾರ್.

ಬಡ ಹುಡುಗ ಅಂದರಲ್ಲ ಸಾರ್, ಅವನ ಜೇಬಿಗೆ ಬ್ಲೇಡ್ ಬಿದ್ದಿದ್ದು, ಸಿನಿಮಾ ಮಂದಿರದ ಹತ್ತಿರ ಕ್ಯೂ ಕೂಡಿದ್ದಾಗ. ಪರೀಕ್ಷೆಗೆ ಓದೋ ಹುಡುಗನಿಗೆ ಅಲ್ಲೇನು ಕೆಲಸ ಸಾರ್?

ಇಂತಹ ಸುದ್ದಿಗಳನ್ನು ಓದಿ, ವಿಷಯವನ್ನು ಸರಿಯಾಗಿ ತಿಳಿದುಕೊಳ್ಳದೆ ಜನತೆ ನಮ್ಮನ್ನು ಅವಹೇಳನ ಮಾಡುತ್ತೆ. ಎಲ್ಲಿಯಾದರೂ ಸಿಕ್ಕಿಹಾಕಿಕೊಂಡರೆ ಸುತ್ತಲೂ ಇರುವವರೆಲ್ಲಾ ಗಿರ್ಕಾಯಿಸಿ ಕೊಂಡು ಹಣ್ಣುಗಾಯಿ ನೀರು ಮಾಡುತ್ತಾರೆ. ಸಿಕ್ಕಿಹಾಕಿಕೊಳ್ಳದೇ ಇದ್ದರೂ ಅನುಮಾನ ಬಂದರೆ

ಸಾಕು, ಎಲ್ಲರೂ ಕೂಡಿ ತೌಡು ಹರೀತಾರೆ ಸಾರ್. ನಮ್ಮನ್ನು ವಹಿಸಿಕೊಂಡು ಯಾರೂ ಬರೊಲ್ಲ. ಹೋದಸಾರಿ ಅನುಮಾನದ ಮೇಲೆ ಮಾರ್ಕೆಟ್ಟಿನ ಹತ್ತಿರ ನಾನು ಹೊಡೆಸಿಕೊಂಡಾಗ ಮೂರು ವಾರ ಆಸ್ಪತ್ರೆಯಲ್ಲಿ ನರಕಯಾತನೆ ಅನುಭವಿಸಬೇಕಾಯ್ತು ಸಾರ್. ಆಮೇಲೆ ಅಲ್ಲಿ ಕೊಟ್ಟ ಇಂಜೆಕ್ಷನ್‌ಗಳಿಂದಾಗಿ ಆರು ವಾರ ಕೂತುಕೊಳ್ಳಲಾಗದೆ ನಿಂತುಕೊಂಡೇ ಜೀವನ ನಡೆಸಬೇಕಾಯ್ತು" ಎಂದು ಹೇಳಿದ.

ಇದನ್ನು ಕೇಳಿದಮೇಲೆ ಅಯ್ಯೋ ಪಾಪ ಎನಿಸಿತು. ಹಾಗೆ ನೋಡಿದರೆ ನಮ್ಮ ಸರ್ಕಾರವೇ ದೊಡ್ಡ ಜೇಬುಗಳ್ಳನ ತರಹ ನಮ್ಮ ಹಣವನ್ನೂ ಕಸಿಯುತ್ತೆ. ನೇರ ತೆರಿಗೆ ಅಂತ ಕಸಿದರೆ ಒಪ್ಪಬಹುದು. ಸಮಾಜದಲ್ಲಿರುವಾಗ ಇದು ಅನಿವಾರ್ಯವಾದ ಸೂತಕ ಅಂದುಕೊಳ್ಳಬಹುದು. ಆದರೆ ವಕ್ರ ತೆರಿಗೆಗಳಿರುತ್ತಲ್ಲ! ಏನನ್ನು ಎಲ್ಲಿ ಯಾವಾಗ ಕೊಂಡರೂ ಅಪ್ರತ್ಯಕ್ಷ ತೆರಿಗೆ ಬಿದ್ದೇ ಬೀಳುತ್ತಲ್ಲ. ಇದು ಒಂದು ರೀತಿಯ ಜೇಬುಗಳ್ಳತನವೇ ಹೌದು. ಹೀಗಂತ ಸುಮಾರು ದಿನಗಳಿಂದಲೂ ನನಗನ್ನಿಸಿತ್ತು. ಆದಕಾರಣ ಈ ಅಲ್ಪ ಬೇಜುಗಳ್ಳರ ಮೇಲೆ ತುಸು ಕನಿಕರವಾಯಿತು. ಯಥಾರಾಜಾ ತಥಾಪ್ರಜಾ ಎನ್ನಿಸಿತು.

ನನ್ನ ಮುಖದಲ್ಲಿ ಕನಿಕರ ಮೂಡಿದ್ದನ್ನು ಕಂಡು ಅವನು ಮುಂದುವರೆದ.

"ಸಾರ್, ನಮ್ಮ ಕಸುಬಿನಲ್ಲಿರುವ ಗಂಡಾಂತರಗಳನ್ನು ನೀವು ಊಹಿಸಲಾರಿರಿ. ಅಪಾಯಗಳನ್ನು ಮನಗಂಡಿರಲಾರಿರಿ. ಕೇಳಿ ಸಾರ್!

ನಮ್ಮ ಪೈಕಿ ಬಳೇಪೇಟೆಯಲ್ಲಿ ಕೆಲಸ ಮಾಡುವ ಸೋದರನೊಬ್ಬ ಮೊನ್ನೆ ಬಸ್‌ಸ್ಟ್ಯಾಂಡಿನಲ್ಲಿ ಕೋರೆ ರುಮಾಲಿನ ಹುಬ್ಬಳ್ಳಿಯವನ ಜೇಬಿಗೆ ಕೈ ಇಳಿಬಿಟ್ಟ. ಚಾಲೂಕಾಗಿ ಸರಕ್ಕಂತ ಆ ಕೆಲಸ ಮಾಡಬೇಕಲ್ಲ. ಅವನು ಹಾಗೇ ಮಾಡಿದ. ಅವನಿಗೆ ಏನಾದರೂ ದೊರಕುವುದು ಹಾಗಿರಲಿ, ಅವನ ಕೈಯ್ಯಿನ ಕಿರುಬೆರಳ ತುದಿಯನ್ನೂ ಹುಬ್ಬಳ್ಳಿಯವನ ಜೇಬಿನಲ್ಲೇ ಬಿಡುವಂತಾಗಿತ್ತು. ಕಾರಣ ಗೊತ್ತೇ ಸಾರ್. ಹುಬ್ಬಳ್ಳಿಯ ಆ ಪಾಪಿ ಜೇಬಿನಲ್ಲಿ ಏನಿಟ್ಟಿದ್ದ ಗೊತ್ತೇ ಸಾರ್! ಹರಿತವಾದ ಬ್ಲೇಡೊಂದನ್ನು! ಕಸುಬಿನ ಕಿರುಬೆರಳು ಊನವಾದ ಮೇಲೆ ಅವನು ಹೇಗೆ ತಾನೇ ಜೀವನ ನಡೆಸಬಲ್ಲ ಸಾರ್! ಇಬ್ಬರು ಮಕ್ಕಳು ಹೆಂಡತಿ ಇದ್ದಾರೆ ಅವನಿಗೆ.

* * * * *

ಹಿಂದಘಟ್ಟದಲ್ಲಿ ಕೆಲವು ದಿನಗಳ ಹಿಂದೆ ರಾಜಕೀಯ ಪಕ್ಷದ ಭಾರಿ ಸಭೆ ಸೇರಿತ್ತಲ್ಲ ಸಾರ್! ಹತ್ತಿಪ್ಪತ್ತು ಸಾವಿರ ಜನ ಸೇರುತ್ತಾರಲ್ಲ ಸಾರ್, ಲಕ್ಷಾಂತರ ರೂಪಾಯಿ ಖರ್ಚಾಗುತ್ತಲ್ಲ! ಅಂತಹ ಸಮ್ಮೇಳನಗಳಿಗೆ ನಾವೂ ನಮ್ಮ ಪ್ರತಿನಿಧಿಗಳನ್ನು ಕಳಿಸುತ್ತೇವೆ. ನಮ್ಮ ಗಿಡ್ಡಣ್ಣನ ಮುಖಂಡತ್ವದಲ್ಲಿ ಮೂರು ಜನ ಹೋಗಿದ್ದರು.

ನಮ್ಮ ಗಿಡ್ಡಣ್ಣ ಅಪ್ಪಟ ಸ್ವದೇಶಿ ಸಾರ್! ಹಿಂದೆ ಹಿಂದೆಯೇ ನಿಂತುಕೊಂಡು "ಜೈ ಹಿಂದ್! ಜೈ ಹಿಂದ್" ಅಂತ ಕೆಟ್ಟ ಕೆಟ್ಟದಾಗಿ ಘೋಷಿಸುತ್ತಿರುವಾಗಲೇ ಮುಂದಿರುವವರ ಜೋಳಿಗೆ ಜೇಬಿನ ತಳಕ್ಕೆ ಬ್ಲೇಡ್ ತಟ್ಟಿಸುತ್ತಾನೆ. ಜೋಳಿಗೆ ಜೇಬಿನಲ್ಲಿರುವುದೆಲ್ಲಾ ಅನಾಮತ್ತು ಕೆಳಕ್ಕೆ ಬೀಳುತ್ತದೆ. ನೆಲಕ್ಕೆ ತಟ್ಟುವ ಮೊದಲೇ ಸದ್ದಾಗದಂತೆ ಅವನ್ನೂ ಗಿಡ್ಡಣ್ಣ ಆತುಕೊಳ್ಳುತ್ತಾನೆ. ಬಲು ಚೂಟಿ ಸಾರ್ ಅವನು.

ಬರೀ ಸ್ವದೇಶಿ ಬಟ್ಟೆಯನ್ನೇ ತೊಡುತ್ತಾನೆ. ಅಂತಹವನು ಹಿಂದಘಟ್ಟದ ಸಮ್ಮೇಳನದಲ್ಲಿ ಭಾಗವಹಿಸಿದಾಗ, ಎದುರಿಗೆ ನಿಂತಿದ್ದ ಒಬ್ಬ ಟೊಣಪ. ಆ ಪಕ್ಷದ ಖಜಾಂಚಿ ಅವನು. ಅವನ ಬಲ ಜೋಳಿಗೆ ಜೇಬು ದಿನವಾದವರಂತೆ ತುಂಬಿಕೊಂಡಿತ್ತು. ಗಿಡ್ಡಣ್ಣನಿಗೆ ಭಂಡಾರ ಕಂಡ ಹಾಗಾಯ್ತು. ಯಾವ ಯಾವ ಕಂಪನಿಗಳಿಂದ ಹೇಗೆ ಹೇಗೆ ವಸೂಲ್ಮಾಡಿರುತ್ತಾರೋ ಆ ಎಲ್ಲ ಹಣದ ಹಿರಿಯ ಭಾಗ ಇವನ ಜೇಬಿನಲ್ಲಿರುತ್ತೆ. 'ಹಾದರದಲ್ಲಿ ಬಂದಿದ್ದು ಹುಯಿಲಿನಲ್ಲಿ ಹೋದ ಹಾಗೆ' ಅನ್ಯಾಯದ ಆ ಹಣ ನ್ಯಾಯವಾಗಿ ನನಗೇ ಸೇರಬೇಕು ಎಂದು ತೀರ್ಮಾನಿಸಿದ.

ಜೋಳಿಗೆ ಜೇಬಿನ ತಳವನ್ನು ಬ್ಲೇಡಿನಿಂದ ಹರಿದ. ಆದರೆ ಅಲ್ಲಿಂದ ಬಿದ್ದುದನ್ನು ಆತುಕೊಳ್ಳಲು ಆಗಲಿಲ್ಲ. ಕಾರಣ ಅದು ಧೊಪ್ಪನೆ ಬಿತ್ತು. ಬಿದ್ದು ಚೂರು ಚೂರಾಯಿತು. ಸದ್ದು ಕೇಳಿ ಆ ಟೊಣಪ ಬಲಗೈ ಜೇಬಿನ ಮೇಲೆ ಕೈಯ್ಯಾಡಿಸಿದ, ಖಾಲಿಯಾಗಿತ್ತು. ತಕ್ಷಣ ನೆಲ ನೋಡಿದ. ಜೇಬಿನಿಂದ ಬಿದ್ದಿದ್ದ ವಿಸ್ಕಿ ಶೀಷೆ ಒಡೆದಿತ್ತು. ನೆಲದ ಮೇಲೆಲ್ಲಾ ವಿಸ್ಕಿ ಚೆಲ್ಲಿತ್ತು. ಗಿಡ್ಡಣ್ಣ ಬಗ್ಗಿ ನಿಂತಿದ್ದ. ಇಷ್ಟನ್ನೂ ಕಂಡ ಟೊಣಪ ಜಟ್ಟಂದು ಗಿಡ್ಡಣ್ಣನ ಕೈಯನ್ನು ಬಲವಾಗಿ ಹಿಡಿದ.

"ಇದು ಯಾವನೋ ಅನ್ಯಾಯಕಾರ ವಿಸ್ಕಿ ಬಾಟಲನ್ನು ಇಂತಹ ಪವಿತ್ರ ಸ್ಥಳಕ್ಕೆ ತಂದಿದ್ದಾನೆ. ಅಕಸ್ಮಾತ್ ಅದು ಬಿದ್ದು ಒಡೆಯಿತು. ಹಿಡಿದುಕೊಳ್ಳಿ ಇವನನ್ನು. ತದುಕಿ" ಎಂದು ಬೊಬ್ಬೆ ಹೊಡೆದ. ರಾಕ್ಷಸರಂತಿರುವ ಹತ್ತಾರು ಸ್ವಯಂಸೇವಕರು ಗಿರ್ಕಾಯಿಸಿಕೊಂಡು ಗಿಡ್ಡಣ್ಣನನ್ನು ಒದ್ದು, ಉಗಿದು ಕಡೆಗೆ ಪೋಲೀಸಿನವರ ವಶಕ್ಕೆ ಒಪ್ಪಿಸಿದರು. ಬದುಕಿದೆ ಅಂದುಕೊಂಡ ಗಿಡ್ಡಣ್ಣ.

ಆ ಪೋಲೀಸಿನವರು ಸುಮ್ಮಗಿದ್ದರು ಅಂತಲೇ! "ಎಲ್ಲಿ ಸಿಕ್ಕಿತು ನಿನಗೆ ಆ ವಿಸ್ಕಿ ಬಾಟಲು. ಮೂರು ಬಾಟಲುಗಳನ್ನು ನಮಗೆ ತಂದುಕೊಟ್ಟರೆ ಬಿಟ್ಟು ಬಿಡ್ತೀವಿ. ಇಲ್ಲದೆ ಇದ್ದರೆ ಕೋದಂಡ ಹಾಕ್ತೀವಿ" ಎಂದು ಬೆದರಿಸಿದರು. "ಟೊಣಪನ ಜೇಬಿನಲ್ಲಿತ್ತಪ್ಪಾ ಆ ವಿಸ್ಕಿ ಬಾಟಲು. ಅರಿಯದೆ ಆ ಜೇಬಿಗೆ ಬ್ಲೇಡ್ ಆಡಿಸಿದೆ. ದುಡ್ಡಿನ ಚೀಲ ಇರುತ್ತೆ ಎಂದುಕೊಂಡಿದ್ದೆ. ನನ್ನ ಪರಿಚಯ ನಿಮಗಿಲ್ಲವೇನಪ್ಪ, ನಾನು ಗಿಡ್ಡಣ್ಣ. ಜೇಬುಗಳ್ಳ ಗಿಡ್ಡಣ್ಣ" ಎಂದು ಎಷ್ಟೋ ತರಹ ಹೇಳಿಕೊಂಡ.

"ಅದೆಲ್ಲ ನಮಗೆ ಗೊತ್ತಿಲ್ಲ. ನೀನು ಯಾರೋ ನಮಗೇನು ಗೊತ್ತು—ಹೆಬ್ಬಿ ಗುಬ್ಬಾಲೆಯ ಪೋಲೀಸ್ ದಳದವರು ನಾವು. ಈ ಸಮ್ಮೇಳನಕ್ಕೆ ಅಂತ ನಮ್ಮನ್ನು ಸ್ಪೆಷಲ್ ಆಗಿ ಕರೆಸಿದ್ದಾರೆ. ಈ ಊರಿನ ಕೇಡಿಗಳ ಪರಿಚಯ ನಮಗೆ ಇಲ್ಲ. ಅದಿದ್ದರೆ ನಿನ್ನನ್ನು ಯಾಕೆ ವಿಸ್ಕಿ ತಗೊಂಬಾ ಅಂತ ಅಂತಿದ್ವಿ. ಕೇಡಿಗಳೇ ಮಾಮೂಲು ಒಪ್ಪಿಸ್ತಾ ಇದ್ದರು" ಎಂದು ಕಠೋರವಾಗಿ ನುಡಿದರು.

ಪಾಪ! ಕೋದಂಡ ಹಾಕಿಸಿಕೊಂಡು ಮೂರುವಾರ ತೋಳು ಸಡಿಲಿತ್ತು. ಎಲ್ಲಿಂದ ತಾನೇ ಅವನು ವಿಸ್ಕಿ ತಂದಾನು? ಗೊತ್ತಿದ್ದರಲ್ಲವೇ?

* * * * *

ಕೋರ್ಟು ಕಚೇರಿಗಳ ಬಳಿಯಲ್ಲೇ ನಮ್ಮ ಕಿಟ್ವಾಣಿ ಕೆಲಸ ಮಾಡೋದು. ಕಕ್ಷಿಗಾರರ ಹಣ ಹೇಗೂ ಪೋಲಾಗುತ್ತೆ. ಅದು ಲಾಯರಿಗೆ ಹೋದರೆ ಏನು? ಕೋರ್ಟಿಗೆ ದಕ್ಕಿದರೆ ಏನು? ನನಗೆ ದಕ್ಕಿದರೆ ಚೆನ್ನ ಎಂದು ಕಿಟ್ವಾಣಿ ಅಲ್ಲೆ ತನ್ನ ಕ್ಷೇತ್ರವನ್ನು ಮೀಸಲು ಮಾಡಿ ಹೂಡಿದ್ದಾನೆ. ಓದಿದವನ, ಠಾಕ್ ಠೀಕ್ ಉಡುಪು ಹಾಕ್ತಾನೆ. ಮೋಟಾರ್ ಸೈಕಲ್ ಮೇಲೆ ಓಡಾಡ್ತಾನೆ. ಅವನ ಹಣೆ ಬರಹ ಏನಾಯ್ತು ಅಂತೀರಿ!

ಕೋರ್ಟಿನೊಳಗೆ ಜಬರ್ದಸ್ತಿನಿಂದ ವಾದಿಸುತ್ತಿದ್ದ ಲಾಯರ್ ಒಬ್ಬರ ಕಿಸೆಗೆ ಬ್ಲೇಡ್ ಹರಿಸಿದ. ಲಕ್ಕೋಟೆಯೊಂದು ಕೆಳಗೆ ಬಿತ್ತು. ಯಾರಿಗೂ ಸುಳಿವು ಕೊಡದೆ ಅದನ್ನೂ ಕಿಟ್ಟಾಣಿ ತೆಗೆದುಕೊಂಡ. ತನ್ನ ಕಾಗದಗಳ ಜತೆ ಇಟ್ಟ. ವಾದ ಪ್ರತಿವಾದ ಮುಗಿದ ಮೇಲೆ ಹೊರಕ್ಕೆ ಬಂದ. ಈ ಮೊಕದ್ದಮೆಯಲ್ಲಿ ಕಿಟ್ಟಾಣಿಯದೂ ಪಾತ್ರವಿದೆ ಎಂದೇ ಕೋರ್ಟಿನಲ್ಲಿದ್ದವರ ನಂಬಿಕೆ.

ಹೊರಕ್ಕೆ ಬಂದು ಮೋಟಾರ್ ಸೈಕಲ್ ಹತ್ತಿಕೊಂಡು ಕಿಟ್ಟಾಣಿ ಪಾರ್ಕಿನ ಹೋಟೆಲಿಗೆ ಹೋದ. ಕಾಫಿ ತಾ ಎಂದು ಮಾಣಿಗೆ ಹೇಳಿ ಲಕ್ಕೋಟೆ ತೆಗೆದ.

ಕಕ್ಷಿಗಾರನ ಕೈಯಿಂದ ಲಾಯರು ಕಸಿದುಕೊಂಡ ಲಕ್ಕೋಟೆಯಲ್ಲಿ ಸುಮಾರು ಹಣ ಇರುತ್ತೆ ಎಂದು ಆಸೆ ಕಿಟ್ಟಾಣಿಗೆ.

ಆದರೆ ಅದರಲ್ಲೇನಿತ್ತು ಅಂತ. ಆ ಲಾಯರಿಗೆ ಹೆಣ್ಣೊಂದು ಬರೆದಿದ್ದ ಪ್ರೇಮಪತ್ರ.

ನನ್ನ ಗಂಡ ಕೋರ್ಟಿನ ಹತ್ತಿರ ಕೆಲಸಕ್ಕೆ ಗುರುವಾರ ಮಧ್ಯಾಹ್ನ ಹೋಗ್ತಾನೆ. ಊಟ ಮಾಡಿಕೊಂಡು ನಾನು ೨ ಗಂಟೆ ಹೊತ್ತಿಗೆ ಇಂತಹ ಹೋಟೆಲ್ ಬಳಿ ಇರುತ್ತೇನೆ. ಅಲ್ಲಿಗೆ ಬಂದರೆ ಇಬ್ಬರೂ ಸ್ವಲ್ಪಕಾಲ ಕಳೆಯಬಹುದು ಎಂದು ಬರೆದಿತ್ತು. ಸರೋಜ ಅಂತ ಸಹಿ ಹಾಕಿತ್ತು.

ಅದನ್ನು ಓದಿ ಕಿಟ್ಟಾಣಿ ಬೆವರಿ ಬಿಳುಚಿಕೊಂಡ.

ಸರೋಜ ಅವನ ಹೆಂಡತಿ. ಶಾಲೆ ಮೇಡಂ ಆಗಿದ್ದ ಅವಳನ್ನು ಮೋಹಿಸಿ ತಾನೇ ಮೇಲೆ ಬಿದ್ದು ಮದುವೆಯಾಗಿದ್ದ. ಅವಳನ್ನು ಸುಖವಾಗಿ ಇರಿಸಬೇಕು ಅಂತಲೇ ಎಂ.ಎ. ಆಗಿದ್ದ ಅವನು, ಇದ್ದ ಕೆಲಸಕ್ಕೆ ರಾಜೀನಾಮೆ ಕೊಟ್ಟು, ಹೇರಳ ಹಣವನ್ನು ಬೇಗ ಸಂಪಾದಿಸಬಹುದು ಎಂದು ನಮ್ಮ ಕಸುಬಿಗೆ ದಾಖಲಾಗಿ ಶಿಕ್ಷಣ ಪಡೆದಿದ್ದ.

ಈ ಕಾಗದ ಕಂಡಮೇಲೆ ಅವನಿಗೆ ಎಂತದೋ ವೈರಾಗ್ಯ ಅಮರಿಕೊಂಡಿತು. ಮೋಟಾರು ಸೈಕಲ್ಲನ್ನು ಅಲ್ಲೇ ಬಿಟ್ಟು, ನೆಟ್ಟಗೆ ಎಲ್ಲಿಗೋ ನಡೆದುಹೋದ. ಅವನು ಏನಾದ ಅಂತ ಯಾರಿಗೂ ತಿಳಿದಿಲ್ಲ.

ನಮ್ಮ ಕಸುಬಿನಲ್ಲಿ ಎಂತೆಂತಹ ಅಪಾಯಗಳಿವೆ, ಎಂತೆಂತಹ ಗಂಡಾಂತರಗಳು ಒದಗುತ್ತವೆ ಎನ್ನುವುದನ್ನು ಸೂಕ್ಷ್ಮವಾಗಿ ತಿಳಿಸಿದ್ದೇನೆ.

ಈಗ ಹೋಗಿ ಬರಲೇ" ಎಂದ.

"ಹ್ಞೂ ಕಣಪ್ಪ, ಆದರೆ ನಿನ್ನ ಹೆಸರು ಹೇಳಿಬಿಟ್ಟು ಹೋಗು" ಎಂದೆ.

"ಜೇಬುಗಳ್ಳ ಜಿಮ್ಮಿ ಅಂತ ಸಾರ್. ಯಾವ ಬಸ್‌ಸ್ಟ್ಯಾಂಡಿನಲ್ಲಿಯಾಗಲೀ ಜಿಮ್ಮಿ ಎಲ್ಲಿ ಎಂದರೆ ಯಾರಾದರೂ ಹೇಳ್ತಾರೆ ಸಾರ್" ಅಂದ.

ಎಂದು ಹೀಗೆ ಹೇಳಿ ಬಾಗಿಲತನಕ ಹೋದವನು ಹಿಂತಿರುಗಿ ಬಂದು ಮೇಜಿನ ಮೇಲೆ ಕಡ್ಡಿ ಪೆಟ್ಟಿಗೆಯನ್ನು ಇಟ್ಟು,

"ನನಗೇನೂ ಬೇಡ ಸಾರ್ ಇದು. ನಾನು ಬೀಡಿ ಸಿಗರೇಟ್ ಸೇದೊಲ್ಲ" ಎಂದು ಹೇಳಿ ಮಂದಸ್ಮಿತವಾಗಿ ಹೊರಟುಹೋದ.



# ಗುಂಡಯ್ಯ

**ಕ**ಚೇರಿಯ ಹೊರಬಾಗಿಲಲ್ಲಿದ್ದ ಕಂಬಕ್ಕೆ ತೂಗು ಹಾಕಿದ್ದ ಜಾಗಟೆಯ ಮೇಲೆ ಪ್ಯಾದೆ ಮೂರು ಸಾರಿ ಬಾರಿಸಿದ. ಅಷ್ಟು ಪ್ರಯಾಸಪಟ್ಟದ್ದಕ್ಕೇ ಅವ ಆ ಸೆಕೆಯಲ್ಲಿ ಬಡಿದುಹೋಗಿದ್ದ. ಬಿಸಿಲಿನಲ್ಲಿ ಕಾದಿದ್ದ ಆ ಜಾಗಟೆಯೂ, ಬಾರಿಸಿದಾಗ ಸನ್ನಿ ಹಿಡಿದವರು ನರಳುವಂತೆ ನರಳಿ ಮೂರು ಸಲವೂ ಅಯ್ಯಪ್ಪೋ! ಅಯ್ಯಮ್ಮಾ! ಎಂದಿತು.

ಕಚೇರಿಯ ಒಳಗಿದ್ದ ನೌಕರರೆಲ್ಲರಿಗೂ ಮೂರು ಬಡಿದ ಸದ್ದು ಕೇಳಿಸಿತು. ಎಲ್ಲರೂ ಕೈಲಿದ್ದ ಲೇಖನಿಗಳನ್ನು ಮೇಜಿನ ಮೇಲೆ ಇರಿಸಿದರು. ಕತ್ತಿನ ಪಟ್ಟಿಗಳನ್ನು ಸಡಿಲ ಮಾಡಿಕೊಂಡು, ಹರಿಯುತ್ತಿದ್ದ ಬೆವರನ್ನು ಒರೆಸಿಕೊಂಡರು. ಅವರ ಷರಟುಗಳೆಲ್ಲ ಮೈಯ ಚರ್ಮಕ್ಕೆ ಅಂಟಿಕೊಂಡಂತಾಗಿತ್ತು. ಕೂತ ಕುರ್ಚಿಯಿಂದ ಎದ್ದರೆ ಕುರ್ಚಿಯೂ ಏಳುತ್ತಿತ್ತು. ಅಷ್ಟು ಧಗೆ ಆ ಕಾಲದಲ್ಲಿ, ಆ ಹೊತ್ತಿನಲ್ಲಿ, ಈ ಕಚೇರಿಯಲ್ಲಿ.

ಮೂರನೆ ಗಂಟೆ ಬಾರಿಸಿದ ಮೇಲೆ, ಧ್ವನಿ ಪ್ರತಿಧ್ವನಿಗಳು ಅಲೆಯಲೆಯಾಗಿ ನಿಲ್ಲುವ ಹೊತ್ತಿಗೆ ಎಲ್ಲ ನೌಕರರ ಕೊರಲಿನಿಂದಲೂ "ಗುಂಡಯ್ಯಾ" ಅಂತ ನಾಮೋಚ್ಚಾರಣೆಯು ಸಾಮೂಹಿಕವಾಗಿ ಒಮ್ಮೆಲೇ ಆಯಿತು.

ಒಂದು ಅಗಲವಾದ ತಟ್ಟೆಯಲ್ಲಿ ನೀರುಮಜ್ಜಿಗೆ ತುಂಬಿರುವ ಗ್ಲಾಸುಗಳನ್ನು ಇಟ್ಟುಕೊಂಡು, "ಗುಂಡಯ್ಯ" ಪ್ರತ್ಯಕ್ಷನಾದ. ಗೋವರ್ಧನಗಿರಿಯನ್ನು ಹೊತ್ತು ನಿಂತ ಕೃಷ್ಣ ಪರಮಾತ್ಮನಂತೆ ಒಂದು ಕ್ಷಣ ಎಲ್ಲರಿಗೂ ಕಾಣಿಸಿದ. ಹುಷಾರಾಗಿ ನಡೆಯಬೇಕಾದ ಕಾರಣ ವೈಯ್ಯಾರದಿಂದ ನಡೆದಂತೆ ನಡೆದ. ಗ್ಲಾಸುಗಳ ಅಂಚುಗಳು ಒಂದುಕ್ಕೊಂದು ಕೊಂಚ ತಗುಲಿ ಕಿಂಕಣ ನಿನಾದವನ್ನು ಉಂಟು ಮಾಡಿದುವು. ಆ ನಿನಾದದ ತಾಳಕ್ಕೆ ಸರಿಯಾಗಿ ಗುಂಡಯ್ಯ ಅಡಿಯಿಡುತ್ತಾ ಬಂದು ನೌಕರರೊಬ್ಬೊಬ್ಬರ ಮುಂದೆಯೂ ಒಂದೊಂದು ತುಂಬಿದ ಗ್ಲಾಸು ಇಟ್ಟ.

ನೌಕರರೊಬ್ಬೊಬ್ಬರೂ ಗ್ಲಾಸಿನ ಅಂಚಿಗೆ ತುಟಿಯನ್ನು ತಾಕಿಸಿ, ಅಧರಾಮೃತವನ್ನು ಸವಿಯುವ ರಸಿಕರಂತೆ, ಹನಿಹನಿಯಾಗಿ, ಮಜ್ಜಿಗೆಯನ್ನು ರುಚಿ ನೋಡಲು ಪ್ರಾರಂಭಿಸಿದರು. ಅರ್ಧಗ್ಲಾಸ್ ಕುಡಿಯುವ ಹೊತ್ತಿಗೆ ಅವರ ಆಯಾಸವೆಲ್ಲ ಪರಿಹಾರವಾದಂತಿತ್ತು. ಸೆಖೆಯ ಧಗೆ ಇಳಿಮುಖವಾಗಿತ್ತು. ಬಿಸಿಲಿನ ತಾಪ ಕಡಿಮೆ ಕಂಡಿತು. ನಿಜವಾಗಲೂ ಆ ಮಜ್ಜಿಗೆಯು ಯಶಸ್ವಿಯಾದ ತಾಪಹಾರಿಯಾಗಿತ್ತು. ತಂಪು ಎರೆದಿತ್ತು. ತಿಳಿಹುಳಿಯಾದ, ತುಸು ಕೊತ್ತಂಬರಿ ಸೊಪ್ಪಿನ ಘಮವಿದ್ದ, ಹದನಾಗಿ ಉಪ್ಪೇರಿದ್ದ, ನೀರು ನೀರಾಗಿದ್ದ ಆ ಮಜ್ಜಿಗೆಯನ್ನು ಗುಂಡಯ್ಯನೇ ಸ್ವಹಸ್ತದಿಂದ ತಯಾರಿಸಿದ್ದು.

ಎಣೆಯಿಲ್ಲದ ಸಮನಿಲ್ಲದ ಆ ಗುಂಡಪ್ಪ, ಪೋಲೀಸ್ ಕಚೇರಿಯ ದಫ್ತರ ಬಂದಿ. ನೀರು ಮಜ್ಜಿಗೆಯನ್ನು ತಯಾರಿಸಿ, ಸರಬರಾಜಿಸುವುದು ಅವನ ಹೆಮ್ಮೆಯ ಹವ್ಯಾಸ.

* * * * *

ಶುಕ್ರವಾರ ಪೋಲೀಸ್ ಕಚೇರಿಯಲ್ಲೆಲ್ಲಾ ಕೆಟ್ಟ ಸುದ್ದಿಯೊಂದು ಹರಡಿತು. ಪೋಲೀಸ್ ಕಚೇರಿಯಲ್ಲಿ ಇನ್ನೆಂತಹ ಸುದ್ದಿ ತಾನೆ ಬಂದೀತು ಎಂದು ಅನುಮಾನ ಬರಬಹುದು. ಆದರೆ ಪೋಲೀಸ್ ಕಚೇರಿಗಳಲ್ಲಿ ಹೊರಗಿನವರು ಕೆಟ್ಟು ಹೋದ ಸುದ್ದಿ ಬರುತ್ತದೆಯೇ ಹೊರತು, ಕಚೇರಿಯವರಿಗೇ ಕೆಡುಕೆನಿಸುವ ಸುದ್ದಿ ಸಾಮಾನ್ಯವಾಗಿ ಬರುವುದಿಲ್ಲ. ಸೂತಕ ಬಡಿದವರಂತೆ ನೌಕರರೆಲ್ಲರೂ ತಲ್ಲಣಿಸಿದರು.

ಕಚೇರಿಯ ಸೂಪರಿಂಟೆಂಡೆಂಟ್ ಅವರಿಗೆ ವರ್ಗವಾಗಿತ್ತು. ಆತ ಗುಂಡಯ್ಯನನ್ನೂ ವರ್ಗ ಮಾಡಿಸಿಕೊಂಡು ತನ್ನ ಜತೆಗೇ ಕರೆದುಕೊಂಡು ಹೋಗುವ ಸನ್ನಾಹವನ್ನು ಯಶಸ್ವಿಯಾಗಿ ನಡೆಸಿದ್ದಾನೆಂಬುದೇ ಆ ಸುದ್ದಿ. ಘೋರವಾದ ಕೆಟ್ಟ ಸುದ್ದಿ.

ಶುಕ್ರವಾರ ಮಧ್ಯಾಹ್ನ ಮೂರು ಗಂಟೆಗೆ ನೌಕರರೆಲ್ಲರೂ ಮಜ್ಜಿಗೆ ಕುಡಿಯುತ್ತಾ ಸಭೆ ಮಾಡಿದರು. ಹೀಗಾಯಿತಲ್ಲ, ಮುಂದೇನು ಗತಿ ಎಂದು ಆಲೋಚಿಸಿದರು. "ಎಲ! ಎಲಾ! ಇಷ್ಟು ದಿನಗಳೂ ನಾವು ಸೂಪರಿಂಟೆಂಡೆಂಟ್ ನಾಗಯ್ಯನಿಗೆ ಅರಿಯದೆ ಹಾಲೆರೆದೆವಲ್ಲಾ! ನ್ಯಾಯನಿಷ್ಠೆಯಿಂದ ಕೆಲಸ ಮಾಡಿದೆವಲ್ಲ! ಇದಕ್ಕೆ ಪ್ರತಿಫಲವೋ ಎಂಬಂತೆ ನಾಗಯ್ಯ ನಮಗೆ ಅಮೃತ ಕಲಶದಂತಿರುವ ಗುಂಡಯ್ಯನನ್ನೇ ಹಾರಿಸಿಕೊಂಡು ಹೋಗಿ, ನಮಗೆಲ್ಲಾ ವಿಷಗರೆದನಲ್ಲಾ!" ಎಂದು ಹಲುಬಿದರು. ಶೂನ್ಯ ಮಾಡಿಸಿಕೊಂಡವರ ಬೆಪ್ಪು ಬಡಿದ ಕಳೆ ನೌಕರರ ಮುಖಗಳಲ್ಲಿತ್ತು.

ಪೋಲೀಸ್ ಕಚೇರಿಯಲ್ಲಿ ವೆಂಕಟಶಾಮಿ ಚೂಟಿ ಆಸಾಮಿ ಎಂದು ಹೆಸರು ಗಳಿಸಿದ್ದಾನೆ. ಆಹಾರದ ಇಲಾಖೆಗೆ ತಾತ್ಕಾಲಿಕವಾಗಿ ಹೋಗಿ ಕೆಲಸ ಮಾಡಿ ಬಂದ ಮೇಲೆ ಅವ ಬಹಳ ಕಲಿತಿದ್ದಾನೆ, ಚಿಗುರುಕೊಂಡಿದ್ದಾನೆ. ಮೂಟೆಗಳು ಮಾಯವಾದರೂ ಮೂಟೆಗಳ ಲೆಕ್ಕ ಸರಿ ಯಾಗಿರುವುದನ್ನು ಪರಿಶೀಲಿಸಿದ್ದಾನೆ. ಆತನ ಕಡೆಗೆ ನೌಕರರೆಲ್ಲರೂ ತಿರುಗಿದರು.

ಆತನಂದ: "ಈ ನಾಗಯ್ಯನ ವಿಷವನ್ನು ಪರಿಹಾರ ಮಾಡುವ ಮದ್ದು ನನಗೆ ಗೊತ್ತು. ಇದಕ್ಕೆ ಉಪಯೋಗಿಸಬೇಕಾದ ನಾಗ ಪಚ್ಚೆಮಣಿ ನನ್ನ ಹತ್ತಿರ ಇದೆ" ಎಂದು.

ನೌಕರರೆಲ್ಲರೂ ಕಿವಿಗಳನ್ನು ನಿಮಿರಿಸಿಕೊಂಡು ವೆಂಕಟಸ್ವಾಮಿಯ ಮೇಜಿನ ಸುತ್ತಲೂ ನೆರೆದು ನಿಂತರು.

"ಎಲೈ ಕಾಳಿಂಗಮರ್ದನ! ನಿನ್ನ ಚಾಣಕ್ಯ ತಂತ್ರವನ್ನು ನಮಗೆ ಅರುಹು. ನಿನ್ನ ಗರುಡ ಪಚ್ಚೆಮಣಿಯನ್ನು ನಮಗೆ ತೋರು. ನಮ್ಮ ತೃಷ್ಣೆಯನ್ನು ತೀರಿಸುವ ಇಂದಿರುವ ಸ್ಥಿತಿಯೇ ಮುಂದೂ ಇರುವಂತೆ ಕರುಣಿಸು" ಎಂದು ಗೋಪಿಕಾ ಸ್ತ್ರೀಯರಂತೆ ಮುಖ ಮಾಡಿಕೊಂಡು ವೆಂಕಟಸ್ವಾಮಿಯನ್ನು ಕೇಳಿಕೊಂಡರು.

ಹಸನ್ಮುಖನಾಗಿ ವೆಂಕಟಸ್ವಾಮಿಯು ಭರವಸೆಯನ್ನಿತ್ತ.

"ನಮ್ಮ ಪೋಲೀಸ್ ಡಾಕ್ಟರೇ ನನ್ನ ಗರುಡ ಪಚ್ಚೆಮಣಿ. ಆತನನ್ನು ನಾವೆಲ್ಲ ಮುತ್ತಿಕೊಂಡು

ಬೇಡಿಕೊಳ್ಳೋಣ. ನಮ್ಮನ್ನು ಆವರಿಸಲಿರುವ ವಿಷದ ವಿಷಯ ತಿಳಿಸೋಣ. ಗುಂಡಯ್ಯನಿಗೆ ಖಾಯಿಲೆ, ಅವ ಮೂರು ವಾರ ಹಾಸಿಗೆ ಬಿಟ್ಟು ಏಳಬಾರದು ಎಂದು ಸರ್ಟಿಫಿಕೇಟ್ ದಯಪಾಲಿಸಲಿ. ಅದೇ ವಿಷ ನಿವಾರಕವಾಗುತ್ತದೆ. ನಾಗಯ್ಯನವರು ಊರು ಬಿಟ್ಟು ಹೋಗುವ ತನಕ ಗುಂಡಯ್ಯ ಖಾಯಿಲೆ ಬಿದ್ದಿರಲಿ. ಅನಂತರ ವರ್ಗದ ಹುಕುಂ-ಅನ್ನು ವಜಾ ಮಾಡಲು ಹೆಡ್ಡಾಫೀಸಿನಲ್ಲಿ ತಕ್ಕ ಶೂನ್ಯ ಮಾಡಿಸುತ್ತೇನೆ" ಎಂದು ನುಡಿದ.

ಬೆಟ್ಟಗುಡ್ಡಗಳಲ್ಲಿ ಕಾಣಿಸುವ ನದಿಯ ಆರ್ಭಟವೆಲ್ಲ ಕಣಿವೆಯಲ್ಲಿ ಥಂಡಾ ಆಗುವಂತೆ, ಭಯಂಕರವಾಗಿ ಕಂಡ ಕತ್ತಲೆಯು, ಹಣತೆಯ ಬೆಳಕಿನಿಂದ ಮಾಯವಾದಂತೆ ನೌಕರರೆಲ್ಲರ ಸೂತಕ ಬಡಿದ ಮುಖಗಳು ಶುಭ ಸ್ವೀಕಾರವಾದಂತೆ ಪ್ರಫುಲ್ಲವಾದುವು. ವೆಂಕಟಸ್ವಾಮಿಯ ಮೆದುಳು ಇಷ್ಟು ಚುರುಕಾಗಿ ಕೆಲಸ ಮಾಡಲು, ಇಷ್ಟು ಯಶಸ್ವಿಯಾಗಿ ತೀಕ್ಷ್ಣವಾಗಿ ಹರಿಯಲು, ಅವ ಹೊಟ್ಟೆಗೆ ಏನನ್ನು ತಿನ್ನುತ್ತಾನೋ ಎಂದು ನೌಕರರೆಲ್ಲರೂ ಊಹಿಸತೊಡಗಿದರು. ನಾಗರ ಹಾವಿನ ಮೊಟ್ಟೆಗಳನ್ನು ನಾಗರ ಪಂಚಮಿಯ ದಿನ ಗಡದ್ದು ತಿನ್ನುತ್ತಾನೆ ಎಂದು ಕೆಲವರು ಪಿಸು ಮಾತನಾಡಿಕೊಂಡರು. ಹಾಗಲ್ಲ ಕಣೋ ಗರುಡನ ಮೊಟ್ಟೆಗಳನ್ನು ಗರುಡ ಪಂಚಮಿಯ ದಿನ ಮರಗಳ ಮೇಲೆ ಕುಳಿತು ತಿನ್ನುತ್ತಾನೆ ಎಂದು ಇನ್ನು ಕೆಲವರು ಅಂದಿದ್ದೂ ಉಂಟು.

ವೆಂಕಟಸ್ವಾಮಿಯ ಸಲಹೆಯು ಆ ಸಾಯಂಕಾಲವೇ ಆಚರಣೆಗೆ ತರಲ್ಪಟ್ಟಿತು. ಆ ಸಂಜೆ ಪೋಲೀಸ್ ಆಫೀಸಿನಿಂದ ಹೊರಟ ನೌಕರರ್ಯಾರೂ ಈಚಲ ತೋಪಿನತ್ತ ವಾಡಿಕೆಯಂತೆ ಹೋಗಲಿಲ್ಲ. ಧರ್ಮರಾಯನ ಆಟದ ಕಟ್ಟೆಯ ಹತ್ತಿರಕ್ಕೂ ಹೋಗಲಿಲ್ಲ. ಕಡಕು, ಮನೆಗಳಿಗೂ ಹೋಗಲಿಲ್ಲ.

ಎಲ್ಲರೂ ಶಿಸ್ತಾಗಿ ಸಾಲುಗಟ್ಟಿ ನಿಂತರು. ವೆಂಕಟಸ್ವಾಮಿಯ ಮುಂದಾಳುತನದಲ್ಲಿ ಕವಾಯಿತ್ ಮಾಡುವ ರೀತಿ, ಲೆಫ್ಟ್‌ರೈಟ್ ಹೆಜ್ಜೆಗಳನ್ನು ತಾಳಕ್ಕೆ ತಪ್ಪುತ್ತಾ ಹಾಕಿ ನಡೆದರು. ಪೋಲೀಸಿನವರೇ ಹರತಾಳ ನಡೆಸುತ್ತಿದ್ದಾರೋ ಎಂದು ಅನುಮಾನ ಬಂದು ಸಣ್ಣಪುಟ್ಟ ಅಂಗಡಿಗಳವರು ಬಾಗಿಲುಗಳನ್ನು ಬೇಗ ಮುಚ್ಚಿದರು. ಪಡ್ಡೆ ಹುಡುಗರು ಕೆಲವರು ಈ ಮೆರವಣಿಗೆಯ ಹಿಂದೆ ಕಾಲು ಹಾಕಿದರು.

ಎಲ್ಲರೂ ಎಲ್ಲಿಗೆ ಹೋದರು ಅಂತ?

ನೇರ ಪೋಲೀಸ್ ಡಾಕ್ಟರ ಮನೆಗೆ.

ಸಾಯಂಕಾಲ ಆರೂವರೆ ಗಂಟೆ ಸಮಯ. ಗೋವುಗಳು ಕೊಟ್ಟಿಗೆಗೆ ಹಿಂತಿರುಗುವ ಗೋಧೂಳಿ ಲಗ್ನ. ದುಡಿದವರೆಲ್ಲ ಕ್ಲಬ್ಬಿಗೆ ಹೋಗುವ ಕಾಲ. ಹೆಂಗಸರೆಲ್ಲಾ ಶೃಂಗಾರ ಮಾಡಿಕೊಂಡು ಕಟ್ಟೆಗಳ ಮೇಲೆ ಕೂತು ಚಾಡಿ ಕೊಚ್ಚುವ ಹೊತ್ತು. ಏನು ಮಾಡಲೂ ಇರದ ಪಿಂಚಿನ್ ಆದ ಅಂತರ್ ಪಿಶಾಚಿಗಳು ಕೋಲು ಛತ್ರಿ ಹಿಡಿದು ವರಪೂಜೆ ಗಂಡುಗಳಂತೆ ವಾಕಿಂಗ್ ಹೊರಡುವ ಮುಹೂರ್ತ.

ಅಂತ ಸಮಯಕ್ಕೆ ಸಾಮಾನ್ಯವಾಗಿ ಪೋಲೀಸ್ ಡಾಕ್ಟರು, ತಮ್ಮ ಮಾರಕ ಕೆಲಸವನ್ನು ಮುಗಿಸಿ ಮನೆಗೆ ಬರುವುದು. ತಮ್ಮ ಕಸುಬಿನಲ್ಲಿ ಕಂಡ ದುಃಖ ಸಂಕಟಗಳನ್ನು ಮರೆಯಲು ಮನೆಯೇ ದಿವ್ಯಸ್ಥಳ, ಪವಿತ್ರ ಕ್ಷೇತ್ರ, ಅಲ್ಲಿ ಏನನ್ನು ಬೇಕಾದರೂ ಮಾಡಿಕೊಂಡು ಇರಬಹುದು ಎಂದು ಅವರು ಅರಿತಿದ್ದಾರೆ. ಮನೆಯೇ ಅವರ ಕ್ಲಬ್ಬು, ಏಕಾಂತತೆಯೇ ಕಾಂತೆ.

ಮನೆಯ ಹೊರಗಡೆ ಗದ್ದಲವಾದುದನ್ನು ಕೇಳಿ ಪೋಲೀಸ್ ಡಾಕ್ಟರು ಗೇಟಿನ ಬಳಿಗೆ ಹೋದರು. ತಮ್ಮ ಇಲಾಖೆಯ ನೌಕರರೆಲ್ಲ ಗುಂಪುಗೂಡಿಕೊಂಡು ಬಂದಿದ್ದಾರೆ. ಏನು ಬಂತಪ್ಪಾ ಪೀಕಲಾಟ ಎಂದುಕೊಂಡೇ ನಿಂತರು. ಅವರ ಮನೆಯ ಎದುರಿಗೆ ಎಲ್ಲರೂ ನಿಂತಿದ್ದನ್ನು ಕಂಡು ಡಾಕ್ಟರ ಅನುಮಾನ ಬೇರೂರಿತು.

"ಏನಪ್ಪಾ ಇದು. ಎಲ್ಲರೂ ಬಂದಿದ್ದೀರಿ, ಏನಾಗಬೇಕು" ಎಂದು ಕೇಳಿದರು.

"ನಿಮ್ಮ ಹತ್ತಿರ ಗುಟ್ಟಾಗಿ ಮಾತನಾಡಬೇಕಿತ್ತು" ಎಂದ ವೆಂಕಟಸ್ವಾಮಿ.

"ಗುಟ್ಟಾಗಿ ಮಾತನಾಡುಕ್ಕೆ ಇಷ್ಟು ಜನ ಬಂದಿರಾಪ್ಪ" ಎಂದು ಡಾಕ್ಟರು ಕೇಳಿದರು.

"ಹೌದು ಡಾಕ್ಟರೇ" ಎಂದ ವೆಂಕಟಸ್ವಾಮಿ.

ಡಾಕ್ಟರಿಗೆ ಷಾಕ್ ಹೊಡೆದ ಹಾಗಾಯಿತು. ಗುಟ್ಟಾಗಿ ಕಳ್ಳತನವನ್ನು ಕಳ್ಳ ಮಾಡಬಹುದು. ಅದನ್ನು ರಟ್ಟಾಗಿಸಿ ಪ್ರಕಟಿಸುವುದು ಪೋಲೀಸರ ಕೆಲಸ. ದಿಟ, ಗುಟ್ಟಾಗಿ ಇನ್ನು ಕೆಲವರು ಇನ್ನು ಬೇರೆ ಕೆಲಸಗಳನ್ನು ಮಾಡಬಹುದು. ಮುಂದಲೆ ಹಿಡಿದುಕೊಂಡು ಅವರನ್ನು ಕೋರ್ಟಿಗೆ ಎಳೆದು ಬಹಿರಂಗವಾಗಿ ಶಿಕ್ಷೆಯನ್ನು ಪೋಲೀಸಿನವರು ಕೊಡಿಸಬಹುದು. ಆದರೆ ಪೋಲೀಸಿನವರೇ ಗುಟ್ಟಾಗಿ ಮಾಡಬೇಕು ಎಂದಿರುವಾಗ, ಆ ಕೆಲಸವನ್ನೂ ಬಹಿರಂಗವಾಗಿ ಮಾಡಬೇಕು ಎಂದು ಹೇಳಿದರೆ ಈ ಪೋಲೀಸಿನವನಿಗೆ ತಲೆ ಸರಿಯಾಗಿದೆಯೇ? ಅಥವಾ ಈಚಲ ತೋಪಿನಿಂದ ಎಲ್ಲರೂ ಬಂದಿದ್ದಾರೆಯೇ ಎಂದು ಡಾಕ್ಟರಿಗೆ ಸಹಜವಾಗಿ ಅನಿಸಿತು.

ಆದರೂ ಕಸುಬಿಗೆ ತಕ್ಕ ಸಹಜ ಸ್ಫೂರ್ತಿಯಿಂದ, ತಮ್ಮ ಒಳಮನಸ್ಸಿನ ಶಂಕೆಯನ್ನು ತೋರ್ಪಡಿಸಿಕೊಳ್ಳದೆ, "ಹಾಗಾದರೆ ನಿಮ್ಮಲ್ಲಿ ಇಬ್ಬರು ಪ್ರತಿನಿಧಿಗಳಾಗಿ ನನ್ನ ಜತೆ ಮಾತಾಡಲು ಮನೆಯೊಳಕ್ಕೆ ಬನ್ನಿ. ಮಾತಾಡಿದ ಮೇಲೆ ಫಲಿತಾಂಶವನ್ನು ನೀವಿಬ್ಬರೂ ಗುಟ್ಟಾಗಿ ಇಲ್ಲಿ ನೆರೆದಿರುವ ನಿಮ್ಮ ಸಹನೌಕರರಿಗೆ ಹೇಳಿ" ಎಂದು ಸಲಹೆ ಮಾಡಿದರು.

ವೆಂಕಟಸ್ವಾಮಿ ಮತ್ತು ನಾನು ಪ್ರತಿನಿಧಿಗಳಾಗಿ ಡಾಕ್ಟರ ಜತೆಗೆ ಅವರ ಮನೆಯೊಳಕ್ಕೆ ಹೋದೆವು. ಅವರ ಕೊಠಡಿಯಲ್ಲಿ ಕುಳಿತೆವು. ಬಾಗಿಲನ್ನು ಡಾಕ್ಟರು ಮುಚ್ಚಿದರು, ಅಲ್ಮೈರಾದ ಬಾಗಿಲನ್ನು ತೆರೆದರು.

ವೆಂಕಟಸ್ವಾಮಿಯೇ ಡಾಕ್ಟರಿಗೆ ಬಂದ ಕೆಲಸವನ್ನು ವಿವರಿಸಿದ. ಗುಂಡಯ್ಯನ ವರ್ಗ; ನಾವು ಯೋಚಿಸಿದ ಯೋಜನೆ. ಡಾಕ್ಟರ ನೆರವು ಯಾವ ರೀತಿ ನಮಗೆ ಅಗತ್ಯ; ಎಲ್ಲವನ್ನೂ ವೆಂಕಟಸ್ವಾಮಿ ಸ್ಪಷ್ಟವಾಗಿ ಹೇಳಿದ.

"ಸುಳ್ಳು ಸರ್ಟಿಫಿಕೆಟ್ಟನ್ನು ಹೇಗೆ ಕೊಡಲಪ್ಪಾ ನಾನು? ಕೇವಲ ಖಾಸಗಿ ಡಾಕ್ಟರಾದರೆ ಅದೊಂದು ತರಹ! ಆದರೆ ನಾನು ಪೋಲೀಸ್ ಇಲಾಖೆಯಲ್ಲಿ ಪಗಾರ ಪಡೆಯುವ ಇಲಾಖಾ ಡಾಕ್ಟರು! ಬೇಲೀನೆ ಎದ್ದು ಹೊಲ ಮೇಯಬಹುದೇ? ಹೆಣ್ಣು ಕೊಟ್ಟ ಮಾವನೇ ಅಳಿಯನ ಎದೆಗೆ ಬೆಂಕಿ ಇಡಬಹುದೇ? ಇದು ನನ್ನಿಂದ ಸಾಧ್ಯವಿಲ್ಲಪ್ಪ" ಎಂದರು ಡಾಕ್ಟರು.

ನಮ್ಮಿಬ್ಬರ ಮುಖವೂ ಇಳಿಯಿತು. ಇದನ್ನು ಡಾಕ್ಟರು ಕಂಡರು, ಹಾಗೂ ಹೊರಗೆ ನಿಂತಿದ್ದ ನೌಕರ ಸಮೂಹವೂ ಅವರಿಗೆ ಆ ಕ್ಷಣ ಕಂಡಿರಬೇಕು. ಆ ಭಯದಿಂದಲೇ ಆತ ಮುಂದುವರೆದು,

"ನಿಮ್ಮ ಗುಂಡಯ್ಯ ಏನಾದರೂ ಸುಳ್ಳು ಖಾಯಿಲೆಯನ್ನು ಹೇಳಿಕೊಂಡರೆ... ಆಗ ಭಗವಂತ ಇದ್ದಾನೆ" ಎಂದು ಆಸೆ ತೋರಿಸಿದರು.

ನಾವಿಬ್ಬರೂ ಹೊರಗೆ ಬಂದು "ಪೋಲೀಸ್ ಡಾಕ್ಟರಿಗೆ ಜಯವಾಗಲಿ" "ಜಿಂದಾಬಾದ್ ಪೋಲೀಸ್ ಡಾಕ್ಟರ್" ಎಂದು ಕೂಗಿದೆವು. ನೌಕರರೆಲ್ಲರಿಗೂ ನಾವು ಹೋದ ಕೆಲಸ ಹಣ್ಣು ಎಂದು ತಿಳಿಯಿತು. ನಗುತ್ತಾ ಎಲ್ಲರೂ ಅವರವರ ಮನೆಗಳಿಗೆ ಹೊರಟು ಹೋದರು.

ನಾವೆಲ್ಲ ಸೇರಿ ಮಾರನೆಯ ಬೆಳಿಗ್ಗೆ ಗುಂಡಯ್ಯನನ್ನು ವೆಂಕಟಸ್ವಾಮಿ ಜತೆ ಮಾಡಿ ಡಾಕ್ಟರ ಹತ್ತಿರಕ್ಕೆ ಚಿಕಿತ್ಸೆಗಾಗಿ ಕಳಿಸಿದೆವು. ಹಿಂದಿನ ರಾತ್ರಿ ಗುಂಡಯ್ಯನ ದೇಹಸ್ಥಿತಿ ವಿಷಮಿಸುವಂತೆ ಬಹಳ ಮೆಹನತ್ತು ಮಾಡಿದ್ದೆವು. ಒಂದು ತೊಲ ಹಸಿ ಇಂಗು ತಿನ್ನಿಸಿದ್ದೆವು. ಅರೆ ಬೆಂದ ಹೆಸರಬೇಳೆಯನ್ನು ಮುಕ್ಕಿಸಿದ್ದೆವು. ದಾರಿ ಅಂಚಿನ ಬಾಂಡ್ಲೆ ಹೋಟಲುಗಳಿಂದ ಸೀಮೆಎಣ್ಣೆ ವಾಸನೆ ಬಡಿಯುತ್ತಿದ್ದ ವಡೆ ಚಕ್ಕುಲಿಗಳನ್ನು ಅವನಿಗೆ ಉಣ್ಣಿಸಿದೆವು.

ಎಲ್ಲವನ್ನೂ ಗುಂಡಯ್ಯ ನಗುಮುಖದಿಂದಲೇ ಸ್ವಾಗತಿಸಿದ.

"ನನಗೇನು ಸ್ವಾಮೀ! ಇಷ್ಟೂ ಜನ ನೀವು ಆದರದಿಂದ ಹೀಗೆ ಮಾಡು; ಇದರಿಂದ ನಮಗೆ ಸಂತೋಷವಾಗುತ್ತೆ, ಎಂದರೆ ಬೇಡ ಅನ್ನುತ್ತೇನೆಯೇ? ನನ್ನ ಮಟ್ಟಿಗೆ ಆದರೆ ಯಾವ ಊರಿನಲ್ಲಿದ್ದರೂ ಸೈ ಎನ್ನುತ್ತೇನೆ. ಎಲ್ಲಿಗೆ ಹೋದರೂ ಜನರ ಸೇವೆ ಮಾಡುತ್ತೇನೆ. ಅವರು ಇವರು ಎಂದು ನನಗೇನೂ ಭೇದ ಭಾವವಿಲ್ಲ. ಸುತ್ತುಮುತ್ತಲಿರುವ ಜನರ ಮನಸ್ಸು ಸಂತೋಷವಾದರೆ ನನಗೂ ಸಂತೋಷ" ಎಂದೇ ಹೇಳುತ್ತಿದ್ದ.

ಏನೂ ತಿಳಿಯದೆ ಹೇಳುತ್ತಿದ್ದನೋ ಅಥವಾ ಎಲ್ಲವನ್ನೂ ಅರಿತು ಆಡುತ್ತಿದ್ದನೋ ದೇವರೇ ಬಲ್ಲ.

"ಏನಾದರೂ ಅನ್ನಪ್ಪ! ಆದರೆ ನಾವು ಹೇಳಿದ ಹಾಗೆ ಕೇಳು. ನಮ್ಮ ಸಂತೋಷವೇ ನಿನ್ನ ಗುರಿಯಾಗಿರಲಿ" ಎಂದು ನಾವೂ ಅವನನ್ನು ತಬ್ಬಿಕೊಂಡು ಹೇಳಿದ್ದೆವು.

ಗುಂಡಯ್ಯನನ್ನು ಡಾಕ್ಟರು ಪರೀಕ್ಷೆ ಮಾಡಿದರು. ಹೊಟ್ಟೆ ನುಲಿಯುತ್ತೆ ಸಾರ್ ಎಂದಿದ್ದ ಗುಂಡಯ್ಯ. ವಾಕರಿಕೆ ಬರುತ್ತೆ ಸಾರ್ ಎಂದಿದ್ದ ಗುಂಡಯ್ಯ. ಹೊಟ್ಟೆಯಲ್ಲಿ ಗುಂಡಕಲ್ಲು ಇಟ್ಟು ತಿರುವಿದ ಹಾಗೆ ಆಗುತ್ತೆ ಸಾರ್ ಎಂದಂದ ಗುಂಡಯ್ಯ. ನಾವು ಹೇಳಿಕೊಟ್ಟಿದ್ದನ್ನೆಲ್ಲಾ ಗುಂಡಯ್ಯ ತದ್ರೀತಿ ಹೇಳಿದ. ಮುಖವನ್ನು ಆಗಾಗ್ಗೆ ಶಿಂಡರಿಸಿಕೊಂಡು ಹೇಳಿದ.

ಪರೀಕ್ಷೆ ಮುಗಿದನಂತರ ತಮ್ಮ ವರದಿಯನ್ನು ಪೋಲೀಸ್ ಕಮೀಷನರಿಗೆ ತಾವೇ ಕಳಿಸುವುದಾಗಿ ಡಾಕ್ಟರು ಹೇಳಿದರು.

ವಂದನೆಗಳನ್ನು ಅರ್ಪಿಸಿ ಗುಂಡಯ್ಯನನ್ನು ಕರೆದುಕೊಂಡು ಹಿಂದಕ್ಕೆ ಬಂದೆವು.

ಮಂಗಳವಾರ ಪೋಲೀಸ್ ಕಮೀಷನರ್ ಕಚೇರಿಯಿಂದ ಗುಂಡಯ್ಯನಿಗೆ ಪತ್ರ ಬಂತು. ಗುಂಡಯ್ಯ, ಪಾಪ, ಅತಿಸಾರ ಎತ್ತಿ ಮನೆಯಲ್ಲಿ ಮಲಗಿದ್ದ, ರಜ ಪಡೆದು. ಕಮೀಷನರ್ ಕಾಗದವನ್ನು ತೆಗೆದುಕೊಂಡು ನಾನೇ ಗುಂಡಯ್ಯನ ಮನೆಗೆ ಹೋದೆ. "ಓದಿ ಹೇಳಿ ಸಾರ್! ಇಂಗ್ಲೀಷ್ ಬರುಲ್ಲ" ಎಂದ ಅವ. ಕಾಗದವನ್ನು ಒಡೆದೆ.

ಡಾಕ್ಟರ ಹತ್ತಿರ ಹೋಗಿ ಸುಳ್ಳು ಸುಳ್ಳು ಖಾಯಿಲೆ ಅಂತ ಹೇಳಿ ರಜ ಪಡೆಯಲು ಯತ್ನಿಸಿದ ಮಹಾಪರಾಧಕ್ಕಾಗಿ ಮೂರು ವಾರ ಸಜಾ ಹಾಕಲಾಗಿದೆ ಎಂದಿತ್ತು ಕಮೀಷನರ ಆರ್ಡರ್!

ಒಂದು ರೀತಿಯಲ್ಲಿ ನನಗೆ ಖುಷಿಯಾಯಿತು. ಮೂರು ವಾರ ಸಜಾ ಅಂದರೆ ಇಲ್ಲೇ ಇರುತ್ತಾನೆ. ಆ ವೇಳೆಗೆ ನಾಗಯ್ಯ ಹೊಸ ಊರನ್ನು ತಲುಪಿ ಒಂದೆರಡು ವಾರಗಳಾದರೂ ಆಗಿರುತ್ತೆ. ಗುಂಡಯ್ಯ ನಮಗೆ ಉಳಕೊಂಡ ಎಂಬ ಸಂತೋಷ.

ಮೂರು ದಿನಗಳೂ ನಾವೆಲ್ಲ ಗುಂಡಯ್ಯನ ಆರೈಕೆಯನ್ನು ಮಾಡಿದೆವು. ಅವನೂ ಬೇಗ ಹುಷಾರಾದ. ಹೇಗೂ ಸಜಾದ ರಜಾ ಇದೆ. ತಿರುಪತಿಗೆ ಹೋಗಿ ಬರ್ತೀನಿ ಎಂದು ತಿರುಪತಿಗೆ ಹೋಗಿ ತಲೆಯನ್ನು ಕಲಾಯಿ ಮಾಡಿಸಿಕೊಂಡು ಬಂದ.

ಡಾಕ್ಟರನ್ನು ನಾನು ಹೋಗಿ ನೋಡಬೇಕಾಗಿ ಬಂದಿತ್ತು. ಅವರ ಆಸ್ಪತ್ರೆ ಲೆಕ್ಕಗಳನ್ನು ನಾನು ಆಡಿಟ್ ಮಾಡಬೇಕಾಗಿತ್ತು. ಈಗ ಇವರಿಗೆ ಚಳ್ಳೆಹಣ್ಣು ತಿನ್ನಿಸುತ್ತೀನಿ ಎಂದು ಅಂದಾಜು ಮಾಡಿಕೊಂಡು ಹೋದೆ.

"ಬಾಪ್ಪ, ಬಾ" ಎಂದು ತಮ್ಮ ಕೊಠಡಿಗೆ ಕರೆದುಕೊಂಡು ಹೋದರು.

"ಅವತ್ತು ನೀವೆಲ್ಲ ಬಂದಿದ್ದರಲ್ಲ, ಗುಂಡಯ್ಯನ ವಿಷಯ ಹೇಳುಕ್ಕೆ, ಆ ರಾತ್ರಿ ಪೋಲೀಸ್ ಕಮೀಷನರು ನಮ್ಮನೆಗೆ ಬಂದಿದ್ದರು, ನಡೆದ ವಿಚಾರವನ್ನೆಲ್ಲಾ ತಿಳಿಸಿದೆ. ಅಲ್ಮೈರಾದಲ್ಲಿ ಇದ್ದಿದ್ದೆಲ್ಲಾ ಮುಗಿಯುವ ಹೊತ್ತಿಗೆ ಇಬ್ಬರೂ ನಕ್ಕುನಕ್ಕು ಕುಪ್ಪಳಿಸುತ್ತಾ ಇದ್ದೆವು. ಆಗಲೇ ಆತ ಸಲಹೆ ಮಾಡಿದ. ಸತ್ಯವನ್ನೇ ನೀನು ಬರಿ. ಸಜಾ ಹಾಕಿ ಮೂರು ವಾರ ಇಲ್ಲೇ ಇರೋ ಹಾಗೆ ಮಾಡ್ತೀವಿ. ನಾಗಯ್ಯ ಅತ್ತ ಹೋದರೆ ಇತ್ತ ಸಜಾ ಆರ್ಡರನ್ನು ವಾಪಸ್ ಪಡೀತೀನಿ. ಇಲ್ಲದೆ ಹೋದರೆ ನಾಗಯ್ಯ ಇನ್ನೇನಾದರೂ ವಿಷ ಇಟ್ಟಾನು. ಅವನ ಸೋದರಮಾವ ಮಂತ್ರಿ ಗೊತ್ತಲ್ಲ!" ಎಂದ. ಹಾಗೇ ಮಾಡಿದೆ ನಾನು. "ನಿಮ್ಮ ಕೆಲಸ ಆಯಿತಲ್ಲ" ಎಂದರು.

ಒಳ್ಳೆಯವರು ಡಾಕ್ಟರು. ಆಸ್ಪತ್ರೆ ಲೆಕ್ಕದಲ್ಲಿ ಹುಳುಕೇ ಸಿಗಲಿಲ್ಲ.

ನಾಗಯ್ಯ ಈಗ ಎಲ್ಲೋ ಹೆಡೆಯಾಡಿಸುತ್ತಿರಬಹುದು, ಆಡಿಸಿಕೊಳ್ಳಲಿ. ಆದರೆ ಅವರ ಜಾಗಕ್ಕೆ ಬಂದಿರುವ ಗರುಡೈಯ್ಯಂಗಾರ್ಯರು ನಮ್ಮ ಜತೆ ಮಸಾಲೆ ನೀರುಮಜ್ಜಿಗೆಯನ್ನು ಚಪ್ಪರಿಸುತ್ತಾ ಕುಡಿಯುತ್ತಿದ್ದಾರೆ. ನಮಗಿಂತ ಜೋರಾಗಿ ಲೊಟ್ಟೆ ಹೊಡೆಯುತ್ತಾರೆ.



# ಕೊಠಡಿ ನಂಬ್ರ ೪೨೦

"ರಾಜೀವಪುರಕ್ಕೆ ಹೋದಾಗ ಅಲ್ಲಿ ಇಲ್ಲಿ ಉಳಕೋಬ್ಯಾಡ. ರೈಲ್ವೆ ಸ್ಟೇಷನ್ನಿನಿಂದ ನೇರ ಕರ್ಣಾಟಕ ಆನಂದ ನಿಲಯಕ್ಕೆ ಒಂದು ಟ್ಯಾಕ್ಸಿ ಗೊತ್ತು ಮಾಡಿಕೋ! ಆ ಹೋಟಲಿನಲ್ಲಿ ಉಳಕೊ ಅಲ್ಲಿ ನಮ್ಮ ತರಹಾ ಭಕ್ರೀನೆ ಕೊಡ್ತಾರೆ. ಹೋಟಲ ಖರ್ಚಿಗೆ ಹೆದರಬೇಡ, ಸೊಸಾಯಿಟಿ ಇಂದ ಖರ್ಚನ್ನೆಲ್ಲ ಕೊಡಿಸುತ್ತೇನೆ. ಕರ್ಣಾಟಕ ಆನಂದ ನಿಲಯದ ಹತ್ತಿರವೇ ಟ್ಯಾಕ್ಸಿ ಸ್ಟ್ಯಾಂಡ್ ಇದೆ ಅಂದಮೇಲೆ ವಿನೋದ ಸೌಧಕ್ಕೆ ಹೋಗಿ ಬರಲು ಕಾಳಜಿ ಆಗುಲ್ಲ. ಕೆಲಸ ಮುಗಿದ ಮೇಲೆ ಊರಲ್ಲಿ ನಿಲ್ಲಬ್ಯಾಡ, ಬಲು ಕೆಟ್ಟ ಊರು ಅದು, ಕಿಸೆಯ ತಳವನ್ನೇ ಹರಿದುಬಿಡ್ತಾರೆ, ಅಲ್ಲಿ."

ಎಂದು ಹೆಬ್ಬಿಗುಬ್ಬಾಲೆಯನ್ನು ಬಿಡುವಾಗಲೇ ಸೊಸಾಯಿಟಿ ಕುಲಕರ್ಣಿಯವರು ಬುದ್ಧಿವಾದ ಹೇಳಿದ್ದರು. ಮೊದಲಸಲ ರಾಜೀವಪುರಕ್ಕೆ ನಾನು ಹೋಗುತ್ತಿದ್ದುದರಿಂದ.

ಅವರೇ ನನಗೆ ಸಲಹಾ ಕೊಟ್ಟದ್ದು, "ನೋಡಪಾ, ಪಾಟೀಲ್. ಈಗ ಚುನಾವಣಾ ಗಲಾಟಾ ಐತಿ. ಇಲ್ಲಿಂದ ಅಪ್ಲಿಕೇಷನ್ ಮುಟ್ಟಿಸಿದರೆ, ಅದನ್ನು ಕಚೇರಿಯಲ್ಲಿ ನೋಡೋರೂ ಯಾರೂ ಇರುಲ್ಲ. ಆದ್ದರಿಂದ ನೀನೇ ಹೋಗಿ ಅಪ್ಲಿಕೇಷನ್ ಹಿಂದೆ ಕಚೇರಿಯಲ್ಲಿ ಸುತ್ತಬೇಕು. ಅದನ್ನು ಮುಂದುಮುಂದಕ್ಕೆ, ಮೇಲೆ ಮೇಲಕ್ಕೆ ಹೋಗುವಂತೆ ಮಾಡಬೇಕು. ಅಲ್ಲಿನ ರಾಜಭವನದಲ್ಲಿ ಹೇಗೂ ನಿನ್ನ ವೈನಿ ಗಂಡ ಅಡಿಗೆ ಕೆಲಸಕ್ಕಿದ್ದಾನೆ. ಅವನ ವಶೀಲಿ ಪಡೆದು, ಕಚೇರಿ ಕಾರಖೂನರ ಕತ್ತಿನ ಮೇಲೆ ಕೂತು, ಅಂಗೈಗೆ ಜಿಡ್ಡು ಹಚ್ಚಿ, ಸ್ಯಾಂಕ್ಷನ್ ಆರ್ಡರ್ ಬರೆಸಿಕೊಂಡು ಬಾ. ಊರಿನವರಿಗೆಲ್ಲ ಈ ಸುದ್ದಿ ಗೊತ್ತಾದರೆ, ಅವರಲ್ಲಿ ಯಾರೂ ಹೊಟ್ಟೆಕಿಚ್ಚಿನಿಂದ, ಈ ಸಾಲವು ಸರ್ಕಾರದಿಂದ ನಮಗೆ ಸಿಗದೆ ಇರುವ ಹಾಗೆ ಕಾರುಭಾರು ಮಾಡೇ ಮಾಡ್ತಾರ" ಅಂತ. ಆಗಲಿ ಅಂತ ನಾನೊಪ್ಪಿ, ನಮ್ಮ ವೈನಿ ಗಂಡನಿಗೆ ಒಂದು ಪತ್ರ ಬರೆದು ಹಾಕಿ ರಾಜೀವಪುರಕ್ಕೆ ಹೊರಡೋವಾಗ ರೈಲ್ವೆ ಸ್ಟೇಷನ್ನಿನಲ್ಲಿ, ಸೊಸಾಯಿಟಿ ಕುಲಕರ್ಣಿಯವರು ತಾವೇ ಬಂದು ಬೀಳ್ಕೊಟ್ಟಿದ್ದರು.

ರಾಜೀವಪುರದ ರೈಲ್ವೆ ನಿಲ್ದಾಣದಲ್ಲಿ ಇಳಿದಾಗ, ಜಟ್ಕಾದವರು ಸುತ್ತ ಮುತ್ತಿದರು. ಅವರ ಹಿಂದೆ ಟ್ಯಾಕ್ಸಿಯವರು ಟ್ಯಾಕ್ಸಿ ಟ್ಯಾಕ್ಸಿ ಅಂತ ಕೂಗುತ್ತ ಮೊದಲನೆ ಮತ್ತು ಎರಡನೆ ತರಗತಿಯ ಡಬ್ಬಿಗಳ ಬಳಿ ಸುಳಿದಾಡುತ್ತಿದ್ದರು. "ಕರ್ಣಾಟಕ ಆನಂದ ನಿಲಯಕ್ಕೆ ಯಾರು ಬರ್ತೀರಿ" ಎಂದು ನಾನು ಕೂಗಿದಾಗ ಒಬ್ಬ ಟ್ಯಾಕ್ಸಿ ಡ್ರೈವರು ಮುಂದೋಡಿ ಬಂದ. ನನ್ನ ಟ್ರಂಕು ಹಾಸಿಗೆಯನ್ನು ಅವನೇ ಎತ್ತಿಕೊಂಡ. "ಬರ್ರೀ! ಸಾಹೇಬ್ರ. ನಾ ಮುಟ್ಟಿಸ್ತೀನಿ" ಎಂದ. ಅವನನ್ನು ಹಿಂಬಾಲಿಸಿದೆ. ಅವನ ಟ್ಯಾಕ್ಸಿಯಲ್ಲಿ ಕುಳಿತೆ. ಹೋಟೆಲ್ ಮುಂದೆ ಟ್ಯಾಕ್ಸಿ ನಿಲ್ಲಿಸಿ, ಡ್ರೈವರ್ ಇಳಿದು ನನ್ನ ಕಡೆಯ

ಬಾಗಿಲನ್ನು ತೆರೆದ. ಇಳಿದು ಹೋಗಿ ಹೋಟೆಲ್ ಹೊರ ಅಂಗಳದಲ್ಲಿದ್ದ ಮೇಜಿನ ಬಳಿ ಹೋಗಿ ಅಲ್ಲಿದ್ದವನಿಗೆ,

"ನನ್ನ ಹೆಸರು ವ್ಹಾಯ್. ಎಸ್. ಪಾಟೀಲ್ ಅಂತ. ಹೆಬ್ಬಿಗುಬ್ಬಾಲೆಯಿಂದ ಬಂದೀನಿ. ಎರಡು ಮೂರು ದಿನಕ್ಕ ಕೊಠಡಿಯೊಂದನ್ನು ಕೊಡ್ರಿ" ಎಂದೆ.

ಕೂತಿದ್ದ ಕುರ್ಚಿಯಿಂದ ಹೋಟೆಲ್ ಮ್ಯಾನೇಜರು ತಟ್ಟನೆ ಜಿಗಿದ. ತಾನೇ ಖುದ್ದಾಗಿ ಬಂದು, ಟ್ಯಾಕ್ಸಿಯಲ್ಲಿದ್ದ ಟ್ರಂಕು ಹಾಸಿಗೆಯನ್ನು ತೆಗೆಸಿ, "ಕೊಠಡಿ ನಂಬ್ರ ೪೨೦ ಚಲೋ ಐತ್ರಿ. ಅದನ್ನೇ ನಿಮಗೆ ಬಿಡುವು ಮಾಡ್ತೀನಿ" ಎಂದ. ಮಾಣಿಯನ್ನು ಕರೆದು, "ಸಾಹೇಬ್ರನ್ನ ಕರಕೊಂಡು ಹೋಗು. ಕೊಠಡಿ ನಂಬ್ರ ೪೨೦ಕ್ಕೆ" ಅಂತ ಹೇಳಿದ. ನಂತರ ನಮಸ್ಕಾರ ಮಾಡಿ ತನ್ನ ಮೇಜಿನ ಬಳಿಗೆ ಹೋದ.

ಕೊಠಡಿ ನಂಬ್ರ ೪೨೦ಕ್ಕೆ ಮಾಣಿ ನನ್ನನ್ನು ಕರಕೊಂಡು ಹೋದ. ಮಹಡಿಯ ಒಂದು ತುದಿಯಲ್ಲಿ ಅಲಾಯಿದ ಇದ್ದ ಆ ಕೊಠಡಿಯು ಸುಮಾರು ದೊಡ್ಡದಾಗಿತ್ತು. ಕುರ್ಚಿ, ಮೇಜು ಚಲೋದಿತ್ತು. ಮಂಚ ಹಾಸಿಗೆ ಮೇಜಿದ್ದವು. ಬಟ್ಟೆಬರೆ ಇಡಲು, ಧರಿಸಲು ಒಳಕೋಣೆಯೊಂದಿತ್ತು. ಭರ್ಜರಿಯಾದ ನಿಲುವುಗನ್ನಡಿ!

ಪರವಾಗಿಲ್ಲ ಹೋಟಲು. ಆದರೆ ಬಲು ದುಬಾರಿ ಆದೀತೋ ಎಂದಂದುಕೊಂಡೆ. ಝಳಕ ಮಾಡಿ, ಜುಬ್ಬಾ ಹಾಕ್ಕೊಂಡು ಕುರ್ಚಿ ಮೇಲೆ ಕೂತೆ. ವಿನೋದಸೌಧಕ್ಕೆ ಹೋಗುವ ಮುಂಚೆ, ಕಾಗದ ಪತ್ರಗಳನ್ನು, ಚಿಲ್ಲರೆ ಪಲ್ಲರೆಗಳನ್ನೂ ಸರಿಮಾಡಿಕೊಳ್ಳಲು ಹ್ಯಾಂಡ್‌ಬ್ಯಾಗನ್ನು ತೆರೆದೆ.

ಅಷ್ಟರಲ್ಲೇ ಹಗುರಾಗಿ ಬಾಗಿಲನ್ನು ಯಾರೋ ತಟ್ಟಿದರು. 'ಬರ್ರಿ' ಎಂದೆ ಬಾಗಿಲು ನೂಕಿಕೊಂಡು ಮಾಣಿ ಬಂದ. ಎರಡು ಸಿಹಿ, ಎರಡು ಖಾರ, ಕಾಫಿ ಹಣ್ಣು ಎಲ್ಲವನ್ನೂ ತಂದಿದ್ದ. ಇಷ್ಟೆಲ್ಲಾ ಬ್ಯಾಡ. ಮುಂಜಾನೆ ಉಣ್ಣೋ ಅಭ್ಯಾಸ ಇಲ್ಲ. ಬರೀ ಚಹಾ ಒಂದು ಕಪ್ಪು ಸಾಕು ಎಂದೆ. ಆದಷ್ಟು ಖರ್ಚು ಕಡಿಮೆ ಮಾಡೋಣ ಅಂತ ಆಸೆ. "ಈ ಕೊಠಡೀಗೆ ಮಾಮೂಲಾಗಿ ಸರಬರಾಜು ಮಾಡೋದನ್ನೇ ತಂದಿದ್ದೇನೆ ಸಾಹೇಬ್ರ. ಯಜಮಾನ್ರೇ ಹಾಗೆ ಕಟ್ಟಳೆ ಮಾಡಿದ್ದಾರೆ. ಇನ್ನೂ ಏನಾರ ಬೇಕಾದರೆ ಕೇಳ್ರಲ್ಲ. ಅಥವಾ ಇಲ್ಲಿಂದಲೇ ಫೋನ್ ಮಾಡಿ, ತತ್‌ಕ್ಷಣ ತಂದು ಕೊಡ್ತೀವಿ" ಎಂದ ಆ ಮಾಣಿ.

ಸಿಕ್ಕಿದ್ದನ್ನು ಯಾಕೆ ಬಿಡಬೇಕು! ತಿಂದು ಮೆದ್ದೇಬಿಡೋಣ ಅಂತ ಗಡದ್ದಾಗಿ ತಿಂದೆ. ನಂತರ ಕಾಗದಪತ್ರಗಳಿದ್ದ ಹ್ಯಾಂಡ್‌ಬ್ಯಾಗನ್ನು ಹಿಡ್ಕೊಂಡು ಹೋಟಲಿನ ದೊಡ್ಡ ಬಾಗಿಲ ಬಳಿ ಇಳಿದು ಹೋದೆ. ನನ್ನನ್ನು ಕಂಡಕೂಡಲೇ ಮ್ಯಾನೇಜರು ಓಡಿಬಂದ. "ಎಲ್ಲಿಗೆ ಹೋಗಬೇಕಾಗಿತ್ತು, ಸಾಹೇಬ್ರು" ಎಂದ. "ರಾಜಭವನಕ್ಕೆ ಮೊದಲು ಹೋಗಬೇಕು, ಆಮೇಲೆ ವಿನೋದಸೌಧಕ್ಕೆ" ಎಂದೆ. ಹತ್ತಿರ ಇಲ್ಲೇ ಟ್ಯಾಕ್ಸಿ ಸಿಗುತ್ತದಂತಲ್ಲ, ಎಲ್ಲಿ?" ಎಂದೂ ಕೇಳಿದೆ. "ಟ್ಯಾಕ್ಸಿ ಯಾಕೆ ಸಾಹೇಬ್ರ! ನಮ್ಮ ಮೋಟಾರೇ ಇದೆ. ಅದನ್ನೇ ದಯವಿಟ್ಟು ಉಪಯೋಗಿಸಬೇಕು" ಎಂದ ಮ್ಯಾನೇಜರ್. ಎಲಾ ಇವನ! ಇವ ಯಾಕೆ ನನ್ನ ಸಾಹೇಬ್ರ ಅಂತಾನೆ? ಹೋಟಲಿನ ಮೋಟಾರನ್ನೇ ಮುಂದಿಡ್ತಾ ಇದಾನೆ! ಎಂದು ಅರೆಕ್ಷಣ ಅನುಮಾನ ಬಂತು. ಆದರೆ ಹೋಟೆಲಿನ ಮೋಟಾರು ಕೊಟ್ಟು ಅದಕ್ಕೂ ಟ್ಯಾಕ್ಸಿ ಬಾಡಿಗೆ ಜಡೀತಾನೇನೋ ಎಂದೂ ಅಂದುಕೊಂಡೆ.

ಆದರೂ ರಾಜೀವಪುರದ ಮೋಜು ನನಗೇನು ತಿಳಿಯೋದು? ಬಿಲ್ಲನ್ನು ಇವರು ಎಷ್ಟೇ ಉಬ್ಬಿಸಲಿ? ನನ್ನ ಹತ್ತಿರ ಇರೋದೇ ಐವತ್ತು ರೂಪಾಯಿ. ಊರಿಗೆ ಹಿಂತಿರುಗೋಕ್ಕೆ ಟಿಕೇಟ್ ಕೊಂಡಾಗಿದೆ. ಟ್ರಂಕು ಹಾಸಿಗೆ ಹಿಡಿದಿಟ್ಟುಕೊಂಡರೂ ಅದರಲ್ಲಿರೋ ಖದ್ದರ್ ಎಲ್ಲಾ ೩೦-೪೦ ರೂಪಾಯಿ ಆಗಲ್ಲ. ಅಂದರೆ ಹಣ ಸಾಲದೆ ಬಂದರೆ ನಾನು ಕಳಕೊಳ್ಳೋದಾದರೂ ಏನು? ಮಾನ ಹೋಗಬಹುದು. ಆದರೆ ಮಾನ ಮರ್ಯಾದೆ ಅಂತ ಕಾಳಜಿ ಮಾಡೋರು ವಿನೋದಸೌಧಕ್ಕೆ ಹೋಗ್ತಾರಾ? ಕಂಡ ಕಂಡ ಕಂಬದ ಕಾಲು ಕಟ್ತಾರ್ಯಾ? ಹೀಗೆಲ್ಲಾ ಯೋಚನೆ ಮಾಡಿ, ಅವನು ಆ ವೇಳೆಗೆ ತರಿಸಿದ ಮೋಟಾರಿನಲ್ಲಿ ಕುಳಿತೆ. ರಾಜಭವನಕ್ಕೆ ಹೋಗಿ, ವೈನಿ ಗಂಡನನ್ನು ಹಿಡಿದೆ. ಅವನನ್ನೂ ಕರಕೊಂಡು ವಿನೋದಸೌಧಕ್ಕೆ ಹೋದೆ. ನಮ್ಮ ವೈನಿ ಗಂಡನಿಗೆ ಅದೇನು ವಶೀಲಿ ಇದೆ ಅಂತ! ಸಂಬಂಧಪಟ್ಟವರೆಲ್ಲಾ ಚಟ್‌ಪಟ್ ಅಂತ ಕೆಲಸ ಮಾಡಿ, ಸಾಲವನ್ನೂ ಮಂಜೂರು ಮಾಡಿ, ಆ ಆರ್ಡರಿನ ಪ್ರತಿಯೊಂದನ್ನು ನನಗೆ ಕೊಟ್ಟರು. ಅದನ್ನು ಹ್ಯಾಂಡ್‌ಬ್ಯಾಗಿಗೆ ಹಾಕಿ, ವೈನಿ ಗಂಡನನ್ನು ರಾಜಭವನದಲ್ಲಿ ಇಳಿಸಿದೆ. ವೈನಿ ಹುಟ್ಟಿದ ಹಬ್ಬ ಯಾವತ್ತು? ಆ ವೇಳೆಗೆ ಉಡುಗೊರೆ ಕಳಿಸಬೇಕು ಎಂದೆ. ವೈನಿಯ ಹುಟ್ಟು ಹಬ್ಬದ ತಾರೀಖನ್ನು ವೈನಿ ಗಂಡ ಹೇಳಿದ. ಅದನ್ನು ಗುರ್ತು ಮಾಡಿಕೊಂಡು, ಕರ್ಣಾಟಕ ಆನಂದ ನಿಲಯಕ್ಕೆ ಹಿಂತಿರುಗಿದೆ. ಬಂದ ಕೆಲಸ ಬೇಗ ಆಯಿತು. ಕುಲಕರ್ಣಿಯವರು ಅಂದಹಾಗೆ ಈ ರಾತ್ರಿ ಹಿಂದಿರುಗೋದು ಚಲೋ! ಅಂತ ಅಂದುಕೊಂಡು ಮ್ಯಾನೇಜರಿಗೆ ಹೇಳಿದೆ. "ರಾಯರೇ! ಬಂದ ಕೆಲಸ ಆಯಿತು. ರಾತ್ರಿ ನಮ್ಮೂರಿಗೆ ಹಿಂದಿರುಗುವವನಿದ್ದೇನೆ. ಸಂಜೆ ರೈಲ್ವೆ ಸ್ಟೇಷನ್ನಿಗೆ ಹೋಗಲು ಟ್ಯಾಕ್ಸಿಯನ್ನೋ ಅಥವಾ ಕಾರನ್ನೋ ಕೊಟ್ಟರೆ ಆಭಾರಿ" ಎಂದೆ.

"ಮುಂಜಾನೆ ಬಂದಿರಿ! ಸಂಜೇಗೆ ಹಿಂದಿರುಗಿಸೋಣ ಅಂದ್ರೆ ಹ್ಯಾಗೆ ಸಾಹೇಬ್ರ" ಎಂದು ಹೇಳಿ ಮ್ಯಾನೇಜರು ಮುಖ ಉದ್ದ ಮಾಡಿದ. "ಎಲಾ ಇವನ! ಬೇಕಾದಾಗ ಬಂದು ಬೇಕಾದಾಗ ಹೋಗೋಕ್ಕೆ ಇವ ಯಾಕೆ ಅಡ್ಡಿ ಬರ್ತಾನೆ? ಇವನೇನು ನನಗೆ ಬೀಗನಾ? ಅಥವಾ ಇದೇನಾದ್ರೂ ಜೈಲಾ? ಎರಡು ಮೂರು ದಿನ ಇರಬೇಕಾದೀತು ಅಂದಿದ್ದೆ. ಅದಕ್ಕೆ ಮೊದಲೇ ಹೊರಟು ಹೋದರೆ ಅಷ್ಟೂ ದಿನಗಳ ಬಾಡಿಗೆ ಕೊಡು ಅಂತ ಅನ್ನಬಹುದು. ಅಷ್ಟೇ, ಹೊರತು, ಇಷ್ಟು ಬೇಗ ಯಾಕೆ ಹೋಗ್ತೀರಿ ಅಂತ ಅಳುಮುಖ ಮಾಡ್ತಾನಲ್ಲ. ಇದರ ಮರ್ಮವೇನು?" ಎಂದು ಮನಸ್ಸಿನಲ್ಲಿ ಹೊಳೀತು. ಬಾಯಿ ಬಿಟ್ಟು ಹೇಳೋಣ ಅಂತಿದ್ದೆ.

ಅಷ್ಟರಲ್ಲೇ ಅವ "ಅಲ್ಲ ಸಾಹೇಬ್ರ! ಇವತ್ತು ರಾತ್ರಿ ನಮ್ಮೂರ್ರಾಗೆ ಭರ್ಜರಿ ನಾಟಕ ಇದೆ. ನಿಮಗೆ ಅಂತ ಸೀಟ್ ರಿಸರ್ವ್ ಮಾಡ್ಸೀನಿ: ಅಗ್ದೀ ಚಲೋ ನಾಟಕ ಅದು. ಶ್ರೀಮತಿ ಗಾನಗಲ್ ಅವರೇ ಪಾರ್ಟ್ ಮಾಡ್ತಾರೆ. ರಾತ್ರಿ ಇಲ್ಲೇ ಉಂಡು, ನಾಟಕ ನೋಡಿಕೊಂಡು, ನಾಳೆ ಮುಂಜಾನೆ ಊರಿಗೆ ಹೋಗಬಹುದಲ್ಲ. ನಿಮಗೋಸ್ಕರ ರಾತ್ರಿ ಫೀಸ್ಟ್ ಊಟ ಏರ್ಪಾಡು ಮಾಡೀನಿ" ಎಂದು ಬಲು ವಿನಯದಿಂದ ಹೇಳಿಕೊಂಡ.

ಈ ಊರಿನವರು ಎಷ್ಟು ಸೌಜನ್ಯವಂತರಪ್ಪ. ಈ ಷಹರಿನ ಹೋಟೆಲಿನವರಿಗೂ ಕೂಡ ಎಷ್ಟು ನಯ, ವಿನಯ ಇದೆಯಪ್ಪಾ! ಬಂದ ಅತಿಥಿಗಳನ್ನು ಎಷ್ಟು ಆದರದಿಂದ ಉಪಚರಿಸುತ್ತಾರಪ್ಪ!

ನಮ್ಮ ಹೆಬ್ಬಿಗುಬ್ಬಾಲೆ ಹೋಟೆಲಿನವರು ಇವರ ಎದುರಿನಲ್ಲಿ ಕಾಡು ಕಿರುಬಗಳಿದ್ದ ಹಾಗೆ ಎನ್ನಿಸಿತು. ಹಾಗೇ ಆಗಲಿ, ಅದಕ್ಕೇನಂತೆ ಎಂದು ಸಮ್ಮತಿ ಕೊಟ್ಟೆ. ನನ್ನ ಕೊಠಡಿಗೆ ಹೋದೆ.

ರಾತ್ರಿ ಪುಷ್ಕಳವಾದ ತರಹಾವರಿಯಾದ ಆರು ಭೋಜ್ಯಗಳಿದ್ದ ಊಟವನ್ನು ಕೊಠಡಿಯಲ್ಲೇ ಬಿಸಿಬಿಸಿಯಾಗಿ ತಂದು ಬಡಿಸಿದರು. ಒತ್ತಾಯದ ಉಪಚಾರ ಮಾಡಿ ಸುಮಾರು ತಿನ್ನಿಸಿದರು. ಊಟವಾದ ಮೇಲೆ ಎಲೆ ಅಡಿಕೆ ತಂದುಕೊಟ್ಟರು. ಮೋಟಾರು ಸಿದ್ಧವಾಗಿದೆ. ನಾಟಕಕ್ಕೆ ಹೊರಡುತ್ತೀರಾ ಎಂದು ಡ್ರೈವರನು ಬಂದು ಬಿನ್ನವಿಸಿಕೊಂಡ. ನಾಟಕಕ್ಕೆ ಹೋದೆ. ಮುಂದುಗಡೆ ಸೋಫಾದಲ್ಲಿ ನನ್ನನ್ನು ಕುಳ್ಳಿರಿಸಿದರು. ನಾಟಕದ ಅಂಕಗಳ ಮಧ್ಯೆ ತಂಪಾನೀಯಗಳನ್ನು ತಂದುಕೊಟ್ಟರು, ಎಷ್ಟಪ್ಪಾ ಇದಕ್ಕೆ ಎಂದು ಜೇಬಿಗೆ ಕೈ ಹಾಕಿದಾಗ, "ಛೇ, ಛೇ ನೀವು ಇದಕ್ಕೆ ರೊಕ್ಕ ಕೊಡಬೇಕಾ ಸಾಹೇಬ್ರ! ಕಂಪನಿ ಯಜಮಾನ್ರ ಆತಿಥ್ಯ ಇದು" ಎಂದಂದ ಆ ಹುಡುಗ. ಇದೇನು ಕನಸು ಬಿದ್ದಿದ್ದೇನೋ ಅಥವಾ ಇಂದ್ರಜಾಲದಲ್ಲಿ ಸಿಕ್ಕಿಕೊಂಡಿತೇನೋ, ಎಂದು ತಲೆ ಕೆರೆದುಕೊಂಡೆ. ನಾಟಕ ಚೆನ್ನಾಗಿತ್ತು. ಶ್ರೀಮತಿ ಗಾನಗಲ್ ಎಳಕಾಗಿದ್ದಳು. ಮುಗಿದಮೇಲೆ ಕೊಠಡಿ ನಂಬ್ರ ೪೨೦ಕ್ಕೆ ಹಿಂತಿರುಗಿದೆ.

ಆಗ ನಿಶಿರಾತ್ರಿಯಾಗಿತ್ತು. ಸೌಜನ್ಯವಂತ ಹೋಟಲಿನವರು ಇನ್ನೂ ಯಾವುದಾದರೂ ಉಪಚಾರ ಮಾಡೋಕ್ಕೆ ಬಂದರೆ, ಖಂಡಿತ ಸಾಧ್ಯವಿಲ್ಲ ಅಂತ ಖಡಾಖಂಡಿತವಾಗಿ ಹೇಳಿಬಿಡಬೇಕು. ಬೆಳಿಗ್ಗೆ ಬೇಗ ಎದ್ದು ರೈಲಿಗೆ ಹೋಗಬೇಕು ಎಂದು ನಿರ್ಧರಿಸಿಕೊಂಡೆ. ಆದರೆ ನನ್ನ ಪುಣ್ಯ! ಅಂತಹಾ ಉಪಚಾರದ ಸೂಚನೆಗಳೇನೂ ಕಾಣಲಿಲ್ಲ. ಡ್ರೈವರನು ಸಲಾಂ ಹೊಡೆದು, "ಬೆಳಿಗ್ಗೆ ಆರೂವರೆ ಗಂಟೆಗೆ ಬರ್ತೀನಿ. ಏಳಕ್ಕೆ ರೈಲು ಹೊರಡುತ್ತೆ, ಆಗಬಹುದೆ?" ಎಂದು ಹೇಳಿ ಅಸ್ತು ಅನ್ನಿಸಿಕೊಂಡು ಹೊರಟುಹೋದ.

ಬೆಳಗಿನಿಂದ ನನ್ನ ಹಾಸಿಗೆಯನ್ನು ಬಿಚ್ಚೇ ಇರಲಿಲ್ಲ. ಹೋಟಲಿನಲ್ಲಿದ್ದ ಹಾಸಿಗೆಯ ಮೇಲೆ ಮಲಗಿದರೆ, ಮುಂಜಾನೆ ನನ್ನ ಹಾಸಿಗೆಯನ್ನು ತಿರುಗಿ ಕಟ್ಟಬೇಕಾಗೋಲ್ಲ ಎಂದಂದುಕೊಂಡು ಮಲಗಿದೆ.

ಮುಂಜಾನೆ ಐದೂಮುಕ್ಕಾಲು ಗಂಟೆಗೆ ಕೊಠಡಿ ನಂಬ್ರ ೪೨೦ರಲ್ಲಿ ಫೋನ್ ಬಾರಿಸಿತು. "ಸಾಹೇಬ್ರ! ನಿಮ್ಮನ್ನು ಎಬ್ಬಿಸಲು ಫೋನ್ ಮಾಡಿದೆ. ಇನ್ನು ಹದಿನೈದು ನಿಮಿಷಗಳಲ್ಲಿ ಉಪಹಾರ ಕಳಿಸಲಾ" ಎಂದು ಮ್ಯಾನೇಜರ್ ಕೇಳಿದ. "ತುಂಬಾ ಧನ್ಯವಾದಗಳು, ಹಾಗೇ ಮಾಡಿ" ಎಂದು ಹೇಳಿ ಬೆಳಗಿನ ಕರ್ಮವನ್ನು ಮುಗಿಸಿ ಸಿದ್ಧವಾದೆ. ಅಷ್ಟುಹೊತ್ತಿಗೆ ತಿಂಡಿ ತೀರ್ಥವನ್ನು ಮಾಣಿ ತಂದಿರಿಸಿದ. ಇಷ್ಟು ಟಾಕ್‌ಟೀಕ್ ಸೇವೆ ಮಾಡಿದವರು ಹೇಗೂ ಛಮ್ಡವನ್ನು ಸುಲಿದೇ ಸುಲಿಯುತ್ತಾರೆ. ತಂದಿಟ್ಟಿದ್ದನ್ನು ತಿಂದೇಬಿಡೋಣ ಎಂದಂದುಕೊಂಡು ಹಸಿವಾಗದೇ ಇದ್ದರೂ ಗಿಡಗಿಕೊಂಡು ತಿಂದೆ.

ಮೋಟಾರುಡ್ರೈವರ್ ಅಷ್ಟುಹೊತ್ತಿಗೆ ಬಂದ. ನನ್ನ ಸಾಮಾನುಗಳನ್ನು ತೆಗೆದುಕೊಂಡು ಇಳಿದುಹೋದ. ಅವನ ಹಿಂದೆಯೇ ನಾನೂ ಹೊರಟಿದ್ದೆ. ಹೋಟೆಲಿನ ಹೊರ ಅಂಗಳದಲ್ಲಿದ್ದ ಮ್ಯಾನೇಜರ್ ಮೇಜಿನ ಬಳಿಗೆ ಹೋದೆ. ಮ್ಯಾನೇಜರ್ ಪಕ್ಕದಲ್ಲಿ ದೊಡ್ಡ ಉಂಗುರ ಹಾಕಿದ್ದ ಒಬ್ಬಾತ ಭಾರೀ ಹೂವಿನ ಹಾರವನ್ನು ಹಿಡಿದುಕೊಂಡು ನಿಂತಿದ್ದ. ಯಾರೋ ದೊಡ್ಡ ಮನುಷ್ಯರು

ಬರುವಂತೆ ಕಾಣುತ್ತೆ. ಅವರಿಗೋಸ್ಕರ ಈತ ಕಾದಿದ್ದಾನೆ ಎಂದುಕೊಂಡು, ಯಾರಾದರೂ ಬರುವರಿದ್ದಾರೆಯೇ ಎಂದು ಹಿಂದಿರುಗಿ ನೋಡಿದೆ. ಇನ್ನೂ ಯಾರೂ ಬಂದಂತಿರಲಿಲ್ಲ. ಮ್ಯಾನೇಜರ ಕಡೆಗೆ ತಿರುಗಿ, "ಬಿಲ್ ಎಷ್ಟಾತು ಹೇಳಿದರೆ ರೊಕ್ಕ ಕೊಡ್ತೀನಿ. ನಿಮ್ಮ ಸೇವೆ ಬಹಳ ಚಲೋದಿದೆ. ಊರಿನಾಗೆ ಎಲ್ಲರಿಗೂ ಹೇಳ್ತೀನಿ" ಎಂದಂದೆ.

ಅಷ್ಟುಹೊತ್ತಿಗೆ ಹೂ ಹಾರವನ್ನು ಹಿಡಿದು ನಿಂತಿದ್ದವನು ಆ ಹಾರವನ್ನು ನನ್ನ ಕೊರಳಿಗೆ ಹಾಕಿದ. "ನಮ್ಮ ಹೋಟೆಲಿಗೆ ಬಂದು ನೀವು ಇಳಿಕೊಂಡಿದ್ದು ನಮ್ಮ ಪುಣ್ಯ" ಎಂದ.

"ಇವರೇ ನಮ್ಮ ಹೋಟೆಲ್ ಮಾಲೀಕರು" ಎಂದು ಅವರ ಪರಿಚಯವನ್ನು ಮ್ಯಾನೇಜರ್ ನನಗೆ ಮಾಡಿಕೊಟ್ಟ.

"ತುಂಬಾ ಅಭಾರಿ ನಿಮಗೆ. ಆದರೆ ಇದೆಲ್ಲ ಯಾಕೆ?" ಎಂದೆ. ಒಳ ಜೇಬಿನಿಂದ ಹಣದ ಪರ್ಸನ್ನು ಹೊರತೆಗೆಯತೊಡಗಿದೆ.

ಹೋಟೆಲ್ ಮಾಲೀಕ ನನ್ನ ಕೈಯನ್ನು ತಡೆಹಿಡಿದ. "ಸಾಹೇಬ್ರ! ನಿನ್ನೆ ನಾನು ಊರಿನಾಗೆ ಇರಲಿಲ್ಲ. ಅದಕ್ಕೇ ನಿಮ್ಮ ಉಪಚಾರ ಮಾಡೋಕೆ ನಾನೇ ಬರಲಾಗಲಿಲ್ಲ. ನಮ್ಮ ಮ್ಯಾನೇಜರು ತುಂಬಾ ಶಾಣೆ ಇದ್ದಾನೆ. ನಿಮ್ಮ ಹೆಸರು ಕೇಳಿದ ಕೂಡಲೇ ಮಂತ್ರಿಗಳಿಗೆ ಮೀಸಲಾಗಿಟ್ಟಿರುವ ಕೊಠಡಿ ನಂಬ್ರ ೪೨೦ನ್ನೇ ನಿಮಗೆ ಕೊಟ್ಟಿದ್ದಾನೆ. ರಾತ್ರಿ ನಾನು ಊರಿಗೆ ಹಿಂತಿರುಗಿದಾಗ ನೀವು ಬಂದ ವಿಚಾರ ಹೇಳಿದರು. ಬೀಳ್ಕೊಟ್ಟು ಹೋಗೋಣ ಅಂತ ಈಗ ಬಂದೆ.

ಈ ಸಾರಿ ನೀವು ಮಂತ್ರಿಗಳಾಗ್ತೀರಿ ಅಂತ ನಮಗೆಲ್ಲ ಗೊತ್ತು. ವಿಷಯವನ್ನು ಪ್ರಕಟಪಡಿಸುವ ತನಕ ನೀವು ಒಪ್ಪಿಕೊಳ್ಳೋಲ್ಲ. ಅದೂ ನನಗೆ ಗೊತ್ತು.

ನೀವು ಮಂತ್ರಿಗಳಾದಾಗ ನಮ್ಮನ್ನ ಮರೆಯಬೇಡಿ. ಸಾಕಷ್ಟು ಧಾನ್ಯಗಳನ್ನು ಸರಕಾರದ ದಾಸ್ತಾನಿನಿಂದ ನಮಗೆ ಕೊಡೋಲ್ಲ. ಸಕ್ಕರೆಯೂ ಸಿಗೋಲ್ಲ. ನಮ್ಮ ಕಷ್ಟಗಳನ್ನು ಕಂಡಿದ್ದೀರಿ ನೀವು. ಮುಂದೆ ನೀವೇ ನಮ್ಮನ್ನ ಕಾಪಾಡಬೇಕು.

ನಿಮ್ಮಂತಹ ಗಣ್ಯರ ಸೇವೆಯನ್ನು ಮಾಡುವ ಅವಕಾಶವನ್ನು ಒದಗಿಸಿ ಕೊಟ್ಟಿದ್ದಕ್ಕೆ ನಿಮಗೆ ತುಂಬಾ ಆಭಾರಿ. ಅಂತಹುದರಲ್ಲಿ ನೀವು ರೊಕ್ಕ ಕೊಡೋದು ಎಂದರೇನು?"

ಎಂದು ಅತಿ ವಿನಯದಿಂದ ಅಹವಾಲು ಮಾಡಿಕೊಂಡ.

ಆಗ ಎಲ್ಲವೂ ನನಗೆ ಅರ್ಥವಾಯಿತು. ಆ ಕಡೆಯಿಂದ ಬಂದ ಅಪಾಟಿ ಪಾಟೀಲರಲ್ಲಿ ನಾನೂ ಒಬ್ಬ. ಆದರೆ ಹೋಟೆಲಿನವರು ನನ್ನನ್ನು ಇನ್ನೊಬ್ಬ ಬಲಾಢ್ಯ ಪಾಟೀಲ್ ಅಂತ ತಿಳಿದು ಕೊಂಡು ಇಷ್ಟೆಲ್ಲಾ ಮರ್ಯಾದೆ ಮಾಡಿದ್ದಾರೆ. ನನ್ನ ಗುಟ್ಟು ಇವರಿಗೆ ಗೊತ್ತಾದರೆ, ಕೇವಲ ಒಂದು ಚಿಲ್ಲರೆ ಕೋ ಆಪರೇಟೀವ್ ಸೊಸಾಯ್ಟಿಯ ಗೌರವ ಕಾರ್ಯದರ್ಶಿ ಅಂತ ತಿಳಿದುಹೋದರೆ, ಹಾಗೂ ಆ ಸೊಸಾಯ್ಟಿಯ ಬಂಡವಾಳವೆಲ್ಲ ಸರ್ಕಾರ ಮಂಜೂರು ಮಾಡಿರುವ ಸಾಲವೇ ಎಂದು ಬಹಿರಂಗವಾದರೆ ನನ್ನ ದೇಹಕ್ಕೆ ಊನವಾಗಬಹುದು. ನನ್ನ ಕೆನ್ನೆ ಊದಿಕೊಳ್ಳಬಹುದು. ಕೆಲವು ವಾರಗಳು ಕೂತುಕೊಳ್ಳಲೂ ಸಾಧ್ಯವಾಗದೆ ಇರಬಹುದು ಎಂದು ಮನಸ್ಸು ಹುಷಾರ್ ಕೊಟ್ಟಿತು.

ಒಂದು ಮರುತ್ತರವನ್ನೂ ಆಡದೆ, ಆದಷ್ಟು ಗಂಭೀರವಾಗಿ ಮುಗುಳ್ನಗೆ ಬೀರುತ್ತ ಮೋಟಾರಿನಲ್ಲಿ ಕುಳಿತೆ. ಹೋಟೆಲ್ ಮಾಲೀಕರೇ ಮೋಟಾರಿನ ಬಾಗಿಲನ್ನು ಮುಚ್ಚಿದರು. ಎಲ್ಲರೂ ನಮಸ್ಕಾರ ಮಾಡಿದರು.

ರೈಲ್ವೆ ನಿಲ್ದಾಣದಲ್ಲಿ ಇಳಿದಾಗ ಡ್ರೈವರನೇ ಸಾಮಾನುಗಳನ್ನು ಹೊತ್ತುಕೊಳ್ಳಲು ಮುಂದೆ ಬಂದ. ಬೇಡ, ಬೇಡ, ಪೋರ್ಟರ್ ತೆಗೆದುಕೊಳ್ಳಲಿ ಎಂದು ಅವನನ್ನು ತಡೆದೆ.

"ಸರ್ಕಾರದ ಬಸ್‌ಗಳಲ್ಲಿ ನನಗೊಂದು ಕೆಲಸ ದಯಪಾಲಿಸಬೇಕು. ನನ್ನ ತಮ್ಮನಿಗೂ ಒಂದು ಕೆಲಸ ಕೊಡಿಸಬೇಕು" ಎಂದು ಅವನು ಬೇಡಿಕೊಂಡ.

"ಈಗಲೇ ಏನು ಹೇಳಲಪ್ಪಾ" ಎಂದು ಮುಗುಮ್ಮಾಗಿ ಹೇಳಿ, ಪೋರ್ಟರ್ ಹಿಂದೆ ನಡೆದೆ.

ರೈಲುಗಾಡಿಯ ತನಕ ಆ ಡ್ರೈವರ್ ಎಲ್ಲಿ ಬಂದುಬಿಡುತ್ತಾನೋ, ಮೂರನೇ ತರಗತಿಯಲ್ಲಿ ನಾನು ಕುಳಿತಿದ್ದನ್ನು ಎಲ್ಲಿ ನೋಡಿಬಿಡುತ್ತಾನೋ ಎಂಬ ಭಯದಿಂದ ಹಿಂದೆ ಹಿಂದಕ್ಕೆ ನೋಡುತ್ತಿದ್ದೆ. ಅವನು ಬರುತ್ತಿರಲಿಲ್ಲ. ಧೈರ್ಯವಾಗಿ ಮೂರನೆಯ ತರಗತಿಯ ಡಬ್ಬಿಯಲ್ಲಿ ಹತ್ತೂ ಜನರೊಂದಿಗೆ ಗೋವಿಂದ ಅನ್ನುತ್ತ ಮುದುಡಿಕೊಂಡೆ.

ರಾಜೀವಪುರಕ್ಕೇನಾದರೂ ತಿರುಗಿ ಹೋಗಬೇಕಾದರೆ, ಕರ್ನಾಟಕ ಆನಂದ ನಿಲಯದ ಆಜೂಬಾಜು ಒಂದು ಮೈಲಿ ಅಂತರದಲ್ಲಿ ಅಡ್ಡಾಡೋಲ್ಲ ಎಂದು ಶಪಥ ಮಾಡಿದ್ದೇನೆ.



# "ಮನ್ಸೂರರ ರಜಾ ಪ್ರವಾಸ"

ರಾಜೀವಪುರದಲ್ಲಿ ರಜಾ ಸಿಕ್ಕಾಗ, ವಿಹಾರಕ್ಕೆಂದು ಜನ, ಹೆಬ್ಬಿಗುಬ್ಬಾಲೆಗೋ ಹಿಂದಘಟ್ಟಕ್ಕೋ ಹೋಗಿ ಹಳ್ಳಿ ಜೀವನವನ್ನು ಅನುಭವಿಸಿ ಆನಂದಪಡುತ್ತಾರೆ. ಅದೇ ರೀತಿ ಹಿಂದಘಟ್ಟದವರೂ ಹೆಬ್ಬಿಗುಬ್ಬಾಲೆಯವರೂ ರಜೆ ಸಿಕ್ಕಾಗ ರಾಜೀವಪುರದ ಕೂಹರಿನಲ್ಲಿ ಹಗಲು, ಲಷ್ಕರಿನಲ್ಲಿ ರಾತ್ರಿ ಮೋಜು ಮಾಡುತ್ತಾರೆ. ಲಾಗಾಯ್ತಿನಿಂದ ಆಗ್ತಾ ಇರೋ ಪದ್ಧತಿ ಇದು.

ಆದರೆ ಲಾಯರ್ ಮನ್ಸೂರರಿಗೆ ಏರ್ಪಾಡಿನಲ್ಲಿ ದಿನ ಬೆಳಗಾದರೆ, ಸುಳ್ಳು, ತಟವಟ; ಕಕ್ಷಿ, ಪ್ರತಿಕಕ್ಷಿ; ಮೋಸ, ದಗಲ್‌ಬಾಜಿ; ಕರಿ ಅಂಗಿ, ಬಿಳಿ ಪೇಟ; ಇವೇ ಮಾಮೂಲು. ಬೇಜಾರು ತಂದಿತ್ತು. ಯಾವುದಾದರೂ ಹಳ್ಳಿಗೆ ಬೇಸಿಗೆ ರಜದಲ್ಲಿ ಹೋಗಬೇಕು. ಶಾಂತ ವಾತಾವರಣವಿರಬೇಕು, ಆದರೂ ಊಟ ತಿಂಡಿ ವಸತಿಗೆ ಕಷ್ಟವಿರಬಾರದು; ಎಲ್ಲರೂ ಹೋಗುವ ವಿಹಾರ ಸ್ಥಳಗಳಿಗೆ ಹೋದರೆ ಅಲ್ಲಿಯೂ ಷಹರಿನ ಹಳಸಿದ ವಾಸನೆ ಬಡಿಯುತ್ತಿರುತ್ತೆ. ಆದುದರಿಂದ ಜನತೆಗೆ ತಿಳಿಯದ, ಹಾಗೂ ಪ್ರಕೃತಿ ಸೌಂದರ್ಯದಿಂದ ಕೂಡಿದ, ಆದರೂ ಕೇವಲ ಕುಗ್ರಾಮವಲ್ಲದ, ಹಳ್ಳಿಗೆ ಹೋಗಬೇಕು ಎಂದು ಆಸೆ ಅಮರಿಕೊಂಡಿತ್ತು. ಅಂತಹ ಹಳ್ಳಿ ಆರಾಂ ಸಂಸ್ಥಾನದಲ್ಲಿ ಎಲ್ಲಿದೆ ಎನ್ನುವುದು ಅಡವೀಶಪ್ಪನವರಿಗೆ ಮಾತ್ರ ತಿಳಿದಿರಬಹುದು. ಅವರು ಜೀವಮಾನವನ್ನೆಲ್ಲಾ ಪುರಾತನ ದೇವಾಲಯಗಳ ವಿವರಗಳನ್ನು ಸಂಗ್ರಹಿಸುವ ಕಾಯಕದಲ್ಲೇ ಕಳೆದಿದ್ದವರು. ರಾಜೀವಪುರದಲ್ಲಿ ಅವರ ಹೆಸರು ಪ್ರಸಿದ್ಧವಾಗಿರದಿದ್ದರೂ, ಪಾಶ್ಚಾತ್ಯ ದೇಶಗಳಲ್ಲಿ, ರಾಜೀವಪುರದ ಅಡವೀಶಯ್ಯ ಎಂದರೆ ಘನ ಪಂಡಿತರು ಎಂದು ಹೆಸರು ಗಳಿಸಿದ್ದರು. ಆದಕಾರಣ ಲಾಯರ್ ಮನ್ಸೂರ್ ಅವರು, ರಜೆಗೆ ಎಲ್ಲಿಗೆ ಹೋಗಲಿ, ಎಂದು ಸಲಹೆ ಕೇಳಲು ಅಡವೀಶಪ್ಪನವರ ಮನೆಗೆ ಹೋದರು. ಹೇಗೂ ಅಡವೀಶಪ್ಪನವರು ಮನ್ಸೂರರ ತಂದೆಯ ಸ್ನೇಹಿತರು, ತುಂಬಾ ಸಲಿಗೆಯಿತ್ತು.

ಎಪ್ಪತ್ತರ ಪ್ರಾಯದ ಅಡವೀಶಪ್ಪನವರು, ಮನ್ಸೂರರ ಪ್ರಶ್ನೆಯನ್ನು ಕೇಳಿದ ಮೇಲೆ, ಚುರುಕಿನಿಂದ "ಮನ್ಸೂರ್ ಬೇಟಾ? ಹಿಂದಘಟ್ಟದ ಪಕ್ಕದಲ್ಲಿ ಹಿರೇಮಗಳೂರು ಅಂತ ಒಂದು ಹಳ್ಳಿ ಇದೆ. ಅಲ್ಲಿರುವ ಪ್ರವಾಸಿ ಮಂದಿರ ಹಿಂದಿನ ಕಾಲದಲ್ಲಿ ಪಾಳೆಯಗಾರನ ಅರಮನೆಯಾಗಿತ್ತು. ಸೌಕರ್ಯಗಳೆಲ್ಲಾ ಇವೆ. ಸರಕಾರಿ ಮಂತ್ರಿಗಳಾಗಲಿ, ಅಧಿಕಾರಿಗಳಾಗಲೀ ಆ ಊರ ಕಡೆ ತಲೆ ಹಾಕುಲ್ಲ. ಅವರುಗಳಿಗೆ ಅಲ್ಲಿ ಯಾವ ಪ್ರಯೋಜನವೂ ದೊರಕುವುದಿಲ್ಲ. ಅಂದಮೇಲೆ ಅಲ್ಲಿನ ವಾತಾವರಣ ಪರಿಶುದ್ಧವಾಗಿದೆ. ಆ ಊರಿನಿಂದ ಹತ್ತು ನಿಮಿಷ ಕಾಲುದಾರಿಯಲ್ಲಿ ನಡೆದು ಹೋದರೆ ಒಂದು ಪುರಾತನ ದೇವಾಲಯ ಕಾಣಿಸುತ್ತೆ. ಚೆನ್ನಕೇಶವನ ದೇವಾಲಯ. ಸಣ್ಣದೇನೋ ಹೌದು. ಆದರೆ ಬಲು ಮುದ್ದಾಗಿದೆ. ಆ ದೇವಾಲಯದ ಬಳಿ ಗಂಟೆಗಟ್ಟಲೇ ಕುಳಿತು ಸುತ್ತಲೂ

ಪ್ರಕೃತಿಯ ಸೌಂದರ್ಯವನ್ನು ಅನುಭವಿಸಬಹುದು. ಆದರೆ ಆ ದೇವಾಲಯದಲ್ಲಿ ಮ್ಲೇಚ್ಛರಿಗೆ ಪ್ರವೇಶವಿಲ್ಲ. ಆದುದರಿಂದ ನೀನು ಅಲ್ಲಿಗೆ ಹೋದಾಗ ಪಂಚೆ ಉಟ್ಟುಕೊಂಡು ಹೋಗು. ದೇವಸ್ಥಾನದ ನವರಂಗದಲ್ಲಿ ಎರಡು ಶಿಲಾ ಶಾಸನಗಳಿವೆ. ಅವನ್ನೂ ನಾನು ಪರಿಕ್ಷೀಸಿ, ಚಿತ್ರ ಹಿಡಿದು ತರಲಾಗಲಿಲ್ಲ. ಹಿರೇಮಗಳೂರಿಗೆ ನೀನು ಹೋದರೆ, ಅಲ್ಲಿನ ಪ್ರವಾಸಿಮಂದಿರದ ಮೇಲೆ ಸಿದ್ದಪ್ಪನಿಗೆ ನನ್ನ ನೆನಪು ಕೊಡು. ಆ ಕೆಲಸಕ್ಕೆ ಅವನನ್ನು ನಾನೇ ನೇಮಿಸಿದ್ದು. ನಿನ್ನ ಯೋಗಕ್ಷೇಮವನ್ನು ಚೆನ್ನಾಗಿ ನೋಡಿಕೊಳ್ಳುತ್ತಾನೆ. ಅವನ ಹೆಂಡತಿ ಮಾಡುವಂತಹ ರುಚಿಯಾದ ಚಟ್ನಿಯನ್ನು ಇನ್ನೆಲ್ಲೂ ನಾನು ತಿಂದದ್ದೇ ಇಲ್ಲ. ಒಂದು ಸರ್ತಿ ಅಲ್ಲಿಗೆ ಹೋಗಿದ್ದಾಗ ನಾಲ್ಕು ದಿನ ಬರೀ ಚಟ್ನಿ ಅನ್ನ ಮೊಸರು ಇಷ್ಟನ್ನೇ ಗಡದ್ದು ತಿಂದೆ. ಮಳೆ ಬಹಳವಾಗಿ ಬಂದ ಕಾರಣ ದೇವಾಲಯಕ್ಕೆ ಹೋಗಿ ಶಿಲಾಶಾಸನಗಳನ್ನು ಅಭ್ಯಾಸ ಮಾಡಲಾಗಲಿಲ್ಲ. ಹಾಗೂ ಮೊಣಕಾಲು ಹಿಡಿದುಕೊಂಡಿತ್ತು. ಆದ್ದರಿಂದ ಹಿಂತಿರುಗಿ ಬರಬೇಕಾಯಿತು" ಎಂದರು ಅಡವೀಶಪ್ಪನವರು.

ರಜಾ ಅನುಭವಿಸಲು ಲಾಯರು ಮನ್ಸೂರ್ ಅವರು ಹಿರೇಮಗಳೂರಿಗೆ ಹೋದರು. ಅಲ್ಲಿನ ವಸತಿ, ವಾತಾವರಣ ಎಲ್ಲವನ್ನೂ ಕಂಡು ಮುಗ್ಧರಾದರು. ಮೇಟಿ ಸಿದ್ದಯ್ಯನನಕ, ಅಡವೀಶಪ್ಪನವರ ಹೆಸರು ಕೇಳುತ್ತಲೂ "ಅವರ ಹೆಸರು ಹೇಳಿ ಸಂಜೆ ಗುಡಿಸಲಲ್ಲಿ ದೀಪ ಹಚ್ಚುತೀವಿ" ಎಂದು ಅತಿ ವಿನಯದಿಂದ, ಅತ್ಯಾದರದಿಂದ ಮನ್ಸೂರರ ಆರೈಕೆ ಮಾಡಿದ. ನವಿರು ನವಿರು ಬೆಳ್ಳುಳ್ಳಿಯ ಹಸನಾದ ಹಗೂರಾದ ಆ ಚಟ್ನಿಯನ್ನು ಮನ್ಸೂರ್ ತಿಂದಿದ್ದೂ ತಿಂದಿದ್ದೇ: ಲೊಟ್ಟೆ ಹೊಡೆದದ್ದೂ ಹೊಡೆದದ್ದೇ! ಇಂತಹ ಚಟ್ನಿಯನ್ನು ಮಾಡಿ ರಾಜೀವಪುರದಲ್ಲಿ ಮಾರಿದರೆ ಷಹರನ್ನೇ ಕೊಂಡುಕೊಳ್ಳುವಷ್ಟು ಲಾಭದ ವ್ಯಾಪಾರ ಸಾಗುತ್ತದೆ.

ಬೆಳಿಗ್ಗೆ ೮-೯ ಗಂಟೆಗೆ ಸಾವಕಾಶವಾಗಿ ಎದ್ದು ಮನ್ಸೂರರು ಮುಖ ತೊಳೆದುಕೊಂಡು ಕಾಫಿ ಕುಡಿದು ಅಡ್ಡಾಡಲಿಕ್ಕೆ ಹೊರಡುತ್ತಿದ್ದರು. ಚನ್ನಕೇಶವ ದೇವಾಲಯ ನೋಡಿಕೊಂಡು ಮಧ್ಯಾಹ್ನ ೧ ತಾಸಿನ ಹೊತ್ತಿಗೆ ಹಿಂತಿರುಗುತ್ತಿದ್ದರು. ನಂತರ ಮೊಸರನ್ನಕ್ಕೆ ಚಟ್ನಿ ಅನ್ನ ನೆಂಚಿಕೊಂಡು ಗಡದ್ದು ಉಣ್ಣೋದು. ಸಂಜೆಯ ತನಕ ಅಲ್ಲಿ ಇಲ್ಲಿ ಅಡ್ಡಾಡಿ ಬರೋದು. ರಾತ್ರಿ ಊಟ. ಪಗದಸ್ತು ನಿದ್ರೆ. ಮನ್ಸೂರರು ಸ್ವರ್ಗ ಸುಖ ಅನುಭವಿಸುತ್ತಿದ್ದರು; ಹೂರೆಯರು ಯಾರೂ ಇಲ್ಲದೆ ಆ ಸ್ವರ್ಗದಲ್ಲಿ.

ಮೊದಲ ೮-೧೦ ದಿನಗಳು ಮನ್ಸೂರರು ಆ ದೇವಾಲಯವನ್ನು ನೋಡುತ್ತಿದ್ದರು. ನವರಂಗದಲ್ಲಿದ್ದ ಶಿಲಾ ಶಾಸನಗಳನ್ನು ಸ್ವಚ್ಛಗೊಳಿಸಿ ಅವುಗಳ ನಕಲು ಮಾಡಿದರು. ಸುತ್ತಲೂ ಇದ್ದ ಕೆತ್ತನೆ ಕೆಲಸಗಳನ್ನೆಲ್ಲಾ ಸಾವಕಾಶವಾಗಿ ನೋಡಿ ಆನಂದಪಟ್ಟರು. ಆ ದೇವಾಲಯವನ್ನು ಕಟ್ಟಿದ ಕಾಲ ಒಂಭತ್ತನೇ ಶತಮಾನವೆಂದೂ ತಿಳಿದುಕೊಂಡರು. ರಾಜೀವಪುರಕ್ಕೆ ಹಿಂತಿರುಗಿದಾಗ ಅಡವೀಶಪ್ಪನವರೊಡನೆ ಮಾತನಾಡಲು ಸಾಕಷ್ಟು ವಿಷಯ ಸಂಗ್ರಹಣೆ ಮಾಡಿದರು. ಅಡವೀಶಪ್ಪನವರಿಂದ ಈ ಹವ್ಯಾಸಂಗದ ನಿಮಿತ್ತ ಮೆಹರ್ಬಾನ್ ಪಡೆಯುವುದು ಖಂಡಿತ ಎಂದು ಮನ್ಸೂರರು ಅಂದುಕೊಂಡಡರು.

ಹನ್ನೊಂದನೇ ದಿನ ಮನ್ಸೂರರು ದೇವಾಲಯಕ್ಕೆ ಸುಮಾರು ೧೦-೧೦.೩೦ ಹೊತ್ತಿಗೆ ಯಥಾ ಪ್ರಕಾರ ಹೋದರು. ನರಪ್ರಾಣಿಯಿರದ ಆ ದೇವಾಲಯದ ಹತ್ತಿರ ಗಲಾಟೆಯೋ ಗಲಾಟೆ. ಮೂರು ನಾಲ್ಕು ಜನ ಸೇರಿಕೊಂಡು ಕೆಂಮಣ್ಣು ಸುಣ್ಣ ಮಾಡುತ್ತಿದ್ದಾರೆ. ಮುಗಿಸುವ ಹಂತದಲ್ಲಿದೆ.

ಅಂದಮೇಲೆ ಬೆಳಗಿನ ಝಾವದಿಂದಲೇ ಈ ಕೆಲಸ ಶುರುವಾಗಿದ್ದಿರಬೇಕು. ದೇವರ ಗುಡಿಯಲ್ಲಿ ಗಂಟೆ ಶಬ್ದ ಕೇಳಿಸುತ್ತಿದೆ. ಗುಡಿಯಲ್ಲಿ ದೀಪ ಹಚ್ಚಿರುವುದು ಹೊರಕ್ಕೂ ಕಾಣಿಸುತ್ತಿದೆ.

ದೂರದಿಂದಲೇ ಮನ್ನೂರರು ಇದೆಲ್ಲವನ್ನೂ ನೋಡಿದರು. ಈ ದಿನ ದೇವಾಲಯಕ್ಕೆ ಹೋಗುವುದು ಪ್ರಯೋಜನವಿಲ್ಲ ಎಂದುಕೊಂಡು ಅಡ್ಡ ಹಾದಿ ಹಿಡಿದು ಅಡ್ಡಾಡಿ ಮೊಸರನ್ನ ಚಟ್ನಿಗೆ ಹಿಂತಿರುಗಿದರು.

ಹನ್ನೆರಡನೆಯ ಮಧ್ಯಾಹ್ನ ಸುಮಾರು ನಾಲ್ಕು ಗಂಟೆಯ ಹೊತ್ತಿಗೆ, ಮನ್ನೂರರು ದೇವಾಲಯದ ಬಳಿಗೆ ಹೋದರು. ಆ ಹೊತ್ತಿನಲ್ಲಿ ಪೂಜೆಗೆ ಬಂದವರು ಯಾರೂ ಇರಲಾರರು ಎಂದಂದುಕೊಂಡು. ಆ ದೇವಾಲಯದ ಹೊರಗಡೆ ಯಾರೂ ಇದ್ದಿಲ್ಲ. ಧೈರ್ಯವಾಗಿ ನವರಂಗದತ್ತ ನಡೆದರು. ಇವರ ಕಾಲು ಸಪ್ಪಳ ಕೇಳಿ ಗರ್ಭಗುಡಿಯ ಕಡೆಯಿಂದ ಒಬ್ಬ ಸೈಂಧವ ಹೊರಕ್ಕೆ ಬಂದ. ದ್ವಾದಶ ನಾಮಗಳನ್ನು ಹೊರವಾಗಿ ಹಾಕಿಕೊಂಡಿದ್ದ. ಒಬ್ಬಟ್ಟಗಲದ ಅಂಚಿದ್ದ ಮೇಲುಕೋಟೆ ಪಂಚೆಯನ್ನು ಅವ ಪಂಚ ಕಚ್ಚೆ ಹಾಕಿ ಉಟ್ಟಿದ್ದ. ನೇಣು ಹಾಕಲು ಕೂಡ ಉಪಯುಕ್ತವಾಗಬಲ್ಲ ಮೂರೆಳೆ ಹಗ್ಗಗಳನ್ನು ಅವ ಯಜ್ಞೋಪವೀತದಂತೆ ಧರಿಸಿದ್ದ. ೨-೩ ವಾರಗಳ ಪ್ರಾಯದ ಹುಲುಸಾದ ಗಡ್ಡ ಮೀಸೆಗಳನ್ನು ಮೆರೆಸುತ್ತಿದ್ದ ಅವ ರಾಕ್ಷಸಗಣಕ್ಕೆ ಸೇರಿದಂತಿದ್ದ.

ಈ ಧಡಿಯ ಮನ್ನೂರರ ಬಳಿಗೆ ದಾಬುಗಾಲು ಹಾಕಿಕೊಂಡು ಬಂದು ದೊಡ್ಡ ನಮಸ್ಕಾರ ಹಾಕಿದ. "ಸಂಜೆ ಐದರ ಹೊತ್ತಿಗೆ ಮಹಾಸ್ವಾಮಿಯವರ ಸವಾರಿ ಚಿತ್ತೈಸುತ್ತೆ ಎಂದುಕೊಂಡಿದ್ದೆ. ಆದುದರಿಂದ ದೇವಾಲಯದ ಹೊರಬಾಗಿಲಲ್ಲೇ ಪೂರ್ಣಕುಂಭಗಳೊಡನೆ ಮರ್ಯಾದೆ ಮಾಡಲು ನಿಂತಿರಲಿಲ್ಲ. ದಯವಿಟ್ಟು ಕ್ಷಮಿಸಬೇಕು" ಎಂದ.

ಮನ್ನೂರರು ತಬ್ಬಿಬ್ಬಾದರು. ಎಂದೂ ಇಲ್ಲದ ಮರ್ಯಾದೆ ಇಂದು ನನಗೇಕೆ? ಎಂದು ಅವರ ಮನಸ್ಸಿನಲ್ಲಿ ಯೋಚನೆ ಮೂಡಿತು. ಅಷ್ಟರಲ್ಲಿ ಆ ಸೈಂಧವ ದೇವಾಲಯದ ಹೊರ ಬಾಗಿಲ ತನಕ ಹೋಗಿ ಸುತ್ತಲೂ ನೋಡಿ,

"ಮಹಾಸ್ವಾಮೀ! ತಮ್ಮ ಮೋಟಾರೆಲ್ಲಿ?" ಎಂದ. ಮನ್ನೂರರು, "ನಡೆದು ಬಂದೆ, ಹಿರೇ ಮಗಳೂರಿನಿಂದ, ದೇವಸ್ಥಾನ ನೋಡೋಣ ಅಂತ ಬಂದೆ" ಎಂದರು.

ಮನ್ನೂರರನ್ನೇ ದಿಟ್ಟಿಸಿ ಸೈಂಧವ ನೋಡಿದ. ಮಾಸಿದ ಜುಬ್ಬ. ಹಳೇ ಪಂಚೆ. ಕೆದರಿದ ಖಾಲಿತಲೆ. ಎಲ್ಲವನ್ನೂ ನೋಡಿದ.

"ನೀವು ಯಾರ್ರೀ?" ಎಂದು ಸೈಂಧವ ಕೇಳಿದ.

ದೇವರಿಗೆ ಹೆದರದೆ ಬರಿ ಕಾನೂನು ಕಳ್ಳಿಗಳ್ನೇ ನಂಬಿರುವ ಲಾಯರ್ ಮನ್ನೂರರು ಸೈಂಧವನಿಗೆ ಬೆದರುತ್ತಾರೆಯೇ?

"ಯಾರಾದರೆ ನಿಮಗೇನ್ರಿ!" ಎಂದರು, ತುಸು ಗಡುಸಾಗಿಯೇ.

ಮನ್ನೂರರು ಅಷ್ಟಕ್ಕೇ ಬಿಡಲಿಲ್ಲ. "ನೀವ್ಯಾರ್ರೀ? ಈ ದೇವಾಲಯಕ್ಕೆ ಯಾವಾಗ ಬಂದಿರಿ" ಎಂದು ಕೇಳಿದರು. ಪುಣ್ಯಕೋಟಿಯ ಹುಲಿಯ ಗುಹೆಯಲ್ಲೇ ಹುಲಿಯನ್ನು ನೀನ್ಯಾರು ಎಂದು ಕೇಳಿದಂತಾಯಿತು. ಆ ಸೈಂಧವನ ಹಣೆಯ ಮೇಲಿದ್ದ ಮಧ್ಯದ ಹಳದಿ ಪಟ್ಟಿ ನಾಮ ಥರ ಥರ

ನಡುಗಿತು. ಇಕ್ಕೆಲೆಗಳಲ್ಲೂ ಇದ್ದ ಬಿಳಿಯ ಪಟ್ಟಿ ನಾಮಗಳು ಶೆಡೆದು ನಿಂತವು. ತುಟಿಗಳು ಅದರುತ್ತಿದ್ದುವು. ಕೋಪ ಉಕ್ಕಿ ಬಂದಂತಿತ್ತು.

"ನಾನು ಯಾರು? ಅಂತ ಕೇಳ್ತೀಯಾ?" ಎಂದು ತೊದಲಿದ. ನಂತರ ಮಾತು ಹೊರಡಲಿಲ್ಲ. ಕಡೆಗೆ "ಆಂಡಾಳ್" ಅಂತ ಕೂಗಿದ.

"ಓ! ವಂದೇನ್" ಎಂಬ ಅಶರೀರವಾಕ್ಕು ದೇವಸ್ಥಾನದ ಹಿಂಬದಿಯಿಂದ ತೆರೆತೆರೆಯಾಗಿ ಕೇಳಿಸಿ ಬಂತು. ಹತ್ತಿರ ಹತ್ತಿರದಿಂದಲೇ ಮಾರ್ದನಿ ಕೊಟ್ಟಿತು. ನಂತರ ಧ್ವನಿಗೈದ ಮಹಾವ್ಯಕ್ತಿ ಪ್ರತ್ಯಕ್ಷವಾಯಿತು.

ಮಹಾ ನವರಾತ್ರಿಯ ದುರ್ಗಾಷ್ಟಮಿಯಂದು ಕಲ್ಕತ್ತಾ ಕಾಳಿಗುಡಿಯಿಂದ ತಪ್ಪಿಸಿಕೊಂಡು ಬಂದಿರಬಹುದಾದ ಕಠೋರ ಶಕ್ತಿಯು, ಭಾರಿ ಸೌಟೊಂದನ್ನು ಬಲಗೈಲಿ ಝಳಪಿಸುತ್ತಾ, ಕಠಾರಿ ಕಚ್ಚೆಯ ಸೀರೆಯನ್ನು ಮಂಡಿಯ ಮೇಲ್ತನಕ ಉಟ್ಟು, ಎದುರಿಗೆ ನಿಂತಿತು. ಸ್ತ್ರೀರೂಪು ಧರಿಸಿತ್ತು.

ಅದನ್ನು ಕಂಡ ಸೈಂಧವ, "ನಾನು ಯಾರು?" ಎಂದು ಕೇಳಿದ, ನನ್ನ ಕಡೆಗೆ ಬೆರಳ ತೋರಿಸಿ "ಈ ಹುಳು ಆ ಪ್ರಶ್ನೆಯನ್ನು ಕೇಳಿತು" ಎನ್ನುವಂತೆ ಸನ್ನೆ ಮಾಡಿದನೋ ಏನೋ.

ಆ ಮಹಾಶಕ್ತಿ ಕುಪಿತಳಾದಳು ಅಂತ ಕಾಣುತ್ತೆ. ವೇಗ ವೇಗವಾಗಿ ಬುಸುಗುಟ್ಟಿದಳು. ಮಹಿಷಾಸುರ ಮರ್ದನಿಯೇ ಸಮತೋಚ್ಛ್ವಾಸವನ್ನು ಆಡಿದಂತಾಯಿತು. ದಿಟವಾಗಲೂ ಈಗ ಮನ್ಸೂರರಿಗೆ ಗಾಬರಿಯಾಯಿತು. ಆತನ ಬುದ್ಧಿ ಕಾಲಿಗೆ ಇಳಿಯಿತು. ಕಾನೂನು ಕಟ್ಲೆ ರಿಟ್ ಇತ್ಯಾದಿಗಳೆಲ್ಲವೂ ಬೆವರು ಬೆವರಾಗಿ ಮನ್ಸೂರರ ಹಣೆಯಿಂದ ಕೋಡಿ ಹರಿದುಹೋಯಿತು. ಬುದ್ಧಿ ತಿಳಿದ ಮನ್ಸೂರರ ಕಾಲುಗಳು ಓಡಿದವು. ದೇವಸ್ಥಾನದ ಹೊರ ಬಾಗಿಲ ತನಕ ಓಡಿದುವು.

ಆ ಹೊತ್ತಿಗೆ ಎಲ್ಲಿಂದಲೋ ಮೋಟಾರು ಬಾರಿಸಿದ ಕಹಳೆ ಮನ್ಸೂರರ ಕಿವಿಗೆ ಕೇಳಿಸಿತು.

ಹಿಂತಿರುಗಿ ನೋಡಿದ. ಸೈಂಧವನು ಹಿಂಬಾಲಿಸುತ್ತಿಲ್ಲ. ಆ ಮಹಾಶಕ್ತಿಯ ಸ್ತ್ರೀರೂಪು ಕಾಣಿಸಲಿಲ್ಲ. ಹಣೆಯೊರೆಸಿಕೊಂಡ, ಮನ್ಸೂರ್. ಉಸಿರು ಸಮಾಧಾನಕ್ಕೆ ಬಂತು. ಅಲ್ಲೇ ಮನ್ಸೂರರು ತುಸು ಸುಧಾರಿಸಿಕೊಂಡರು.

ಒಂದೆರಡು ನಿಮಿಷಗಳಲ್ಲಿ ಒಂದು ಹಳೇ ಮೋಟಾರು ಬಂದು ದೇವಾಲಯದ ಹೊರ ಬಾಗಿಲ ಬಳಿ ನಿಂತಿತು. ಮೂರು ನಾಲ್ಕು ಬಾರಿ ಆ ವೇಳೆಗೆ ಕೊಂಬು ಊದಿಸಿತ್ತು. ನಿಂತ ಮೋಟಾರಿನಿಂದ ಇಳಿದ ಮಹಾರಾಯನ ಮುಖದ ಮೇಲೆ ಅಮಲ್ದಾರನ ಕಳೆಯಿತ್ತು. ನಿಂತ ಠೀವಿ, ಧರಿಸಿದ ಉಡುಪು, ಮುಖದಲ್ಲೆದ್ದ ಚಿಲ್ಮೀಷದ ನೋಟ ಇವು ಆತ ಅಮಲ್ದಾರ, ಸಜೀವ ಅಮಲ್ದಾರ, ಎಂದು ಘೋಷಿಸುತ್ತಿದ್ದುವು.

ಮೋಟಾರು ಬಾರಿಸಿದ ಕೊಂಬಿನ ಕೂಗಿನ ಜತೆಗೆ ಆ ಸೈಂಧವ, ಭರ್ಜರಿ ನಾಮಧಾರಿಗಳಾದ ಮೂವರು ಘಟೋತ್ಕಜರೊಂದಿಗೆ ದೇವಾಲಯದ ಹೊರಬಾಗಿಲ ಬಳಿ ಬಂದು ನಿಂತ. ಅವನ ಹಿಂದೆಯೇ ಆಂಡಾಳ್ ಕೂಡ ಬಂದು ನಿಂತಳು. ನಾಲ್ವರು ಗಂಡಸರೂ ಸ್ವಸ್ತಿವಾಚನ ಮಾಡಿದರು. ಆದರೆ ಪೂರ್ಣ ಕುಂಭದ ಮರ್ಯಾದೆಯೇನೂ ಕಾಣಿಸಲಿಲ್ಲ. ಅತ್ತ ತಿರುಗಿದ ಮನ್ಸೂರ್ ಆ ಶಕ್ತಿ ಸ್ತ್ರೀರೂಪನ್ನು ಕಂಡ. ಇದೇ ಆ ಮರ್ಯಾದೆಯೇನೋ ಎಂದುಕೊಂಡ.

ಸ್ವಸ್ತಿವಾಚನ ಮುಗಿದು, ಅರ್ಚಕ ಸೈಂಧವ, ಮಹರಾಯನಿಗೆ ಹೂಮಾಲೆ ಹಾಕಿ ನಿಂಬೇಹಣ್ಣು ಕೈಲಿಟ್ಟು, ಕೈಮುಗಿದರು. ಆ ಶಕ್ತಿ ಸ್ವರೂಪು ತಲೆ ಬಗ್ಗಿಸಿತು.

ಅಮಲ್ದಾರ ಮಹರಾಯ ಆಗ ಬಾಯಿ ತೆರೆದು,

"ಏನ್ರೀ! ನಿಮ್ಮ ಅರ್ಜಿ ವಿಷಯ? ನನಗ್ಯಾಕ್ರೀ ಅಹವಾಲು ಮಾಡಿಕೊಳ್ಳಲಿಲ್ಲ? ಮುಜರಾಯಿ ಕಮೀಷನರಿಗೆ ನೇರವಾಗಿ ಅರ್ಜಿ ಯಾಕೆ ಹಾಕಿದಿರಿ? ಅವರೂ ನಾಮಧಾರಿಗಳು ಅಂತಲೋ?" ಎಂದು ಕುಪಿತರಾಗಿ ಕೇಳಿದರು. ಒಂದು ಚಿಟಿಗೆ ನಶ್ಯ ಏರಿಸಿದರು.

"ಮಹಾಸ್ವಾಮೀ! ಈ ದೇವಾಲಯಕ್ಕೆ ಮುಜರಾಯಿ ಇಲಾಖೆಯಿಂದ ವಾರ್ಷಿಕವಾಗಿ ಬರಬೇಕಾದ ನೂರು ರೂಪಾಯಿಗಳು, ಎಂಟು ವರ್ಷಗಳಿಂದಲೂ ಸಂದಿಲ್ಲ. ಕಾರಣ ದೇವರ ಸೇವೆಗೆ ಅಡಚಣೆಯಾಗಿದೆ. ಖಾವಂದರು ಅನುಗ್ರಹ ಮಾಡಬೇಕು. ದೇವರು ಬದುಕಿಕೊಳ್ಳುತ್ತಾನೆ" ಎಂದು ನಂ. ೧ ಘಟೋತ್ಗಜ ಹೇಳಿದ.

ಅರ್ಚಕ ಸೈಂಧವನಿಗೆ ತುಸು ಉಗ್ಗು. ಅವಸರದಲ್ಲಿ ಮಾತನಾಡಬೇಕಾದಾಗ ಉಗ್ಗು ಬಲಿಯುತ್ತಿತ್ತು ಎಂದು ಆಮೇಲೆ ತಿಳಿಯಿತು. ಆ ಕಾರಣದಿಂದಲೇ ನಂ. ೧ ಘಟೋತ್ಗಜ ಅಹವಾಲಿಸಿದ್ದು.

"ಹರಿಜನರಿಗೆ, ಹರಿಜನರಿಗೆ ಈ ದೇವಾಲಯದಲ್ಲಿ ಪ್ರವೇಶವಿದೆ ಎಂದು ಬರೆದಿಲ್ಲವಲ್ರೀ! ಅಂದಮೇಲೆ ಮುಜರಾಯಿ ಗ್ರಾಂಟು ಕೊಡೋದಕ್ಕೆ ಸಾಧ್ಯವಿಲ್ಲವಲ್ಲ" ಎಂದು ಅಮಲ್ದಾರರು ಗುಡುಗಿದರು. ಕೈಲಿದ್ದ ನಿಂಬೇ ಹಣ್ಣನ್ನು ಹಿಸುಕುತ್ತಾ.

"ಈ ದೇವಾಲಯಕ್ಕೆ ನಮ್ಮೋರೇ ಬರೋದಿಲ್ಲ. ಇನ್ನು ಯಾರನ್ನು ತಾನೇ ಹಿಡಿದುಕೊಂಡು ಬರುಕ್ಕಾಗುತ್ತೆ, ನಾವೇ ಈಗ ಹರಿಯ ಜನರು" ಎಂದು ನಂ. ೨ ಘಟೋತ್ಗಜ, ಮೂರು ಹಗ್ಗಗಳನ್ನು ಎದೆಯಮೇಲೆ ನೇವರಿಸುತ್ತಾ ಹೇಳಿದ. ಬ್ರಹ್ಮಗಂಟನ್ನು ತಿರುಚುತ್ತಲೇ ಇದ್ದ.

"ಎಂಟು ವರ್ಷಗಳ ಹಿಂದೆಯೇ ಹರಿಜನರಿಗೆ ಮತ್ತೆಲ್ಲರಿಗೂ ಈ ದೇವಾಲಯವು ಪ್ರವೇಶ ಕೊಡುತ್ತದೆ ಎಂದು ಭಾರಿ ಬೋರ್ಡನ್ನು ಬರೆಸಿ ದೇವಾಲಯದಲ್ಲಿ ತೂಗು ಹಾಕಿದ್ದೇವೆ, ಮಹಾಸ್ವಾಮೀ" ಎಂದ ನಂ. ೨ ಘಟೋತ್ಗಜ ಹೇಳಿ, ಗರ್ಭಗುಡಿಯತ್ತ ಓಡಿ, ಕೈಲಿ ಒಂದು ಬೋರ್ಡನ್ನು ಹಿಡಿದು ಹಿಂತಿರುಗಿ ಬಂದು, ಅದನ್ನು ಅಮಲ್ದಾರರೆದುರು ಹಿಡಿದ. ಹೊಗೆ ಹಿಡಿದಿದ್ದ ಆಟೋ ಬೋರ್ಡಿನಲ್ಲಿ ಯಾವ ಅಕ್ಷರವೂ ಕಾಣಿಸುತ್ತಿರಲಿಲ್ಲ.

ಆದರೂ ಅಮಲ್ದಾರನಿಗೆ ಸಮಾಧಾನವಾದಂತೆ ಕಾಣಲಿಲ್ಲ.

ಆಗ ಆ ಮಹಾಶಕ್ತಿ ಒಮ್ಮೆ ಮನ್ನೂರರ ಕಡೆಗೆ ದೈನ್ಯದ ದೃಷ್ಟಿಯನ್ನು ಹರಿಸಿದಳು. ಆಕೆಯ ದೃಷ್ಟಿಯ ಜತೆಗೂ ಅರ್ಚಕ ಸೈಂಧವನ ದೃಷ್ಟಿಯೂ ಮನ್ನೂರರನ್ನು ಬಡಿಯಿತು. ಇದನ್ನು ಕಂಡ ಅಮಲ್ದಾರರ ದೃಷ್ಟಿಯೂ ಮನ್ನೂರರ ಕಡೆಗೆ ಬಿದ್ದಿತು.

ದುರ್ಗಾಷ್ಟಮಿಯ ಹಿಂದಿನ ದಿನದ ದೇವತೆಯು ಆಗ ಮನ್ನೂರರ ನಾಲಿಗೆಯ ಮೇಲೆ ನಲಿಯಲಾರಂಭಿಸಿದಳು.

"ಮಹರಾಯರೇ! ಈ ಪುರಾತನ ದೇವಾಲಯವು ಒಂಭತ್ತನೇ ಶತಮಾನದಲ್ಲಿ ಕಟ್ಟಲ್ಪಟ್ಟಿತು. ೧೫ನೇ ಶತಮಾನದಲ್ಲಿ ಆದಿಲ್‌ಷಹಾನವಾಬರು ಆ ದೇವರ ಮಹಾತ್ಮೆಗೆ ತಲೆದೂಗಿ, ಜೀರ್ಣೋದ್ಧಾರ

ಮಾಡಿದರು. ಆ ಕಾಲದಿಂದ ಈ ತನಕ ಎಲ್ಲ ಜನರೂ ಜಾತಿ ಮತ ಲಿಂಗ ಭೇದವಿಲ್ಲದೆ ಈ ಗುಡಿಗೆ ಬಂದು ಪುನೀತರಾಗಿದ್ದಾರೆ. ಇಷ್ಟಾರ್ಥವನ್ನು ಪಡೆದಿದ್ದಾರೆ. ಈ ದೇವಸ್ಥಾನದ ಪ್ರಸಾದ ತಿಂದು ಬಲಿಷ್ಠರಾಗಿದ್ದಾರೆ. ಆ ಕಾರಣದಿಂದಲೇ ನಾನು ಲಾಲ್‌ಖಿಲ್ಲಾದಿಂದ ಇಲ್ಲಿನ ಯಾತ್ರಾರ್ಥಿಯಾಗಿ ಬಂದಿದ್ದೇನೆ. ಇತಿಹಾಸ ಪ್ರಸಿದ್ಧವಾದ ಈ ದೇವಾಲಯವು, ರಾಷ್ಟ್ರದ ಸಂಪತ್ತು. ಇದು ಈ ಸ್ಥಿತಿಯಲ್ಲಿರುವುದನ್ನು ಕಂಡು ತುಂಬಾ ದುಃಖವಾಗುತ್ತಿದೆ. ರಾಜಧಾನಿಗೆ ಹಿಂತಿರುಗಿದ ಮೇಲೆ ಈ ದೇವಾಲಯಕ್ಕೆ ಕೇಂದ್ರ ಸರ್ಕಾರವು ಬಿಡಿಗೈ ನೆರವು ನೀಡಬೇಕು ಎಂದು ಚಳುವಳಿ ಹೂಡುತ್ತೇನೆ. ಮೊದಲು ದೇವಸ್ಥಾನದ ಮುಖ್ಯ ಅಂಗವಾದ ಅನ್ನಪೂರ್ಣಾ ನಿಲಯವು ದುರಸ್ತಾಗಬೇಕು. ನಂತರ ಹೊರಗೋಡೆಯ ರಿಪೇರಿಯಾಗಬೇಕು. ಆಮೇಲೆ ದೇವಾಲಯಕ್ಕೆ ಕರೆತರುವ ರಸ್ತೆ ಸರಿಮಾಡಬೇಕು. ನಂತರ ಏನಾದರೂ ಗ್ರಾಂಟಿನ ಹಣ ಉಳಿದರೆ, ಗರ್ಭಗುಡಿಯ ಸೂರನ್ನೂ ಸರಿ ಮಾಡಬೇಕು. ಈ ಚಳುವಳಿಗೆ ಪ್ರಾಕ್ತನ ವಿಮರ್ಶನ ಪ್ರವೀಣ ಅಡವೀಶಪ್ಪನವರೂ ತಮ್ಮ ಅಮೋಘ ಬೆಂಬಲವನ್ನು ನೀಡುತ್ತಾರೆ"

ಎಂದು ಒಂದು ಭಾಷಣವನ್ನೇ ಬಿಗಿದ. ಬೆಳ್ಳುಳ್ಳಿ ಚಟ್ನಿ ನಾಲಿಗೆಯನ್ನು ಸಡಿಲ ಮಾಡುವ ಹಾಗೆ ಸಾಕ್ಷಾತ್ ಸರಸ್ವತಿಯೂ ಮಾಡಲಾರಳು ಎಂದುಕೊಂಡರು ಮನ್ಸೂರರು.

ದಿಟ್ಟಿಸಿ ಮನ್ಸೂರರನ್ನು ಅಮಲ್ದಾರರು ಮೆಚ್ಚುಗಣ್ಣುಗಳಿಂದ ನೋಡಿದರು. ನೋಡಿ ಹಸನ್ಮುಖರಾದರು. ನಂತರ,

"ಮಹಾರಾಯರೇ! ನೀವೇನೋ ಆಗಿಂದಾಗ್ಗೆ ರಾಜೀವಪುರದ ಆಕಾಶವಾಣಿಯಿಂದ, ಪುರಾತನ ದೇವಾಲಯಗಳ ವಿಷಯದಲ್ಲಿ ಭಾಷಣ ಮಾಡುವ, ಲಾಯರ್ ಮನ್ಸೂರ್ ಅವರು?" ಎಂದು ಕೇಳಿದರು.

"ಹ್ಞೂ" ಎಂದರು ಮನ್ಸೂರರು.

ಅಮಲ್ದಾರರು ಬಸಿರಾದ ಜಿಂಕೆಯಂತೆ ಜಿಗಿದು ಮನ್ಸೂರರಿಗೆ ಹಸ್ತಲಾಘವ ಇತ್ತು, "ನಿಮ್ಮನ್ನು ಕಾಣಬೇಕೆಂದು ತುಂಬಾ ಆಸೆಯಾಗಿತ್ತು. ಅನುಭಾವಿ ಅಡವೀಶಪ್ಪನವರ ಬಲವನ್ನು ಪಡೆದ ನಿಮ್ಮನ್ನು ಕಂಡು ಇಂದು ಕೃತಾರ್ಥನಾದೆ" ಎಂದರು.

"ಬಲು ದೊಡ್ಡ ಮಾತಾಡಿದಿರಿ, ಅಮಲ್ದಾರರೇ! ಕಳೆದ ೧೦-೧೨ ದಿನಗಳಿಂದ ಇಲ್ಲಿನ ಶಿಲಾ ಶಾಸನಗಳನ್ನೂ, ವಿಗ್ರಹಗಳ ಛಾಯಾಚಿತ್ರಗಳನ್ನೂ ತೆಗೆದುಕೊಂಡಿದ್ದೇನೆ. ಗರ್ಭಗುಡಿಯಲ್ಲಿರುವ ಮೂಲ ವಿಗ್ರಹವನಕ, ಹೊರೆಯರ ಹೃದಯವನ್ನೇ ಬರಸೆಳೆಯುತ್ತದೆ" ಎಂದು ಮನ್ಸೂರರು ವಿನಯದ ಮಾರುತ್ತರ ಇತ್ತರು.

ಆಗ ಅಮಲ್ದಾರರು ಅರ್ಚಕರತ್ತ ತಿರುಗಿ, ಕೃಪಾದೃಷ್ಟಿ ಬೀರಿ, "ನೀವು ಅಹವಾಲಿಸಿದ್ದನ್ನೆಲ್ಲಾ ಸ್ಯಾಂಕ್ಷನ್ ಮಾಡ್ತೀನಿ. ನಮ್ಮ ಮಠದಿಂದ ಬಿರುದ ಪಡೆದ ಅಡವೀಶಪ್ಪನವರೇ ಇಲ್ಲಿಗೆ ಬಂದಿರುವ ಮನ್ಸೂರ್ ಸಾಹೇಬರನ್ನು ಬಹಳವಾಗಿ ಮೆಚ್ಚಿಕೊಂಡಿದ್ದಾರೆ. ಅಂತಹ ಮನ್ಸೂರ್ ಸಾಹೇಬರೇ ಆ ದೇವಾಲಯದಲ್ಲಿ ಅಡ್ಡಾಡಿ ಎಲ್ಲ ವಿವರಗಳನ್ನೂ ಪಡೆದಿದ್ದಾರೆ ಎಂದಮೇಲೆ, ಯಾವ ತೊಡಕೂ ಇಲ್ಲ. ಮುಂದಿನ ವಾರ ಹಿಂದಘಟ್ಟಕ್ಕೆ ಬಂದು ಕಚೇರಿಯಲ್ಲಿ ನನ್ನ ಭೇಟಿಯಾಗಿ, ನಿಮ್ಮ ದೇವಾಲಯದ ಬಾಕಿ ಬಿದ್ದ ಎಲ್ಲ ಹಣವನ್ನೂ ಪಾವತಿ ಮಾಡಿಸುತ್ತೇನೆ"

ಎಂದು ಮನ್ಸೂರರರ ಕಡೆಗೆ ದೃಷ್ಟಿ ಹಾಯಿಸಿ,

"ಮಹರಾಯರೇ! ಇಲ್ಲಿ ಇನ್ನೂ ಹೆಚ್ಚು ಹೊತ್ತಿರಲು ಅವಕಾಶವಿಲ್ಲ. ನಿಮ್ಮ ಜತೆ ಕೂಡಿ ದೇವಸ್ಥಾನವನ್ನು ದರ್ಶನ ಮಾಡುವ ಹಾಗಿಲ್ಲ. ಕಾರಣ ಮಾಲೀಕರಿಗೆ ಸಂಜೆ ಏಳರ ವೇಳೆಗೆ ಮೋಟಾರನ್ನು ಹಿಂತಿರುಗಿಸಬೇಕು. ಇನ್ನೂ ಎರಡು ಹಳ್ಳಿಗಳ ತನಿಖೆಯಾಗಬೇಕಾಗಿದೆ" ಎಂದು ಹೇಳಿ ಮನ್ಸೂರರ ಕ್ಷಮೆ ಕೋರಿ, ಮೋಟಾರಿನಲ್ಲಿ ಕುಳಿತು ಅಮಲ್ದಾರರು ಹೊರಟು ಹೋದರು.

ಮೂವರು ಘಟೋತ್ಗಜರೂ ಮನ್ಸೂರರನ್ನು ಗುಡಿಯೊಳಕ್ಕೆ ಹೊತ್ತುಕೊಂಡೇ ಹೋದರು. ಹಿಂದೆಯೇ ಸೈಂಧವ ಹಸನ್ಮುಖನಾಗಿ ಬಂದ. ಪೂರ್ಣಕುಂಭ ಶಕ್ತಿಯೂ ಪ್ರಸನ್ನಳಾಗಿ ಅಭಯ ಹಸ್ತ ನೀಡಿ ಹಿಂಬಾಲಿಸಿದಳು.

"ನೀನು ಯಾರು? ಯಾವ ಊರ ದಾಸಯ್ಯ" ಎಂದು ಯಾರೂ ಮನ್ಸೂರರನ್ನು ಕೇಳಲೇ ಇಲ್ಲ. ಎಲ್ಲರೂ ಸಂತೋಷದ ಸರೋವರದಲ್ಲಿ ಮಿಂದಾಡುತ್ತಿದ್ದಂತೆ ಕಾಣಿಸಿತು.

ಗರ್ಭಗುಡಿಯೊಳಕ್ಕೆ ಮನ್ಸೂರರನ್ನು ಕರೆದುಕೊಂಡು ಹೋದರು.

ದೇವರಿಗೆ ಮಂಗಳಾರತಿ ಮಾಡಿದರು. ಚೆನ್ನಕೇಶವ ದಿಟವಾಗಲೂ ಚೆನ್ನಾಗಿದ್ದ. ಆ ಅಲಂಕಾರಗಳು, ಪಂಚೆ ಉಡಿದಾರಗಳು, ಪಟ್ಟೆ ಪಟ್ಟೆ ನಾಮಗಳು ಇಲ್ಲದೆ ಇದ್ದಿದ್ದರೆ, ಮೂಲ ವಿಗ್ರಹ ಇನ್ನೂ ಅಂದವಾಗಿರುತ್ತಿತ್ತು.

ಅರ್ಚಕ ಮತ್ತು ಮೂರು ಘಟೋತ್ಗಜರೂ ಮಂತ್ರಗಳನ್ನು ಉಚ್ಚರಿಸಿದರು. ಅರ್ಚಕರಿಗೆ ಉಗ್ಗು ಬರಲೇ ಇಲ್ಲ. ಮಂತ್ರೋಚ್ಚಾರಣೆ ಸ್ಫುಟವಾಗಿತ್ತು.

ಅನಂತರ ಪ್ರಸಾದದ ಹಂಚಿಕೆ. ಅಲ್ಲಿದ್ದ ಹೊರಗಿನವರು ಎಂದರೆ ಮನ್ಸೂರರೊಬ್ಬರೇ! ಅಮಲ್ದಾರರು ಮತ್ತು ಪರಿವಾರಕ್ಕೆ ಮಾಡಿದ ಪ್ರಸಾದ. ಹಸನಾದ ಪುಳಿಯೋಗರೆ ಒಂದು ಕೊಳದಪ್ಪಲೆ ಅವರೇ ಇರಿಸಿಕೊಂಡರು. ಇನ್ನೊಂದು ಕೊಳದಪ್ಪಲೆ ಪ್ರಸಾದವನ್ನು ಮನ್ಸೂರರಿಗೆ ಕೊಟ್ಟರು. ಅದನ್ನು ನೋಡಿಯೇ ಮನ್ಸೂರರು ಸುಸ್ತಾಗಿಹೋದರು.

"ಇದನ್ನು ನಾನು ಹೇಗೆ ಹೊತ್ತುಕೊಂಡು ಹೋಗಲಿ" ಎಂದು ಮನ್ಸೂರರು ಕೇಳಿದರು. "ಹಿರೇಮಗಳೂರು ತನಕ ಅದನ್ನು ರವಾನಿಸುವುದು ನಮ್ಮ ಕೆಲಸ" ಎಂದಳು ಆ ಶಕ್ತಿ ಸ್ತ್ರೀ ಸ್ವರೂಪಿಣಿ.

ದೇವಾಲಯದಿಂದ ಹೊರಬಿದ್ದೆ. ನಂ. ೨ ಘಟೋತ್ಗಜ ಕೊಳದಪ್ಪಲೆಯನ್ನು ತನ್ನ ತೋಳಮೇಲೆ ಲೀಲಾಜಾಲವಾಗಿ ಏರಿಸಿದ. ಮನ್ಸೂರರನ್ನು ಹಿಂಬಾಲಿಸಿದ. ಹಿರೇಮಗಳೂರು ಪ್ರವಾಸಿ ಮಂದಿರದತ್ತ ಕಾಲುದಾರಿಯಲ್ಲಿ ನಾನು ನಡೆದಾಗ, ಅವ "ಅಲ್ಲಿಗೋ?" ಎಂದು ಹೇಳಿ ಮನ್ಸೂರರ ಮುಂದೆ ನಡೆದ. ಬಿರಿಬಿರಿ ನಡೆದ.

ಅವನ ಹಿಂದೆಯೇ ಕೊಳದಪ್ಪಲೆಯಿಂದ ಹೊರಸೂಸುತ್ತಿದ್ದ ಘಮಘಮವು ಭೂಲೋಕವನ್ನೂ, ಚಂದ್ರಲೋಕವನ್ನೂ ಹಾಗೂ ಸ್ಪುಟ್ನಿಕ್ ತ್ರಿಶಂಕು ಲೋಕವನ್ನೂ ಆವರಿಸಿತು. ಕಾಡಿನ ಹುಲ್ಲೆಗಳು ಹಾದಿಯ ಪಕ್ಕದಲ್ಲೇ ಮೂಸುತ್ತಾ ಬಂದು, ನಂ. ೨ ಘಟೋತ್ಗಜನನ್ನು ಕಂಡು ಕೊಂಬು ಮುದುರಿ ಹಿಂದಕ್ಕೆ ಹೋದುವು. ಚಿರತೆಗಳು, ಹೆಬ್ಬಾವುಗಳು, ಹುಲಿಗಳು, ಕರಡಿಗಳು, ಆನೆ ಕೋಣಗಳು ಎಲ್ಲವೂ ಮೂಸುತ್ತಾ ಬಂದು ಆತನನ್ನು ಕಂಡು ಬೆದರಿ ಹಿಂದೇಟು ಹಾಕಿದುವು.

ಕಡೆಗೆ ಅವನು ಪ್ರವಾಸಿ ಮಂದಿರ ಸೇರಿದ. ಅವನ ಹಿಂದೆಯೇ ಮನ್ಸೂರರೂ ಸೇರಿದರು. ಆ ಕೊಳದಪ್ಪಲೆಯನ್ನು ಮನ್ಸೂರರ ಕೊಠಡಿಯಲ್ಲಿಟ್ಟು, “ನೀವು ತಿಂದು ಮುಗಿಸಿದ ಮೇಲೆ ಮೇಟಿ ಸಿದ್ದಪ್ಪ ಪಾತ್ರೆ ತೊಳೆದು ಹಿಂತಿರುಗಿ ದೇವಸ್ಥಾನಕ್ಕೆ ತಲುಪಿಸುತ್ತಾನೆ. ನಿಮ್ಮಿಂದ ನಮ್ಮ ದೇವಸ್ಥಾನಕ್ಕೆ ಮಹದುಪಕಾರವಾಯ್ತು” ಎಂದು ಧನ್ಯವಾದ ಹೇಳಿ ಹೊರಟುಹೋದ.

ಕೊಳದಪ್ಪಲೆಯ ಪುಳಿಯೋಗರೆಯನ್ನು ಮೇಟಿ ಸಿದ್ದಪ್ಪನ ಮನೆಗೂ ಕಳಿಸಿ, ಮನ್ಸೂರರು ತಾವೂ ಒಂದಿಷ್ಟು ಇಟ್ಟುಕೊಂಡು, ಇದೊಂದು ತುತ್ತು ಆಮೇಲೆ ಮೊಸರನ್ನ ಚಟ್ನಿಯ ತುತ್ತೊಂದು ಹೀಗೆ ಸ್ವರ್ಗ ಸುಖ ಅನುಭವಿಸಿದರು. ಮೂರು ದಿನ ಹಗಲೂ ರಾತ್ರಿ ಆ ಸುಖಾಸ್ವಾದನೆ ಮಾಡಿದರು. ರಜೆಯ ಅವಧಿ ಮುಗಿಯಿತಾದ್ದರಿಂದ ಮನ್ಸೂರರು ಪ್ರವಾಸಿ ಮಂದಿರವನ್ನು ಬಿಟ್ಟು ರಾಜೀವಪುರದ ಕಡೆಗೆ ಪಾದ ಬೆಳೆಸಿದರು.

*　　*　　*　　*　　*

ರಾಜೀವಪುರಕ್ಕೆ ಹಿಂತಿರುಗಿದಮೇಲೆ ಮನ್ಸೂರರು ಅಡವೀಶಪ್ಪನವರ ಮನೆಗೆ ಹೋಗಿ, ಶಿಲಾಶಾಸನಗಳ ಛಾಯಾಚಿತ್ರಗಳನ್ನೂ, ಇತರ ವಿವರಗಳನ್ನೂ ಕೊಟ್ಟರು. ಅಲ್ಲಿನ ಅನುಭವಗಳನ್ನೆಲ್ಲಾ ಹೇಳಿದರು.

“ಅನ್ಯಾಯ ಮಾಡಿದೆಯಲ್ಲೋ! ಮನ್ಸೂರ್ ಬೇಟಾ! ಪುಳಿಯೋಗರೆ ತರೋದು ಬಿಟ್ಟು ಇವನ್ನೆಲ್ಲಾ ತಂದೆಯಲ್ಲೋ?” ಎಂದರು ಅಡವೀಶಪ್ಪನವರು.

“ಹಳಸಿ ಹೋಗಬಹುದು ಅಂತ ತರಲಿಲ್ಲ” ಎಂದರು ಮನ್ಸೂರರು.

“ಪುಳಿಯೋಗರೆ ಎಲ್ಲಾದರೂ ಹಳಸುತ್ತೇನೋ? ಅದೊಂದು ಕಾಲಾತೀತವಾದ ಪದಾರ್ಥ. ದೇವರು ಒಂದೊಂದು ಸಮಯ ಹಳಸಬಹುದು. ಆದರೆ ಅವನಿಗೆ ಅಂತ ಮಾಡಿಟ್ಟ ಪುಳಿಯೋಗರೆ ಎಂದಿಗೂ ಚಿರಂಜೀವಿ ಕಣೋ!” ಎಂದು ಅಡವೀಶಪ್ಪನವರು ಹೇಳಿದರು.



# ರಂಗತ್ತೆಯ ಪಂಚತಂತ್ರ

ಮರೆಯಲಾಗದ ವಿಜಯನಗರ ಸಾಮ್ರಾಜ್ಯದಲ್ಲಿ ಸೈನ್ಯದ ಮುಖ್ಯ ಅಂಗವಾಗಿ ಸಹಸ್ರಾರು ಆನೆಗಳ ದಳ ಒಂದಿತ್ತಂತೆ. ಉತ್ತಮ ಗಜಗಳಿಗಾಗಿಯೇ ಕಟ್ಟಿದ ಲಾಯಗಳು ಎಷ್ಟೋ ಜನರ ಮನೆಗಳಿಗಿಂತಲೂ ಸೊಗಸಾಗಿತ್ತಂತೆ—

ಛತ್ರಪತಿ ಶಿವಾಜಿಯ ಹಲವಾರು ಜಯಗಳಿಗೆ, ಆತನ ಸೈನ್ಯದ ಕುದುರೆಗಳ ಚುರುಕಿನ ಓಡಾಟವೂ ಒಂದು ಮುಖ್ಯ ಕಾರಣವಾಗಿತ್ತಂತೆ—

ಆದರೆ ಈಗ ನಮ್ಮ ರಾಜೀವಪುರದ ರಾಷ್ಟ್ರದ ರಕ್ಷಣೆಗೆ ದೀಕ್ಷಾಬದ್ಧರಾದ ಸೈನ್ಯಗಳಲ್ಲಿ ಆನೆಮಾರ್ಕಿನ ಡಬ್ಬಗಳು ಸಿಗಬಹುದೇ ವಿನಹ, ಆನೆಗಳಲ್ಲ. ಕುದುರೆ ಚಿಹ್ನೆಯಿಂದ ಶೀಷೆಗಳು ಸಿಗಬಹುದಾದರೂ ಕುದುರೆಗಳು ಕುದುರೆ ಕೊಂಬಿನಂತೆ ವಿರಳ.

ಕಾರಣ ಇಷ್ಟೆ! ಆಗಾಗಿನ ಕಾಲಕ್ಕೆ ರಕ್ಷಣಾ ದಳಗಳಲ್ಲಿ ಆನೆ ಕುದುರೆಗಳು ಉತ್ತಮ ವಾಹನ, ಆಯುಧಗಳಾಗಿದ್ದವು—

ಹೇಳಿದಂತೆ ಕೇಳುವ, ಕುದುರೆಗಳಿಗಿಂತ ವೇಗವಾಗಿ ಓಡುವ ಜೀಪುಗಳು, ಆನೆಗಿಂತ ತೀವ್ರವಾಗಿ ಗುಮ್ಮುವಂತಹ ಟ್ಯಾಂಕುಗಳು ಸಿದ್ಧವಾಗಿರುವ ಈ ಕಾಲದಲ್ಲಿ ಆನೆ ಕುದುರೆಗಳು ನಿಷ್ಪ್ರಯೋಜಕ—.

ಯಾಕೆ ಹೇಳುವುದಕ್ಕೆ ಬಂದೆ ಅಂದರೆ—ರಾಜೀವಪುರದ ರಾಷ್ಟ್ರ ರಕ್ಷಣಾಫೌಜಿನಲ್ಲಿ ಕೂಡ, ಕಾಲಕ್ಕೆ ತಕ್ಕಂತೆ ಮಾರ್ಪಾಡಾಗುವುದು ಸಹಜ.

ವರ್ತಮಾನ ಕಾಲದಲ್ಲಿ, ಅಂದರೆ ಮೊನ್ನೆ ಪೇಪರಿನಲ್ಲಿ ಓದಿದೆವು. ಟ್ರಾಂಬೆಯಲ್ಲಿ ರಾಕ್ಷಸೀ ಅಣುಶಕ್ತಿಯನ್ನು ಹೊರ ಹೊಮ್ಮುತ್ತ ಹೆರುವ "ಅಪ್ಸರ" ಎಂಬ ಗರ್ಭ ಕುಲುಮೆಯೊಂದನ್ನು ಮಾನ್ಯ-ಮಾನ್ಯ ಶ್ರೀ...ರವರು ಉದ್ಘಾಟಿಸಿದರು, ಎಂಬ ಸುದ್ದಿಯನ್ನು. ಇದೇ ಅಣುಶಕ್ತಿಯನ್ನು ಹೊರ ದೇಶಗಳಲ್ಲಿ ಸಮರ ಕಾರ್ಯಗಳಿಗೆ ಅಳವಡಿಸಿಕೊಂಡು ನಡೆಸಿದ, ಬಿದ್ದೆಡೆಯೆಲ್ಲ ಭಸ್ಮವಾಗುವ ಪವಾಡಗಳನ್ನು ನಾವೆಲ್ಲ ಕೇಳಿಯೇ ಇದ್ದೇವೆ.

ಹೀಗಾಗುವಾಗ ಫೌಜಿನವರ ಕೆಲಸವೇನು? ಉತ್ತರದಿಂದ ದಕ್ಷಿಣಕ್ಕೆ, ಪೂರ್ವದಿಂದ ಪಶ್ಚಿಮಕ್ಕೆ, ಪಶ್ಚಿಮದಿಂದ ದಕ್ಷಿಣಕ್ಕೆ, ದಕ್ಷಿಣದಿಂದ ಪೂರ್ವಕ್ಕೆ ಆಕಾಶದಲ್ಲಿ, ಸ್ವಸಂಚಾಲಕ ಅಣುಶಕ್ತಿಮುಖಿ ಮಹಾ ಮಹಾ ಅಸ್ತ್ರಗಳು ಹಾರಾಡುತ್ತಿರುವಾಗ, ಕವಾಯಿತನ ಮೈದಾನದಮೇಲೆ ನಿಂತು ತಲೆಯೆತ್ತಿ ನೋಡುತ್ತಾ, ಕತ್ತು ಕೆರೆದುಕೊಳ್ಳಬೇಕು, ಅಷ್ಟೇ ಅಲ್ಲವೇ? ಕೆಲಸವಿಲ್ಲದೆ ಇರಬೇಕಲ್ಲವೇ?

ಇಂತಹ ಸಂಭವಿಸಬಹುದಾದ ಭವಿಷ್ಯವು ಸೈನ್ಯದವರಿಗೂ ಗೊತ್ತು. ಶಿಸ್ತಿನ ಜೀವನವನ್ನು ಕಡ್ಡಾಯವಾಗಿ ನಡೆಸಿ, ಜೀವನದ ಹಂಗನ್ನೇ ತೊರೆದು, ಜೀವಿಸುವ ಪಾಠ ಕಲಿತ ಸೈನಿಕರು ಕೆಲಸವಿಲ್ಲದಂತಾದರೆ, ಅವರ ಭವಿಷ್ಯವೇ ಶೂನ್ಯವಾದರೆ, ಕೆಲಸವಿಲ್ಲದ ಬಡಗಿಯಂತೆ ಯಾವುದಕ್ಕಾದರೂ ತೋಪಡ ಹಿಡಿಯಲೇಬೇಕು. ಎಲ್ಲಾದರೂ ಉಳಿ ಚಚ್ಚಲೇಬೇಕು. ತಮ್ಮ ದೇಶದ ಸರ್ಕಾರಾನೇ ಉರುಳಿಸಿ ತಾವೇ ನಿರಂಕುಶ ಪ್ರಭುಗಳಾಗಬೇಕು.

ಇದನ್ನೆಲ್ಲಾ ಕಾಮನ ಹಬ್ಬದ ಸಂಜೆ ಹೋಳಿಗೆ ತಿನ್ನುತ್ತಾ, ಲೋಕದಲ್ಲಿ ಅಲ್ಲಿ ಇಲ್ಲಿ ನಡೆದಿರುವ ಕ್ರಾಂತಿಗಳನ್ನು ರಂಗತ್ತೇಗೆ ವಿವರಿಸುತ್ತಿದ್ದೆ.

ನೋಡತ್ತೆ! ಕಾಲ ಹೀಗೆ ಕೆಟ್ಟುಹೋಯಿತು. ಕೆಲವು ಸರ್ತಿ ಬೇಲೀನೆ ಎದ್ದು ಹೊಲ ಮೇಯುತ್ತೆ ಅಂತ ಹೇಳುತ್ತಿದ್ದೆ.

"ಇದರಲ್ಲಿ ಹೊಸದೇನು ಬಂತೋ ಮಗು; ಲಾಗಾಯ್ತಿನಿಂದ ಬೇಲಿ ಎದ್ದು ಹೊಲ ಮೇಯದೇ ಇರೋಹಾಗೆ ಪಂಚತಂತ್ರಗಳನ್ನು ಹೂಡುತ್ತಿದ್ದರು. ಪುರಾಣಗಳ ಕಾಲದಲ್ಲಿ ಕೂಡ ಈ ಪಂಚತಂತ್ರಗಳು ಬಳಕೆಯಲ್ಲಿದ್ದುವು" ಎಂದು ರಂಗತ್ತೆ ಸಾವಧಾನವಾಗಿ ಹೇಳಿದಳು.

"ಅದು ಹ್ಯಾಗಮ್ಮಾ" ಎಂದು ಕುತೂಹಲದಿಂದ ಕೇಳಿದೆ. ಆಗ ರಂಗತ್ತೆ ಪುರಾಣದ ಪಂಚತಂತ್ರಗಳನ್ನು ವಿಶದೀಕರಿಸಿದಳು.

೧ - "ನೋಡು ಮಗೂ! ನಮ್ಮನೆ ಆರನೇ ಮಗಳ ಮದುವೆಗೆಂದು ಬಂದ ಮದುಮಗ ಬಲು ಜೋರಿನ ಆಸಾಮಿ; ಶಿಸ್ತುಗಾರ ಪುಟ್ಟುಸ್ವಾಮಿ ಎಂದು ಪ್ರಸಿದ್ಧನಾಗಿದ್ದ. ವರಪೂಜೆ ಮುಗಿದು, ಧಾರೆಗೆ ಅಂತ ಮದುವೆ ಮನೆಗೆ ಅವ ಬಂದಾಗ ನಾನೇನು ಮಾಡಿದೆ ಗೊತ್ತೆ? ರಸ್ತೆಯಲ್ಲಿ ವರನ ಹಣೆಗೆ ಕುಂಕುಮ ಹಚ್ಚಿದೆ. ಕತ್ತಿಗೆ ಹವಳದ ಸರ ಹಾಕಿದೆ. ಶಾಸ್ತ್ರಾಪ್ಪಾ! ಅಂತ ಪಲ್ಲವಿ ಹಾಡ್ತಾನೇ ಇದ್ದೆ. ಕಿವಿಗೆ ಕೋಡುಬಳೆ ಜೋಡಿ ಇಟ್ಟೆ. ಇನ್ನೇನು ಮೂಗಿಗೆ ದಾರ ಹಾಕಬೇಕು, ಆ ಹೊತ್ತಿಗೆ ವರ ಸೀನುಕ್ಕೆ ಶುರು ಮಾಡಿದ. ಅವನ ಮೂಗು ಹಿಡಿತಕ್ಕೆ ಸಿಗಲೇ ಇಲ್ಲ. ಆಗ ಕನ್ನಡಿ ಕಲಶ ಹಿಡಿದುಕೊಂಡು ಅವನೆದುರಿಗೆ ನಿಂತೆ. ಕನ್ನಡಿಯಲ್ಲಿ ವರ ತನ್ನ ಮುಖ ನೋಡಿಕೊಂಡ, ಅವನ ಆತ್ಮವಿಶ್ವಾಸವೇ ಛಿದ್ರವಾಯಿತು. ದಿಬ್ಬಣ ತೆರಳೋ ತನಕ ಎತ್ತಿನಂತೆ ಹೇಳಿದ ಹಾಗೆ ಕೇಳಿದ. ಇದೇ ರೀತಿ ನೋಡು. ಕರ್ಣ ಹೆಸರಾಂತ ಸೈನಾಧಿಕಾರಿ. ಬಲಶಾಲಿಯಾದವ, ಮಹಾ ಮಹಾ ಅಸ್ತ್ರಗಳನ್ನು ಹೊಂದಿದ್ದವನು. ಇಂತಹ ಕ್ರಾಂತಿಕಾರ ಹೋರಿಯಂತಹ ಸೈನ್ಯಾಧಿಪತಿಗೆ ಯುದ್ಧವಿಲ್ಲದೆ ಇದ್ದರೆ ಎಂದಾದರೂ ನನ್ನ ಮೇಲೆ ಬಿದ್ದು ಸರ್ಕಾರವನ್ನು ತಾನೇ ಅಧೀನಪಡಿಸಿಕೊಳ್ಳುತ್ತಾನೋ ಎಂಬ ಭಯದಿಂದಲೇ ದುರ್ಯೋಧನನು ಕುರುಕ್ಷೇತ್ರ ಏರ್ಪಡಿಸಿದ ಅಂತ ನಮ್ಮ ಸೋದರ ಮಾವ ಹೇಳುತ್ತಾ ಇದ್ದರು. ಹಾಗೂ ಕವಚ ಕಳೆದುಕೊಂಡು, ಶಲ್ಯ ಸಾರಥಿಯ ಮಾತುಗಳನ್ನು ಕೇಳಿದಾಗ ಅವನ ಆತ್ಮವಿಶ್ವಾಸವೇ ಛಿದ್ರವಾಗಿ ಸೋತನು. ಅಂದಮೇಲೆ ಬೇಲಿಯೆದ್ದು ಹೊಲ ಮೇಯದಂತೆ ಮಾಡಬೇಕಾದರೆ ಮೊದಲ ತಂತ್ರ ಬೇಲಿಯ ಆಧಾರ ಸ್ತಂಭಗಳ ಆತ್ಮವಿಶ್ವಾಸ ಛಿದ್ರಮಾಡೋದು.

೨ - ಕೇಳು ಮಗು ಎರಡನೆಯ ತಂತ್ರವನ್ನು.

ಒಮ್ಮೆ ಕೈ ಜಾರಿ ಕಂಚು ಕೆಳಕ್ಕೆ ಬಿದ್ದುಹೋಯ್ತು. ತಳವೇ ಕಳಚಿಕೊಂಡಿತು. ಆಗ ಸೊಸೆ ಕುಹಕವಾಗಿ ಏನೆಂದಳು ಗೊತ್ತೆ? "ಆ ಪಾತ್ರೆಗೆ ಬೆಲೆಯಿಲ್ಲ" ಎಂದು! ಸೊಸೆ ಒಮ್ಮೆ ಪಾತ್ರೆ ಕೆಡವಿ

ಅದು ಮುಕ್ಕಾದಾಗ ನಾನು ಅಂದಿದ್ದು ಆಡಿದ್ದು ಎಲ್ಲವೂ ನಮ್ಮಿಬ್ಬರಿಗೂ ಗೊತ್ತಿತ್ತು. ಅದಕ್ಕೇ ಸೊ ಅಂದಾಗ ನನ್ನ ಬಾಯಿ ಕಟ್ಟಿದಂತಾಯ್ತು, ಆಗೇನು ಮಾಡಿದೆ ಗೊತ್ತೆ? ಸಂಜೆ ತನಕ ಸುಮ್ಮನೆ ಇದ ಮಗ ಬಂದಮೇಲೆ ಮನೆಲೆಖ್ಖದ ತಪಸೀಲು ಕೇಳಿದೆ. "ಸೇರಿಗೆ ಆರಾಣೆ ಹಾಗೆ ಹುಣಸೇ ಹಣ ಕೊಂಡುಕೊಂಡೆ" ಅಂದಳು—ಸೊಸೆ. "ಏನೇ ತಾಯಿ! ನಾಲ್ಕಾಣೆಗೆ ಸಿಗುತ್ತಲ್ಲಮ್ಮಾ" ಅಂ ಅವಳೇನೆಂದಳು ಗೊತ್ತೆ "ಅದು ಹಳೇ ಹುಣಸೇಹಣ್ಣಿಗಮ್ಮಾ, ಹೊಸದಕ್ಕಲ್ಲಾ" ಎಂದಳು. ನಾನು ನಿಧಾನವಾಗಿ "ಅಷ್ಟೂ ತಿಳಿಯಲಿಲ್ಲವೇನೇ ತಾಯೀ. ಹುಣಸೇಹಣ್ಣು ಹಳೆಯದಾದರೂ ಹು ಹೋಗುಲ್ಲಾಂತ" ಅಂತಂದೆ—ನನ್ನ ಮುಖ ನೋಡಿ ಸೊಸೆ 'ಈಗ ಗೊತ್ತಾಯ್ತಮ್ಮ' ಅಂ ಅಂದುಕೊಂಡಿರಬಹುದು, ಆದರೆ ಆಡಲಿಲ್ಲ.

ಇದೇ ರೀತಿ ನೋಡು ಮಗು! ಕುರುಕ್ಷೇತ್ರದ ಯುದ್ಧಕ್ಕೆ ಸ್ವಲ್ಪ ಮುಂಚೆ, ಶಕುನಿಯಿತ್ತ ಸಲ ಮೇರೆ, ದ್ರೋಣಾಚಾರ್ಯರ ಸೈನ್ಯದ ಲೆಕ್ಕವನ್ನೆಲ್ಲಾ ತಪಶೀಲಿಸಿ ಆಡಿಟ್ ಮಾಡಲು ದುರ್ಯೋಧ ಹುಕುಂ ಮಾಡಿದ. ಇಂತಹ ಆಡಿಟ್‌ಗೆಂದೇ ಶಕುನಿ ಹಲವು ಕೊಂಡಿ ಆಡೀಟರುಗಳನ ತರಬೇತುಮಾಡಿದ್ದ. ಇವರ ಕೆಲಸ ಏನು ಗೊತ್ತೆ! ಹೀಗೆ ಮಾಡಿದ್ದನ್ನು ಹಾಗೆ ಮಾಡಿದ್ದರೆ ಇಷ ಹಣ ರಾಜ್ಯಕ್ಕೆ ಉಳಿಯುತ್ತಿತ್ತು. ಸತ್ತವನಿಗೆ ಆ ಔಷಧಿ ಕೊಡೋ ಬದಲು ಈ ಔಷಧಿ ಕೊಟ್ಟಿದ್ದರೆ ಆ ಖಾಯಿಲೆಯಿಂದ ಸಾಯುತ್ತಿರಲಿಲ್ಲ. ಹೀಗೆ ಕೊಂಡಿ ಅಬ್ಜಕ್ಷನ್ ಹಾಕುವುದರಲ್ಲಿ ನಿಸ್ಸೀಮರು

ಪಾಪ! ದ್ರೋಣಾಚಾರ್ಯರಿಗೆ ಕುರುಕ್ಷೇತ್ರದ ಯುದ್ಧದ ಮೂರು ವಾರಗಳಿಗೆ ಮುಂಚೆ ಈ ಅಡೀಟೇರುಗಳಿಗೆ ಸರಿಯಾದ ಸಬೂಬೂ ಹೇಳೋ ಗಲಾಟೇಲಿ ಅಸ್ತ್ರಾಸ್ತ್ರ ಮಂತ್ರಗಳ ಬೀಜಮಂತ್ರವೆ ಮರೆತು ಹೋಗಿತ್ತಂತೆ. ಅಂದಮೇಲೆ ಎರಡನೆಯ ತಂತ್ರ ಗೊತ್ತಾಯ್ತಲ್ಲ! ಕೊಂಡಿ ಆಡೀಟರುಗಳನ್ನೂ ನೇಮಿಸುವುದು.

೩ - ಮೂರನೆಯ ತಂತ್ರ ಬಲು ಮುಗುಮ್ಮಾದದ್ದು.

ಮಗು ಕೇಳು—(ಋಷಿ ಪಂಚಮಿ) ಐವತ್ತಮೂರನೆ ವಯಸ್ಸಾದಾಗ ಉದ್ಯಾಪನೆ ಮಾಡಬೇಕು ಅಂತ ಸಂಕಲ್ಪ ಮಾಡಿದೆ. ಆ ವಯಸ್ಸಿನವರ ಮಾತನ್ನು ಗಂಡಂದಿರು ಅಷ್ಟಾಗಿ ಕಿವಿ ಮೇಲೆ ಹಾಕಿಕೊಳ್ಳುವುದಿಲ್ಲ. ಹಿರಿಯ ಮಗನೂ ಅಷ್ಟಕ್ಕಷ್ಟೇ. ೩-೪ ಮಕ್ಕಳಿರುವ ಸೊಸೆ ಕೂಡ ಸ್ವಲ್ಪ ನಿರ್ಲಕ್ಷ ಮಾಡಿಯೇ ಮಾಡುತ್ತಾಳೆ. ನಾನು ಉದ್ಯಾಪನೆ ಮಾಡ್ತೀನಿ ಅಂದರೆ ಮೂರು ಜನರೂ ಸೇರಿ ಅದಕ್ಕೆ ಕಲ್ಲು ಹಾಕ್ತಾರೆ, ಅಂತ ಭಯವಿತ್ತು. ಕಾರಣ ಈ ಮೂವರೂ ಒಟ್ಟುಗೂಡಿ ಉದ್ಯಾಪನೆ ವಿಚಾರ ಮಾತನಾಡದ ಹಾಗೆ ಸಾಧಿಸಿದೆ. ಉದ್ಯಾಪನೆ ದಿನ ಇವರೆಲ್ಲರೂ ನನ್ನ ಒಡ್ಡೋಲಗದಲ್ಲಿ ಕಿಂಕರರಂತೆ ಅಡ್ಡಾಡಿ ಕೆಲಸ ಮಾಡಿದರು.

ಅದೇ ರೀತಿ ನೋಡು ಮಗು, ಭೀಷ್ಮನಿಗೆ ನೆಗಡಿ ಹಿಡಿದಿದೆ. ಆತನ ಹತ್ತಿರ ಹೋದ ಸೈನ್ಯಾಧಿಕಾರಿಗಳಿಗೆಲ್ಲಾ ಏಷ್ಯನ್ ಫ್ಲೂ ಬರುತ್ತೆ, ಅಂತ ಕೃಷ್ಣ ಪರಮಾತ್ಮ ಒಂದು ಸುದ್ದಿ ಹರಡಿಸಿದನಂತೆ-ಅಂದಮೇಲೆ ಭೀಷ್ಮಾಚಾರ್ಯರು ಪಂಚರಾತ್ರಿಗಳಲ್ಲೂ ಅಧಿಕಾರಿಗಳ ಗುಪ್ತ ಸಭೆ ಸೇರಿಸಲಾಗದೆ ಕುರುಕ್ಷೇತ್ರದಲ್ಲಿ ಸೋಲನ್ನಪ್ಪಬೇಕಾಯ್ತು. ಮೂರನೆಯ ಮುಗುಮ್ಮಾದ ತಂತ್ರ ಬೇಲಿ ಕಂಬಗಳು ಗುಪ್ತ ಸಭೆ ಸೇರದಂತೆ ಏರ್ಪಡಿಸುವುದು.

೪ - ನಾಲ್ಕನೆಯ ತಂತ್ರ ಬಲು ಯಶಸ್ವೀ ತಂತ್ರ ಮಗು. "ಹುಲಿ ಬಂತು ಹುಲಿ ಬಂತು" ತಂತ್ರ ಅನ್ನಬಹುದು.

ಶಿವರಾತ್ರಿ ಸಂಜೆ ದೇವಸ್ಥಾನದಿಂದ ಹಿಂತಿರುಗಿ ಬರುತ್ತಿದ್ದಾಗ, ಮಗ ಸ್ನೇಹಿತರೊಂದಿಗೆ ಬಿಲ್ಪತ್ರೆ ಮರದಡಿಯಲ್ಲಿ ಸಿಗರೇಟು ಎಳೆಯುತ್ತಿದ್ದುದನ್ನು ಕಂಡೆ. ನಿಮ್ಮ ತಾತನ ಕೋಪ ನಿನಗೊತ್ತಲ್ಲ ಮಗು! ಮಗ ಸಿಗರೇಟು ಏಳೀತಾನೆ ಅಂತ ಹಠಾತ್ತಾಗಿ ಗೊತ್ತಾದರೆ, ಏನಾದರೂ ಅಪಾಯಕಾರಿ ರಾದ್ಧಾಂತ ಮಾಡಿಬಿಡೋ ಆಸಾಮಿ. ಅದಕ್ಕೆ ಏನು ಮಾಡಿದೆ ಗೊತ್ತೆ? ಆವತ್ತಿನಿಂದ ನವರಾತ್ರಿ ತನಕ ಅವರಿಗೆ ಸಿಗರೇಟು ಸುದ್ದಿ ಹೇಳಲು ಶುರುಮಾಡಿದೆ. ನೋಡೀ ಅಂದ್ರೆ! ಶಿವಾಲಯದ ಅರ್ಚಕರು ಬೀಡಿ ಸೇದುತ್ತಿದ್ದರಂತೆ. ಆ ಮಠದ ಸ್ವಾಮಿಗಳು ಭಂಗಿ ಎಳೆಯುತ್ತಾರಂತೆ. ವಸಿಷ್ಠರು ಕೂಡ ಇಂದ್ರನಿಂದ ಗೋಲ್ಡನ್ ಕ್ಲಾಡ್ ಸಿಗರೇಟು ಇಸಕೊಂಡರಂತೆ—ಅಂದಹಾಗೆ ಅಂದರೆ ಊರ್ವಶೀ ಕೂಡ ಸಿಗರೇಟು ಸೇದುತ್ತಿರುವಾಗ ವರುಣ ಬಂದಾಗ ಸಿಗರೇಟು ಆರಿಹೋದುದಕ್ಕೆ ರೇಗಿದಳಂತೆ. ಹೀಗೆ "ಹುಲಿ ಬಂತು ಹುಲಿ ಬಂತು" ಮಾಡಿದೆ. ಕಡೆಗೆ ಮಗನ ಚಾಳಿ ಗೊತ್ತಾದಾಗ, ಅವರು ರೇಗಲೇ ಇಲ್ಲ.

ಅದೇರೀತಿ ನೋಡು ಮಗು! ಅಶ್ವತ್ಥಾಮೋ ಹತಃ ಅಂತ ಧರ್ಮರಾಯನ ಕೈಲಿ ಆಕಾಶವಾಣೀಲಿ ಪ್ರಸಾರ ಮಾಡಿಸಿದಾಗ ಪಾಂಡವರಿಗೆ ಜಯ ಖಂಡಿತವಾಯ್ತು. ಅದಕ್ಕೇ ಮಗು ಗೀತೆಯಲ್ಲಿ ಶಂಖಂ ದಧ್ಮೌ ಪ್ರತಾಪವಾನ್ - ಶಂಖಂ ದಧ್ಮೌ ಪೃಥಕ್ ಪೃಥಕ್ ಹೇಳಿದ್ದಾರೆ.

೫ - ಐದನೇ ತಂತ್ರ ಇನ್ನೂ ಚೆನ್ನ ಮಗು.

ಏನೇ ಬರಲಿ ಎಲ್ಲರೂ ಒಟ್ಟಿಗಿರದಿರಲಿ ಎನ್ನುವುದೇ ತಂತ್ರ. ಊರಲ್ಲಿ ಸಿಡುಬೇಳುತ್ತಿದ್ದಾಗ, ಸೋಮವಾರ ಬೆಳಿಗ್ಗೆ ಸಿಡುಬುದಾರನನ್ನು ಮನೆಗೆ ಬರಹೇಳಿದ್ದೆ. ರಜಾ ಬಂದ ದಿನ, ಎಂಟು ಮಕ್ಕಳೂ ಎಲ್ಲಿರುತ್ತಾರೆ, ಮನೆಯಲ್ಲಿ? ಅದಕ್ಕೆ ಈರುಳ್ಳಿ ದೋಸೆ ಸೋಮವಾರ ಬೆಳಿಗ್ಗೆ ಅಂತ ಭಾನುವಾರದಿಂದ ಮನೇಲಿ ಈರುಳ್ಳಿ ವಾಸನೆ ಹರಡಿದೆ. ಸೋಮವಾರ ಬೆಳಿಗ್ಗೆ ಇನ್ನೂ ಕಾವಲಿ ಒಲೆಮೇಲೆ ಇಡೋದಕ್ಕೆ ಮುಂಚೇನೇ ಎಂಟೂ ಮಕ್ಕಳು ಅಡಿಗೆ ಮನೆಯಲ್ಲಿ ಒಟ್ಟಿಗೆ ಸಿಡುಬುದಾರನ ಕೈಗೆ ಸಿಕ್ಕಿ ಹಾಕಿಕೊಂಡರು.

ಹಾಗೇನೇ ನೋಡು! ಬೇಲಿ ಕಂಬಗಳೆಲ್ಲ ಒಟ್ಟಿಗೆ ಸಿಕ್ಕಿ ಹಾಕಿಕೊಂಡರೆ ನಿರ್ನಾಮವಾಗುತ್ತೆ. ಅದಕ್ಕೇ ನೋಡು ಅಶ್ವತ್ಥಾಮ ದೂರ ಇದ್ದು ಕೌರವರೆಲ್ಲಾ ನಾಶವಾದಮೇಲೆ ಅವರ ಪರವಾಗಿ ತಾನಾದರೂ ಸೇಡು ತೀರಿಸಿಕೊಳ್ಳಲು ಸಾಧ್ಯವಾಯಿತು. ಮಧ್ಯಏಷ್ಯಾ ರಾಷ್ಟ್ರಗಳಲ್ಲಿ ದೇಶವನ್ನ ರಕ್ಷಿಸುವ ಬೇಲಿ ಕಂಭಗಳೇ ಹೊಲ ಮೇಯುತ್ತೆ ಅಂತ ನೀನಂದದ್ದು ಅಷ್ಟೇನೂ ಸೋಜಿಗದ ಸುದ್ದಿ ಅಲ್ಲ. ಮಹಾಭಾರತದ ಕಾಲದಿಂದಲೂ ಅಸ್ತ್ರಾಸ್ತ್ರಗಳು ಆಕಾಶದಲ್ಲಿ ಹಾರಾಡುತ್ತಿದ್ದ ಕಾಲದಲ್ಲೂ ಈ ಭಯವಿದ್ದೇ ಇತ್ತು. ಪರಿಹಾರಕ್ಕಾಗಿ ಪಂಚತಂತ್ರಗಳನ್ನು ಆಗಿನಿಂದಲೂ ನಮ್ಮ ಹಿರಿಯರು ಹೂಡಿದ್ದರು. ಅವನ್ನೇ ಸಂಸಾರಕ್ಕೂ ಅಳವಡಿಸಿಕೊಂಡು, ನಾನೂ ನಿಮ್ಮನ್ನೆಲ್ಲಾ ಮುಂದಕ್ಕೆ ತಂದೆ" ಎಂದು ಹೇಳಿದಳು.

ಮಹಾಭಾರತದಲ್ಲಿ ಆದುದನ್ನು ಭಾರತದಲ್ಲಿ ಮಾಡಲು ಅಸಾಧ್ಯವಲ್ಲವಲ್ಲ!

ಭಾರತದಲ್ಲಿ ಆದುದನ್ನು ರಾಜೀವಪುರದಲ್ಲಿ ಸಾಧಿಸಬಹುದಲ್ಲ! 

# ಇಂದಾ-ಗೆ ಗುಮಾಸ್ತೆ

**ಶಂ**ಕರು ಒಂದು ಒನಕೆ ಹಿಡಿದುಕೊಂಡು ನಮ್ಮ ಮನೆಯ ಮುಂದೆ ನಡೆದುಹೋಗುತ್ತಿದ್ದ. ಕಣ್ಣುಕಣ್ಣು ಬಿಟ್ಟು ನೋಡಿದೆ. ಸಾಕ್ಷಾತ್ ಶಂಕರೂನೇ!

ಊರ ಸೆಟ್ಟರ ಒಬ್ಬನೇ ಮಗ ಶಂಕರು. ಅವರ ದಿನಸಿ ಮಂಡಿಯಲ್ಲಿ ದಿನಕ್ಕೆ ಏನಿಲ್ಲ ಅಂದರೂ ಐನೂರು, ಆರುನೂರು ರೂಪಾಯಿಗಳ ವ್ಯಾಪಾರ ಆಗುತ್ತೆ. ಶ್ರೀಮಂತ ಸಂಸಾರ. ಅಂಗಡಿ ಮುಚ್ಚುವ ಹೊತ್ತಿಗೆ ಒಂದು ಕಾಲು ಗಂಟೆ ಮುಂಚೆ ಶಂಕರು ಅಂಗಡಿಗೆ ಹೋಗುತ್ತಾನೆ. ಲೆಕ್ಕದ ಪುಸ್ತಕ, ಇರುವ ನಗದು ಹಣದ ತಪಶೀಲು ನೋಡುತ್ತಾನೆ. ಅಲ್ಲಿಗೆ ಅವನ ಕೆಲಸ ಮುಗಿಯಿತು. ಮಿಕ್ಕ ಹೊತ್ತಿನಲ್ಲೆಲ್ಲ ಮೋಜು ಮಾಡ್ತಾ ಇರ್ತಾನೆ. ಮನೆಗೆ ಬಟ್ಟೆ ಬರೆ ಕೊಂಡುಕೊಳ್ಳಬೇಕು ಎಂದರೆ ಊರ ಸೆಟ್ಟರು ಹೋಗಬೇಕು, ಅಥವಾ ಶಂಕರು ಹೆಂಡತಿ ಹೋಗಬೇಕು. ಮನೆಯಲ್ಲಿ ಒಂದು ಹಬ್ಬ, ಒಂದು ಲಿಂಗಧಾರಣೆ, ಒಂದು ಪೂಜೆ, ಏನೇ ಆಗಲಿ ಊರ ಸೆಟ್ಟರು ಓಡಾಡಬೇಕು, ಇಲ್ಲ, ಶಂಕರು ಹೆಂಡತಿ ಒದ್ದಾಡಬೇಕು. ಹೀಗೆ ಮೋಜು ಮಾಡುವ ಶಂಕರು, ನಡುರಸ್ತೇಲಿ ಬೆಳಗಾಗುತ್ತಲೂ ಒನಕೆ ಹಿಡಿದುಕೊಂಡು ಹೊರಟ ಅಂದರೆ ತುಂಬಾ ಸೋಜಿಗವಾಗಿ ಕಾಣಿಸಿತು. ಕಾರಣ, ನಾನೂ "ಶಂಕರೂ, ಶಂಕರೂ" ಅಂತ ಗಟ್ಟಿಯಾಗಿ ಕೂಗಿದೆ.

ಶಂಕರೂ ನಾನೂ ಶಾಲೆಯಲ್ಲಿ ಸಹಪಾಠಿಗಳು. ಇಸ್ಪೀಟಿಗೆ ಕೂಡ ನಾವೇ ಖಾಯಂ ಜತೆ. ಹಾಗಾಗಿ ಸಲಿಗೆ ಹೆಚ್ಚು.

"ಏನಪ್ಪಾ! ಅದು!—ಈಗ ತುರ್ತು ಕೆಲಸ ಇದೆ. ಸಾಯಂಕಾಲ ನಿನ್ನ ಬಂದು ಕಾಣ್ತೇನೆ" ಎಂದ. ಬಿರಬಿರನೆ ಮುಂದೆ ನಡೆದ.

ಅರೆ! ಎಲ್ಲಿಗೆ ಹೀಗೆ ಆತುರವಾಗಿ ಹೋಗುತ್ತಿದ್ದಾನೆ? ಏಕೆ? ಈ ವಿಷಯ ನನ್ನನ್ನು ಸಾಯಂಕಾಲದ ತನಕ ಕಾಡುತ್ತೆ. ನನ್ನ ಜಾಯಮಾನವೇ ಹಾಗೆ! ಮನಸ್ಸಿನಲ್ಲಿ ಯಾವುದಾದರೂ ವಿಷಯ ಕೊಂಡಿ ಹಾಕಿಕೊಂಡರೆ, ಅದು ಕಳಚುವವರೆಗೂ ಅದೇ ಧ್ಯಾನ. ಆದುದರಿಂದ ನಾನೂ ಅವನನ್ನು ಹಿಂಬಾಲಿಸಿದೆ.

ನಮ್ಮ ರಸ್ತೆಯ ಕೊನೆಯ ಮನೆ ಹತ್ತಿರ ನಿಂತ. ಹಿಂತಿರುಗಿದ. ನನ್ನ ಕಂಡ. ನಾನು ಅವನ ಹತ್ತಿರಕ್ಕೆ ಬರುವ ತನಕ ನಿಂತಿದ್ದ.

"ಒಂದು ನಿಮಿಷ ನಿಂತಿರು. ಈ ಮನೆಯೊಳಕ್ಕೆ ಹೋಗಿ ಒನಕೆಯನ್ನು ಕೊಟ್ಟು ಬರುತ್ತೇನೆ. ಆಮೇಲೆ ಮಾತನಾಡೋಣ" ಎಂದ.

ಮನೆಯೊಳಕ್ಕೆ ಹೋಗಿ, ಒನಕೆಯನ್ನು ಕೊಟ್ಟು ಬಂದ.

"ಏನಯ್ಯಾ! ಇದರ ಮರ್ಮ. ಮನೆಯಲ್ಲಿ ಒಂದು ಕೆಲಸ ಮಾಡುಲ್ಲ. ಅಂತಹವ ಕಂಡೋರ ಮನೆಗೆ ಒನಕೆ ಹೊರುತ್ತಿ? ಏನು ಇದರ ಗೂಡಾರ್ಥ?" ಎಂದು ಕೇಳಿದೆ, ನಮ್ಮನೆಯ ಕಡೆಗೆ ಅವನನ್ನೂ ಕರೆದುಕೊಂಡು ಹಿಂತಿರುಗುತ್ತಾ.

"ಶ್ರೀನಿವಾಸರಾಯರು ಈ ತಾಲೂಕಿಗೆ ಹೊಸದಾಗಿ ವರ್ಗವಾಗಿದ್ದಾರೆ. ನಿನ್ನೆ ಸಿಕ್ಕಿದ್ದರು. ಮನೇಲಿ ಒನಕೆ ಇಲ್ಲ ಅಂತ ಅಂದರು. ಅದಕ್ಕೇನು ರಾಯರೇ ನಾನು ತಂದುಕೊಡ್ತೀನಿ ಎಂದು ಹೇಳಿದೆ. ನಮ್ಮೂರಿಗೆ ಬಂದವರು, ನಮ್ಮ ದಿನಸಿ ಅಂಗಡಿಯಲ್ಲಿ ವ್ಯಾಪಾರ ಮಾಡುವಂತೆ ಪುಸಲಾಯಿಸಬೇಡವೇ?" ಎಂದ.

"ಎಲ ಎಲಾ! ಇದೆಂತಹ ವ್ಯಾಪಾರ ಬುದ್ಧಿ ಬಂತು ಇವನಿಗೆ. ಕತೆ ಪುಸ್ತಕ ಓದುತ್ತಾ ಕೂತಿರುತ್ತಾನೆ. ಸಿಗರೇಟು ಬಾಯಲ್ಲಿರುತ್ತೆ. ಬೆಂಕಿಕಡ್ಡಿ ಇಲ್ಲ ಅಂತ ಹಾಗೇ ಕೂತಿರುತ್ತಾನೆ. ಎಷ್ಟೋಸಲ ನಾನು ಹೋದಾಗ, ನನ್ನ ಹತ್ತಿರ ಬೆಂಕಿಪೊಟ್ಟಣ ಇಸುಕೊಂಡು ಸಿಗರೇಟ್ ಹತ್ತಿಸಿದ್ದಾನೆ, ತಾನು ಎದ್ದು ಹೋಗಿ ಕಡ್ಡಿಪೆಟ್ಟಿಗೆ ತರುಲ್ಲ. ಇಂತಹ ಚಾಣಸ ಮನುಷ್ಯ ಇಷ್ಟು ತರಾತುರಿಯಿಂದ ನೆರೆಹೊರ್ಕೆಯ ನೆಪ ಹೇಳಿ ಒನಕೆ ಹೊರುತ್ತಾನಲ್ಲ, ಕೇಳಿದರೆ ಈ ಜವಾಬು ಕೊಟ್ಟನಲ್ಲ. ಏನೋ ಇರಬೇಕು, ಹೇಳಬಾರದ ಸಂಗತಿ" ಎಂದಂದುಕೊಂಡು ಈಗ ಕೆದಕುವುದು ಸರಿಯಲ್ಲ ಎಂದು ಸುಮ್ಮನಾದೆ.

*　　*　　*　　*　　*

ಸಾಯಂಕಾಲ ಶಾಲೆಯ ಕೆಲಸ ಮುಗಿಸಿಕೊಂಡು ಓ ಲಕ್ಷ್ಮಣ ಅಂತ ಮನೆಗೆ ಬಂದೆ. ನಮ್ಮನೆ ಎದುರಿಗೇ ಸಿದ್ದರಾಮಯ್ಯ ಒಂದು ಬುಟ್ಟಿ ತುಂಬಾ ತರಕಾರಿ ತೆಗೆದುಕೊಂಡು ಹೋಗುತ್ತಿದ್ದ. ತರಕಾರಿ ಮಾರುಕಟ್ಟೆ ಇರುವುದು ನಮ್ಮನೆಯ ಪಶ್ಚಿಮಕ್ಕೆ. ಇವ ಪೂರ್ವಕ್ಕೆ ಹೋಗುತ್ತಿದ್ದಾನೆ!

ಸಿದ್ದರಾಮಯ್ಯ ನಮ್ಮೂರಿನಲ್ಲಿ ಭಾರಿ ತರಕಾರಿ ತೋಟ ಬೆಳೆಸಿದ್ದಾನೆ. ತಾನು ಬೆಳೆದ ತರಕಾರಿಯನ್ನೆಲ್ಲ ಮಾರುಕಟ್ಟೆಯ ಮೂರು ಸ್ವಂತ ಅಂಗಡಿಗಳಲ್ಲಿ ಮಾರುತ್ತಾನೆ. ಒಂದು ದಿನವಾದರೂ ಅವ ಇನ್ನೊಬ್ಬರಿಗೆ ಒಂದು ಹಸಿರು ಚಿಗುರನ್ನೂ ಕೊಟ್ಟಿದ್ದಿಲ್ಲ. ಇನ್ನೊಬ್ಬರಿಗೆ ಕೊಡೋದು ಹಾಗಿರಲಿ, ತಾನಾದರೂ ಒಂದು ದಿನವಾದರೂ, ತಾನೇ ಬೆಳೆದ ತರಕಾರಿಯನ್ನು ಮನೆಯಲ್ಲಿ ಅಡಿಗೆ ಮಾಡಿಸಿದ್ದಿಲ್ಲ. ಬೆಳೆದ ಎಲ್ಲ ತರಕಾರಿಯನ್ನೂ ಮಾರಿ, ಬಂದ ಹಣದಲ್ಲಿ ಲೇವಾದೇವಿ ಮಾಡಿ, ಹಣದ ಬಾಣಂತನವನ್ನು ಹೂಡುತ್ತಾನೆ. ಅಂತಹ ಆಸಾಮಿ ತರಕಾರಿ ಬುಟ್ಟಿಯನ್ನು ತಾನೇ ತೆಗೆದುಕೊಂಡು ಹೋಗಿ ಯಾರಿಗೆ ಕೊಡ್ತಾನೆ?

ಈ ಕುತೂಹಲ ಕೆರಳಿತು. ಸರಿ, ಅವನ ಹಿಂಬಾಲು ಬಿದ್ದೆ. ಕೊನೇ ಮನೆಯ ಹತ್ತಿರ ನಿಂತ. ಹೋಗಿ ಬುಟ್ಟಿಯನ್ನು ವರಾಂಡದಲ್ಲಿದ್ದ ಮನೆಯಾಕೆಗೆ ಒಪ್ಪಿಸಿದ. ದುಡ್ಡನ್ನೇನೂ ಆಕೆ ಕೊಡಲಿಲ್ಲ. ಇವನೂ ಕೇಳಲಿಲ್ಲ. ಹಿಂತಿರುಗಿದ.

ಇದೆಲ್ಲ ಪ್ರಳಯದ ಸೂಚನೆ ಎಂದುಕೊಂಡೆ. ಇಂತಹ ಆದ್ಮಿ ಹೀಗೆ ಪುಕ್ಕಟ್ಟು ತರಕಾರೀನ ಕೊಟ್ಟು ಬರೋದು ಎಂದರೆ ಏನು? ಏನೋ ನಮ್ಮ ದೇಶಕ್ಕೆ ಹೊತ್ತುಗಾಲ ಬಂದಿದೆ ಎಂದುಕೊಳ್ಳುತ್ತಾ ಮನೆಗೆ ಹಿಂತಿರುಗಿದೆ.

ರಾತ್ರಿ ಊಟಕ್ಕೆ ಕುಳಿತಿದ್ದೆ. ಸಾರನ್ನ, ಬಾಳೇಕಾಯಿ ಪಲ್ಯ ತಿನ್ನುತ್ತಾ ಇದ್ದೆ. ಶಾಲಾ ಮಾಸ್ತರು ಅಂದರೆ ಸಂಬಳದ ವೈಭವ ಗೊತ್ತಲ್ಲ! ಬಾಳೇಕಾಯಿ, ಬಾಳೇದಿಂಡು, ಸೊಪ್ಪು ಸೆದೆ ಬಿಟ್ಟರೆ ಬೇರೆ ತರಕಾರಿ ಕಂಡೇ ಇರುಲ್ಲವಲ್ಲ. ಬೇಜಾರು ಆದರೂ ತಿನ್ನಲೇಬೇಕಲ್ಲ. ಅಗಿದುಅಗಿದು ತಿನ್ನುತ್ತಾ ಇದ್ದೆ, ತಲೆ ಬಗ್ಗಿಸಿಕೊಂಡು. ಇನ್ನೇನು ಅದು ಮುಗಿಯಬೇಕು.

"ಜವಳಿ ತಿಮ್ಮಪ್ಪಯ್ಯನ ಕೆಂಚೂ ನೋಡಿದಿರಾ ಅಂದ್ರೆ, ಏನು ಜಂಭ ಬಂದುಬಿಟ್ಟಿದೆ ಅವಳಿಗೆ" ಎಂದಳು ಹಠಾತ್ತಾಗಿ, ನನ್ನ ಹೆಂಡತಿ.

ತಲೆ ಎತ್ತಿ ನೋಡಿದೆ. ಬುಸುಗುಡುತ್ತಿತ್ತು ಅವಳ ಮುಖ.

"ಏಕೆ? ಏನು ಮಾಡಿದಳು?" ಅಂತ ಕೇಳಿ ಮೊಸರು ಬಡಿಸಿಕೊಂಡೆ. ಅದರಲ್ಲಿ ಕಲಸಿ ಸಾವಧಾನವಾಗಿ ಒಂದು ತುತ್ತು ಬಾಯಿಗಿಟ್ಟುಕೊಂಡೆ.

ನಂಚಿಕೊಳ್ಳುಕ್ಕೆ ಒಂದು ಸೌಟು ಬೇಳೆ ಚರಟ ಬಡಿಸಿ ಹೇಳಿದಳು.

"ಕೆಂಚೂ ಮನೇಲಿ, ನೋಡಿದೀರಲ್ಲಾ ಅಂದ್ರೆ, ಅಷ್ಟು ಕೆಂಡಸಂಪಿಗೆ ಹೂವು ಬಿಡುತ್ತೆ. ನಮ್ಮನೇಗೂ ಆಗಾಗ್ಗೆ ಕಳಿಸಿಕೊಡುತ್ತಿದ್ದಳು. ಇವತ್ತು ಸಂಜೆ ಮುಂದೆ ಒಂದು ತಟ್ಟೆ ತುಂಬಾ ಕೆಂಡಸಂಪಿಗೆ ಹೂವು ತೆಗೆದುಕೊಂಡು, ನಮ್ಮನೆಯ ಮುಂದೆ ಹೋದಳು. ಒಳಕ್ಕೆ ಬರಲೂ ಇಲ್ಲ. ಒಂದು ಹೂವನ್ನೂ ಕೊಡಲಿಲ್ಲ. ಇಷ್ಟನ್ನೂ ಎಲ್ಲಿಗೆ ತೆಗೆದುಕೊಂಡು ಹೋಗ್ತಾಳೆ ಅಂತ ಕುತೂಹಲವಾಯಿತು. ಮನೆಗುಡಿಸುಕ್ಕೆ ಬಂದಿದ್ದ ತಿಮ್ಮೀನ ಕರೆದು "ಕೆಂಚು ಹಿಂದೆ ಹೋಗಿ ನೋಡಿಕೊಂಡು ಬಾ, ಎಲ್ಲಿಗೆ ಹೋಗಿ ಹೂವು ಕೊಡ್ತಾಳೆ ನೋಡು" ಎಂದು ಹೇಳಿ ಅವಳ ಹಿಂದೆಯೇ ಅಟ್ಟಿದೆ. ಹಿಂತಿರುಗಿ ಬಂದು ತಿಮ್ಮಿ..."

ಬೇಗ ಮೊಸರನ್ನದ ತುತ್ತು ನುಂಗಿ, ಗುಟುಕು ನೀರು ಕುಡಿದು,

"ರಸ್ತೆಯ ಕೊನೆ ಮನೆಗೆ ಕೆಂಚೂ ಕೊಟ್ಟು ಬಂದಳು ಅಂತ ಹೇಳಿದಳು. ಅಲ್ಲವೇ?" ಎಂದೆ.

"ನಿಮಗೆ ಹೇಗೆ ಗೊತ್ತಾಯಿತು, ಅಂದ್ರೇ" ಎಂದು ಉದ್ಗಾರ ತೆಗೆದಳು.

ಬೆಳಗಿನಿಂದ ಕಂಡಿದ್ದನ್ನು ನಾನು ಹೇಳಿದೆ.

"ಹಾಗೇ ಅಂದ್ರೆ! ಕೊನೆ ಮನೆಯಲ್ಲಿ ಯಾರಿದ್ದಾರೋ ತಿಳಿದುಕೊಂಡು ಬರಬೇಕು ನಾಳೆ" ಎಂದು ನನ್ನ ಹೆಂಡತಿ ಆಗಲೇ ತೀರ್ಮಾನಿಸಿದಳು.

* * * * *

ನಾಲ್ಕೈದು ದಿನಗಳಾಯಿತು. ಚಿಕ್ಕ ಹುಡುಗನೊಬ್ಬನನ್ನು ಕರೆದುಕೊಂಡು ಶಾಲೆಗೆ ಸೇರಿಸಲು ನನ್ನ ಬಾಲ್ಯ ಸ್ನೇಹಿತ ಶೀನಿ ಬಂದ.

"ಈ ಊರಿಗೆ ಯಾವಾಗ ಬಂದೆಯೋ? ಎಲ್ಲಿ ಕೆಲಸ ಮಾಡ್ತಾ ಇದಿ, ಮನೇಲೆಲ್ಲಾ ಚೆನ್ನಾಗಿದಾರೆಯೇ?" ಎಂದು ಕುಶಲ ಪ್ರಶ್ನೆಗಳನ್ನು ಕೇಳಿದೆ.

ಶೀನಿಯನ್ನು ಕಂಡರೆ ತುಂಬಾ ವಿಶ್ವಾಸ ನನಗೆ. ನಾವಿಬ್ಬರೂ ಹಾಯ್ ಸ್ಕೂಲಿನಲ್ಲಿ ಒಟ್ಟಿಗೇ ಓದುತ್ತಿದ್ದೆವು. ಅವರ ಮನೆಯಲ್ಲಿ ಎಷ್ಟೋ ಮಧ್ಯಾಹ್ನ ಅವನ ತಾಯಿ ನನಗೂ ತುತ್ತು ಹಾಕಿದ್ದಳು. ಆದರೆ ಶೀನೀಗೆ ಸುಲಭವಾಗಿ ವಿದ್ಯೆ ಹತ್ತಲಿಲ್ಲ. ನಾನು ಎಂ.ಎ., ಬಿ.ಇಡಿ. ಮಾಡಿದಾಗ ಅವ

ಮೆಟ್ರಿಕ್ಯುಲೇಷನ್ ಪ್ಯಾಸ್ ಮಾಡಿದ. ನಂತರ ನಾನೀ ಊರಿಗೆ ಶಾಲಾ ಮಾಸ್ತರಾಗಿ ಬಂದೆ. ಅವನ ವಿಷಯ ತಿಳಿದಿರಲಿಲ್ಲ. ಅವನ ಮಗನಿಗಾದರೂ ಚೆನ್ನಾಗಿ ಓದು ಕಲಿಸಿ ಅಪ್ಪನ ನೆರವಾಗಲಿ ಎಂದು ಆಗಲೇ ನಿರ್ಧಾರ ಮಾಡಿದೆ.

“ನಾಲ್ಕೈದು ದಿನಗಳಾಯಿತು ಈ ಊರಿಗೆ ವರ್ಗವಾಗಿ. ಇವನೊಬ್ಬನೇ ಮಗ ನನಗೆ. ಇವನಿಗಾದರೂ ಓದು ಹಿಡಿಯುತ್ತೇನೋ ಅಂತ ಆಸೆ. ನೀನು ಇಲ್ಲಿ ಮಾಸ್ತರಾಗಿದ್ದಿ ಎಂದು ತಿಳಿಯಿತು. ನಿನ್ನ ಕೈಲಿ ಹಾಕೋಣ ಅಂತ ಬಂದೆ” ಎಂದ ಶೀನಿ.

“ಸರಿ ಕಣೋ! ಆದರೆ ಯಾವ ಕೆಲಸದಲ್ಲಿದಿ, ಏನು ಸಂಬಳ” ಎಂದೆ. “ಇಂದಾ-ಗೆ ಗುಮಾಸ್ತೆ ಕೆಲಸ ಕಣೋ, ನಿಮ್ಮನೆ ರಸ್ತೆಯ ಕೊನೆ ಮನೆಯನ್ನು ಬಾಡಿಗೆಗೆ ಹಿಡಿದಿದ್ದೇನೆ” ಎಂದ ಶೀನಿ.

ಅರೆ! ಎಲ್ಲರೂ ಹೋಗಿ ನಜರ್ ಒಪ್ಪಿಸಿ ಬರುವ ಕೊನೇ ಮನೆಯಲ್ಲಿ ನಮ್ಮ ಶೀನಿ! ಇಂದಾ-ಗೆ ಗುಮಾಸ್ತೆಗೆ ಇಷ್ಟೆಲ್ಲಾ ಉಪಚಾರ!

“ಯಾವ ಕಚೇರೀಲಿ ಇಂದಾ-ಗೆ ಗುಮಾಸ್ತೆಯಾಗಿದ್ದೀ” ಎಂದೆ.

“ಸೇಲ್ಸ್ ಟ್ಯಾಕ್ಸ್ ಆಫೀಸಿನಲ್ಲಿ” ಎಂದ ಶೀನಿ.

“ಆ!” ಅಂದೆ. ಅವನನ್ನು ತಬ್ಬಿಕೊಂಡೆ.

“ಶೀನಿ, ಇನ್ನು ಮೇಲೆ ನಿನ್ನ ಮಗನ ವಿದ್ಯಾಭ್ಯಾಸದ ಹೊಣೆ ನನ್ನದು. ನಮ್ಮನೆಗೆ ದಿನಸಿ ತಂದು ಹಾಕೋದು ನಿನ್ನ ಹೊಣೆ. ಇಬ್ಬರಿಗೂ ಭಾರವಿಲ್ಲ. ಏನಂತೀ” ಎಂದೆ.

“ಅದನ್ನೂ ಹೇಳಬೇಕೇನೋ” ಅಂದ ಶೀನಿ.

ಯಾರ ಇಂದಾ ನೋ ಯಾರಿ ಗೇ ತಲುಪುತ್ತೊ?

■

# ಹೆಣ್ಣು ನೋಡುಕ್ಕೆ ಬಂದಾಗ

ಹೆಣ್ಣು ನೋಡುಕ್ಕೆ ಅಂತ ಅವರೆಲ್ಲಾ ಬಂದಿದ್ದಾಗಲೇನೆ, ಈ ಹಾಳು ಮಗು ಹೀಗ ಮಾಡಬೇಕೆ? ಆಗೋ ಮುದುವೇನೂ ತಪ್ಪಿಸಿಬಿಡ್ತೇನೋ ಅಂತ ಏರಿದ ದುಃಖದಲ್ಲಿ ಎರಡ ಬಿಗಿದೂ ಬಿಟ್ಟೆ, ಬಂದವರೆಲ್ಲ ಹೋದಮೇಲೆ—

*        *        *        *        *

ಏನಾಯ್ತು ಅಂತೀರಿ! ಭಾನುವಾರದ ಸಂಜೆ ರಾಮು, ಗೋಪಿ, ಮನೆಗೆ ಬಂದಿದ್ದರು. ನಾವ ಮೂವರೂನೂ ಒಟ್ಟಿಗೆ ಎಂಜನಿಯರಿಂಗ್ ಪ್ಯಾಸು ಮಾಡಿದ್ದೆವು. ರಾಜೀವಪುರದಲ್ಲಿ ಕಂಟ್ರಾಕ್ಟ್ ಮಾಡ್ತಾ ನಾನು ಉಳಿದುಕೊಂಡಿದ್ದೆ. ಅವರಿಬ್ಬರೂ ಉತ್ತರದಲ್ಲೊಬ್ಬ ದಕ್ಷಿಣದಲ್ಲೊಬ್ಬ ಕೆಲಸದಲ್ಲಿದ್ದರು. ನಮ್ಮೂರಿಗೆ ಸರ್ಕಾರಿ ಕೆಲಸದ ಮೇಲೆ ಅವರು ಬಂದಾಗ, ಬೆಣ್ಣೆ ಹಚ್ಚಲು ನಾನು ಹೋದಾಗ, ಅವರು ನನ್ನ ಹಳೆ ದೋಸ್ತು ಅಂತ ತಿಳಿದಾಗ, ತೋಳ್ಮೇಲೆ ಕೈ ಹಾಕಿ, "ಮನೆಗೆ ಬನ್ನಿರೊ, ಕ್ಲಬ್ಬಿನಲ್ಲಿ ಏನು ಸುಖ" ಅಂತ ಕರೆದಿದ್ದೆ.

ಭಾನುವಾರ ಸಂಜೆ ನಮ್ಮನ್ನೇಲಿ ಕೈಂಕರ್ಯ ನಡೆಸಿದೆ. ನನ್ನ ಕಸುಬಿನಲ್ಲಿ ಒಂದು ಉದ್ಧರಣೆ ಸುರಿದರೆ, ಒಂದು ಪಂಚಪಾತ್ರೆ ಅಷ್ಟು ನನಗೆ ಹೇಗಾದರೂ ಹಿಂತಿರುಗೋದು ಮಾಮೂಲು. ಹಾಗಾಗಿ ರಾಮು ಗೋಪಿಗೆ ತೀರ್ಥ ಪ್ರಸಾದ ಹಂಚೋದರಲ್ಲಿ ತೆರೆದ ಅಂಗೈ ನನ್ನದು. ಕಡೆ ಕಡೆಗೆ ಬಲು ಅನ್ಯೋನ್ಯವಾಗಿಬಿಟ್ಟರು. ಮನೆ ವಿಚಾರವನ್ನೆಲ್ಲಾ ಕೇಳಿದರು. ಮಗಳ ಮದುವೆ ಆಗಿಲ್ಲ ಅಂತ ಹೇಳ್ದಾಗ, ಗೋತ್ರ ಯಾವುದೋ ಅಂದ ರಾಮು. ತಡೆಯೊ ಕೇಳಿ ಹೇಳ್ತೀನಿ ಅಂತ ಹೆಂಡತೀನ ಕರೆದು, "ನನ್ನ ಗೋತ್ರ ಏನೆ" ಅಂತ ಕೇಳಿದೆ. "ತಡೀರಿ ಅಂದ್ರೆ ಪಂಚಾಂಗದಲ್ಲಿ ಗುರ್ತು ಹಾಕಿದೀನೆ, ನೋಡಿ ಹೇಳ್ತೀನಿ" ಅಂತ ಆಕೆ ದೇವರ ಗೂಡಿನ ಬಾಗಿಲು ತೆಗೆದು ಪಂಚಾಂಗ ತೆಗೆದುಕೊಂಡು ಬಂದು, "ಸ್ವತಂತ್ರಕಪಿ ಗೋತ್ರ" ಎಂದಳು.

ಗೋಪಿ ನಕ್ಕ, "ಹೆಂಡತಿ ಕೈಲಿ ಹೀಗೆ ಹಾಸ್ಯ ಮಾಡಿಸಿಕೊಳ್ಳುತ್ತೀಯಲ್ಲೊ, ನಾಚಿಕೆ ಆಗುಲ್ವೇನೋ" ಎಂದು ಅವಳೆದುರಿಗೆ ನನ್ನ ಬೆನ್ನಿಗೆ ಒಂದು ಗುದ್ದು ಕೊಟ್ಟ. ಬಾಯಲ್ಲಿನ ಗುಟುಕು ಗಂಟಲಿಗೆ ಇಳಿಯದೆ, ಹೊರಕ್ಕೆ ಹಾರಿ ಅವನ ಮೇಲೆ ಬಿತ್ತು.

ರಾಮು ಆಗ ಗದರಿಕೊಂಡ. "ಸಂಸಾರ ಇರೊ ಮನೆ, ಬೆಳೆದ ಮಕ್ಕಳಿದ್ದಾರೆ, ಹುಡುಗರ ಹಾಗೆ ಆಡ್ತೀರಲ್ಲೊ! ಹಪ್ಪಳ ತಿನ್ರೊ" ಅಂದ. "ನೋಡಪ್ಪಾ, ನಮ್ಮ ಕಚೇರೀಲಿ ಒಬ್ಬ ಜಾಣ ಹುಡುಗ ಕೆಲಸಕ್ಕೆ ಸೇರಿದ್ದಾನೆ. ನಿಮ್ಮ ಜಾತಿಯವನೆ ಅವನು. ಅವರಪ್ಪ ಈ ಊರಲ್ಲೆ ಇದ್ದಾರೆ. ಹುಡುಗನೂ

ಇಲ್ಲಿಗೆ ಬಂದಿದ್ದಾನೆ, ವಿಚಾರಿಸು. ಮದುವೆ ಆದರೆ ನನಗೆ ತುಂಬಾ ಸಂತೋಷ" ಎಂದು ಬಿಕ್ಕಿದ. "ಶಾಮಾಶಾಸ್ತ್ರಿ ಅಂತ ಹುಡುಗನ ಹೆಸರು, ಬಲು ಜಾಣ" ಅಂತ ಹೇಳಿದ.

* * * * *

ರಾಮು, ಗೋಪೀನ ಬಿಟ್ಟುಬಂದು, ಬಿದ್ದುಕೊಂಡಿದ್ದು ಮಸಕು-ಮಸಕಾಗಿ ಜ್ಞಾಪಕ. ಸೋಮವಾರವೆಲ್ಲಾ ಒಂದು 'ಥರ್‍ಹಾ' ಇತ್ತು. ಸಂಜೆ ಹೊತ್ತಿಗೆ ಮನೆಯಾಕೆ ಎದುರುಬಿದ್ದು, "ನಿನ್ನೆ ಹೇಳಿದರಲ್ಲ, ನಿಮ್ಮ ಸ್ನೇಹಿತರು, ಶಾಮಾಶಾಸ್ತ್ರಿ ಅಂತ ವರ ಇದಾನೆ ಅಂತ. ಮೂರನೆ ಬೀದೀಲಿ ಸುಬ್ಬರಾಯ ಶಾಸ್ತ್ರಿಗಳಿಲ್ಲವೆ? ಅವರ ಮಗ ಇರಬಹುದು ಅಂತ ಅನುಮಾನ ಬಂತು. ಇವತ್ತು ಮಧ್ಯಾಹ್ನ ಮೆಣಸಿನಪುಡಿ ವೆಂಕಮ್ಮನಿಗೆ ಹೇಳಿ ಕಳಿಸಿ, ಮೆಲ್ಲಗೆ ವಿಚಾರಿಸ್ಕೊಂಡು ಬಾ ಅಂತ ಹೇಳಿದೆ. ಆಕೆ ಹೋಗಿ ವಿಚಾರಿಸಿಕೊಂಡು ಬಂದು ಸಂಜೆ ಮುಂದೆ ಹೇಳಿದಳು. ಶಾಮು ಅಂತಲೆ ಅವರ ಮೊದಲನೆ ಹುಡುಗನ ಹೆಸರಂತೆ. ದೆಲ್ಲಿಲೆಲ್ಲೊ ಕೆಲಸದಲ್ಲಿದ್ದಾನಂತೆ. ಸರ್ಕಾರಿ ಕೆಲಸದ ಮೇಲೆ ಈ ಊರಿಗೆ ಒಂದು ವಾರ ಇರುಕ್ಕೆ ಬಂದಿದ್ದಾನಂತೆ. ಸುಬ್ಬರಾಯಶಾಸ್ತ್ರಿಗಳು ಅಷ್ಟು ವೈದಿಕ ಸ್ವಭಾವದವರು ನೋಡಿ, ಆದರೂ ಕ್ರಾಪ್ ಬಿಡಿಸಿಕೊಂಡ ಮಗ ತಂದುಕೊಟ್ಟ ಕಾಫೀನ ಕುಡಿದೇಬಿಟ್ರು ಎಂದು ಹೇಳಿದಳು. ಹುಡುಗ ಕಟ್ಟುಮಸ್ತಾಗಿದ್ದಾನಂತೆ. ಲಕ್ಷಣವಾಗಿದ್ದಾನಂತೆ. ಜಾತಕ ತೊಗೊಂಡು ಹೋಗಿ ವಿಚಾರಿಸಿಕೊಂಡು ಬರಬಾರದೆ ಅಂದ್ರೆ" ಅಂತ ಹೇಳಿದಳು.

"ನಾಳೇನೆ ಹೋಗ್ತೀನಿ ಕಣೆ" ಅಂತ ಅಂದೆ.

"ಸರಿಹೋಯ್ತು, ನಾಳೆ ಮಂಗಳವಾರ; ಹೋದರೆ ಚೆನ್ನಾಯ್ತು! ಇನ್ನೂ ನಿನ್ನೆ ಗುಂಗು ಇಳಿದ ಹಾಗಿಲ್ಲ" ಅಂದಳು.

"ನಾಡಿದ್ದು ಹೋಗ್ತೀನಿ ಕಣೆ" ಎಂದೆ.

* * * * *

ಬುಧವಾರ ಬೆಳಿಗ್ಗೆ ಕಚ್ಚೆಪಂಚೆ ಉಟ್ಟುಕೊಂಡು, ಶಾಲು ಹೊದ್ದುಗೊಂಡು, ಅರಿಶಿನ ಹಚ್ಚಿದ ಜಾತಕ ಹಿಡಕೊಂಡು ಸುಬ್ಬರಾಯ ಶಾಸ್ತ್ರಿಗಳ ಮನೆಗೆ ಹೋದೆ. ವರನೆ ಎದುರುಗೊಂಡ. "ಶಾಸ್ತ್ರಿಗಳು ಇದ್ದಾರೆಯೇ" ಎಂದೆ. "ಇದೀನಿ, ಶಾಮಾಶಾಸ್ತ್ರಿ ನಾನೇನೆ" ಎಂದ. "ಏನು ಬೇಕಾಗಿತ್ತು" ಅಂತ ಕೇಳಿದ ಅವ. "ಹೀಗೆ, ಯಜಮಾನರನ್ನ, ಸುಬ್ಬರಾಯ ಶಾಸ್ತ್ರಿಗಳ ಭೇಟಿಯಾಗುಕ್ಕೆ ಬಂದಿದ್ದೆ" ಎಂದೆ. ನಕ್ಕ ಈ ಹುಡುಗ "ತಪ್ಪಾಯ್ತು, ಭ್ರಮರಾಂಬ ಗುಡಿಯ ಪಾರುಪತ್ಯೇಗಾರರ ಮಗ ದೆಲ್ಲಿಯಲ್ಲಿ ನನ್ನ ಜತೆ ಇದಾನೆ, ನಮ್ಮಪ್ಪನಿಗೆ ಕಾಗದ ಬರೆದಿರ್ತೀನಿ, ಏನಾದರೂ ಕಳಿಸಿದರೆ ತಂದುಕೊಡು ಅಂತ ಹೇಳಿದ್ದ. ನೀವು ಬಂದಾಗ, ಅವನ ತಂದೆ ನೀವು ಅಂತ ಅಂದುಕೊಂಡುಬಿಟ್ಟೆ. ಬನ್ನಿ ಕೂತುಕೊಳ್ಳಿ, ಅಪ್ಪ ದೇವರ ಮನೇಲಿದಾರೆ. ಇಷ್ಟು ಹೊತ್ತಿಗೆ ಪೂಜೆ ಆಗಿರಬಹುದು. ನೀವು ಬಂದಿದ್ದೀರಿ ಅಂತ ಹೇಳ್ತೇನೆ" ಎಂದ. ಚೊಳನ ಜುಬ್ಬ ಧರಿಸಿದ್ದ, ಗುಂಗುರು ಕೂದಲಿನ, ಅವನು ಲಕ್ಷಣವಾಗಿದ್ದ. ಸುಬ್ಬರಾಯ ಶಾಸ್ತ್ರಿಗಳು ಬಂದರು. "ಓಹೋಹೋಹೋ! ತಾವು ರಂಗರಾಯರಲ್ಲವೆ? ಇಷ್ಟು ದೂರ ಬಡವನ ಮನೆತನಕ ಪಾದ ಬೆಳೆಸಿದ್ದೀರಿ" ಎಂದು ಕೇಳಿದರು.

"ಹೀಗೆ, ವರಾನ್ವೇಷಣೆಗಾಗಿ ಬಂದಿದ್ದೇನೆ. ತಾವು ಈ ಊರಿಗೆ ಬಂದು ನೆಲೆಸಿರುವ ವಿಚಾರ, ಸ್ನೇಹಿತರೊಬ್ಬರು ಹೇಳಿದರು. ತಮ್ಮ ಚಿರಂಜೀವಿಯ ಪರಿಚಯ ಅವರಿಗೆ ಚೆನ್ನಾಗಿದೆಯೆಂತೆ. ನನ್ನ ಪರಿಚಯ ನಿಮಗೆ ಹೇಗೆ ಆಯಿತು? ತಿಳೀದಲ್ಲ!" ಎಂದೆ. "ದೇವಸ್ಥಾನದ ಪ್ರಾಕಾರ ಕಟ್ಟಿಸಿದಾಗ ಒಮ್ಮೊಮ್ಮೆ ನೀವು ಬರ್ತಾ ಇತ್ತಿಲ್ಲವೆ? ಅರ್ಚಕರು ಹೇಳಿದ್ದರು, ನೀವು ಅದನ್ನು ನಿಮ್ಮ ಸ್ವಂತ ಖರ್ಚಿನಲ್ಲಿ ಕಟ್ಟಿಸ್ತೀರಿ ಅಂತ. ದೇವರು-ದಿಂಡರು ಅಂದರೆ ಭಯ-ಭಕ್ತಿ ಇರೋರನ್ನ ಕಂಡರೆ ನನಗೆ ಬಲು ವಿಶ್ವಾಸ" ಎಂದರು. ಜಾತಕವನ್ನು ಎರಡೂ ಕೈಲಿ ಹಿಡಿದುಕೊಂಡು ಬಗ್ಗಿ ಅವರ ಬೊಗಸೆಗೆ ಹಾಕಿದೆ. ಜಾತಕ ತೆಗೆದು ನೋಡಿದರು. ಬೆರಳ ಮೇಲೆ ಬೆರಳನ್ನು ಏಣಿ ಹತ್ತಿಸಿ ಇಳಿಸಿದರು. "ಲೇ!" ಅಂತ ಕೂಗಿದರು. ಅಡಿಗೆ ಮನೆಯ ಕಡೆಯಿಂದ ಶಾಸ್ತ್ರಿಗಳ ಧರ್ಮಪತ್ನಿ ಮಡಿಕೋಲು ಹಿಡಿದುಕೊಂಡಿದ್ದವರು ಹಾಗೆ ಧಡ ಧಡ ಅಂತ ಬಂದರು. ಬಲು ಕರಾಚೂರಿ ಶಾಸ್ತ್ರಿಗಳು. ಕೂಗು ಹಾಕಿದರೆ ಮನೆಯಾಕೆ ಹೇಗಿದ್ದರೆ ಹಾಗೆ ಬರ್ತಾಳೆ. ಅದಬ್ಬು ಅಂದರೆ ಹೀಗೆ ಅಂತ ಸ್ವಲ್ಪ ಹೊಟ್ಟೆಯುರಿಪಟ್ಟುಕೊಂಡೆ. ಎದ್ದು ನಿಲ್ಲಲು ಹೋದೆ. "ಪರವಾಗಿಲ್ಲ ಕೂಡಿ ಕೂಡಿ" ಅಂತ ಶಾಸ್ತ್ರಿಗಳೂ ಹೇಳಿದರು, ಆಕೆಯೂ ದನಿಗೂಡಿಸಿದರು. ನನಗೂ ಎದ್ದು ಕೂರೋದು ಸ್ವಲ್ಪ ಸಾಹಸದ ವಿಷಯವೆ! ಕೂತುಕೊಂಡೆ. "ರಂಗರಾಯರು ನಮ್ಮ ಶಾಮುಗೆ ಮಗಳನ್ನು ಕೊಡಲು ಬಂದಿದ್ದಾರೆ. ಜಾತಕ ತಂದಿದ್ದಾರೆ. ಬಲು ದಿವ್ಯವಾಗಿ ಕೂಡುತ್ತೆ ಕಣೆ! ಹೇಳಿ ಮಾಡಿಸಿಟ್ಟ ಹಾಗಿದೆ" ಎಂದರು. "ಸರಿ ಅಂದ್ರೆ; ದೇವರ ಇಚ್ಛೆ ಹೇಗಿದೆಯೊ ಹಾಗೆ ಆಗಲಿ ಅಂದ್ರೆ" ಅಂದರು ಆಕೆ. "ದೇವರ ಇಚ್ಛೇನೆ ಜಾತಕ ಕಣೆ! ನೀನೇನಂತಿ ಅಂತ ಕೇಳುಕ್ಕೆ ಕರೆದೆ; ಇಂಥ ಚೆನ್ನಾಗಿ ಸರಿಯಾಗಿರೊ ಜಾತಕ ಸಿಗುತ್ತೆ ಅಂತ ಯಾರಾದರೂ ಹೇಳಿದ್ದರೆ ನಂಬುತ್ತಲೆ ಇರಲಿಲ್ಲ" ಎಂದರು ಶಾಸ್ತ್ರಿಗಳು. "ಹುಡುಗನ್ನ ಕೇಳಿ ಅಂದ್ರೆ, ಅವನು ಹುಡುಗೀನ ನೋಡಬೇಡವೆ? ಹುಡುಗಿ, ಅವನ್ನ ಒಪ್ಪಬೇಡವೆ? ನಮ್ಮದು ವೈದಿಕ ಮನೆ, ಮಡಿ-ಮೈಲಿಗೆ, ಪೂಜೆ-ಪುನಸ್ಕಾರ ಇರೊ ಮನೆಯೋರ ಸಂಬಂಧ ಆದರೆ ಎಲ್ಲರಿಗೂ ಚೆನ್ನಲ್ಲವೆ ಅಂದ್ರೆ" ಎಂದು ಮೆಲ್ಲಗೆ ಆದರೂ ಸ್ಪಷ್ಟವಾಗಿ ಆಕೆ ಹೇಳಿದಳು. ಓಹೊ! ಬೆದರಿ ಬಂದಂತೆ ಓಡಿ ಬಂದರೂ ತನ್ನ ಮಾತನ್ನ ಕೊನೇಲಿ ನಡೆಸಿಕೋತಾಳೆ ಈಕೆ ಎಂದು ನನಗೆ ಮನದಟ್ಟಾಯಿತು. ಆ ವೇಳೆಗೆ ಶಾಮು ಒಳಗಿನಿಂದ ಎರಡು ಲೋಟಾ ಕಾಫಿ ಹಿಡಿದುಕೊಂಡು ಬಂದು ಅಪ್ಪನೆದುರಿಗೆ ಒಂದನ್ನೂ, ನನ್ನೆದುರಿಗೆ ಒಂದನ್ನೂ ಇರಿಸಿದ. "ನಮ್ಮ ಶಾಮು ಬಲು ಜಾಣ. ನಾನು ಮಾಡೊ ಕೆಲಸಾನ ತಾನೆ ಮಾಡಿಕೊಂಡು ಬಂದಿದ್ದಾನೆ" ಎಂದಳು, ಅವನ ತಾಯಿ ಹೆಮ್ಮೆಯಿಂದ.

"ಹೇಗೂ, ನನ್ನ ಕಾಫಿ ಮಾಡಿಕೊಳ್ಳುವಾಗ, ಇವರಿಗೂ ಮಾಡಿ ತಂದರೆ, ಆಮೇಲೆ ಮಡೀಲಿ ನೀನು ಕಾಫಿ ಮಾಡಿಕೊಂಡು ಕುಡಿಬಹುದಮ್ಮಾ" ಅಂದ ಶಾಮು.

ಓಹೊ! ಹೀಗೊ ಸ್ಥಿತಿಗತಿ ಮನೇಲಿ ಎಂದುಕೊಂಡೆ, ಮನಸ್ಸಿನಲ್ಲೆ.

ತಂದೆ ತಾಯಿ ಶಾಮೂನ, ನನ್ನೆದುರಿನಲ್ಲೇ ಕೇಳಿದರು. "ಶನಿವಾರ ನಾನು ದೆಲ್ಲಿಗೆ ಹಿಂತಿರುಗಬೇಕು, ನಾಳೇನೆ ಬೇಕಾದರೆ ಅವರ ಮನೆಗೆ ಹೋಗಿ ಬರೋಣ" ಎಂದ ಶಾಮು, ತಡಬಡಗುಡದೆ, ಸಾವಧಾನವಾಗಿ.

ಹುಡುಗನಿಗೆ ಸಂಕೋಚ ಪ್ರವೃತ್ತಿ ಇದ್ದಹಾಗಿಲ್ಲ. ತನಗೆ ಬೇಕಾದ್ದನ್ನು ಈ ಮನೇಲೂ ಸಾಧಿಸಿಕೊಳ್ಳುತ್ತಾನೆ. ಜಾಣ ಇವ, ಬಾಳೋದರ ಮರ್ಮ ತಿಳಿದೋನು ಅಂತ ನನಗೆ ಮಂದಟ್ಟಾಯಿತು.

"ನಾಳೆ ಮಧ್ಯಾಹ್ನ ನಿಮ್ಮನೆಗೆ ನಾಲ್ಕು ಗಂಟೆ ಹೊತ್ತಿಗೆ ಬಂದರೆ ಆದೀತೆ" ಎಂದು ಸುಬ್ಬರಾಯಶಾಸ್ತ್ರಿಗಳು ಕೇಳಿದರು. "ಖಂಡಿತ ಆಗಬಹುದು. ಮೂರುವರೆ ಗಂಟೆ ಹೊತ್ತಿಗೆ ಕಾರನ್ನು ಕಳಿಸ್ತೀನಿ" ಎಂದೆ.

"ಬೇಡ, ತೊಂದರೆ ತೆಗೆದುಕೊಳ್ಳೋದು ಬೇಡ, ನಮ್ಮ ಕಚೇರಿ ಕಾರು ನನ್ನ ಸುಫರ್ದಲ್ಲಿದೆ; ನಾವೆ ಬರ್ತೀವಿ" ಎಂದ ಶಾಮು. ಶಾಮು ಬಲು ಜಾಣ ಅನ್ನಸ್ತು.

*  *  *  *  *

ಮನೆಗೆ ಬಂದೋನೆ ಸುದ್ದಿಯನ್ನೆಲ್ಲಾ ವಿವರವಾಗಿ ಹೇಳಿದೆ. "ನಾಳೆ ಹೊತ್ತಿಗೆ ಮನೆಯಲ್ಲಿ ವೈದೀಕ ಮನೆಯ ಕಳೆ ತುಂಬಬೇಕು. ಕಂಡಲ್ಲಿ ಕೆಮ್ಮಣ್ಣು ಕಾರಣೆ ಹಾಕಿರಬೇಕು. ದೇವರ ಪಟ, ಕೃಷ್ಣಾಜಿನ, ಹುಲಿ ಚರ್ಮ, ಎಲ್ಲವೂ ಅಲ್ಲಲ್ಲೆ ತಾಂಡವವಾಡಬೇಕು. ಗಾಜಿನ ಬಟ್ಟಲು, ಪಿಂಗಾಣಿ ಸಾಮಾನು ಎಲ್ಲವನ್ನೂ ಪೆಠಾರಿಯಲ್ಲಿ ಮುಚ್ಚಿಟ್ಟು, ಬೆಳ್ಳಿ ತಟ್ಟೆ ಬೆಳ್ಳಿ ಲೋಟಾಗಳನ್ನೇ ಓಡಾಡಿಸಬೇಕು. ತಿಳಿತೇನೆ? ಅಂದಹಾಗೆ ಒಂದು ಜತೆ ಜನಿವಾರಾನೂ ತರಿಸ್ಬಿಡು. ನಾಳೆ ಬೆಳಿಗ್ಗೆ ಹಾಕ್ಕೊಂಡ್ಬಿಡ್ತೀನಿ. ಸಿಲ್ಕು ಜುಬ್ಬ ಹಾಕಿಕೊಂಡಾಗ ಅದೂ ಕಾಣಿಸಿದರೆ ಚೆನ್ನ" ಎಂದು ಹುಕುಂ ಮಾಡಿದೆ.

ಗುರುವಾರ ಸಾಯಂಕಾಲ ಸರಿಯಾಗಿ ನಾಲ್ಕು ಗಂಟೆ ಹತ್ತು ನಿಮಿಷಕ್ಕೆ ಸಂಸಾರ ಸಮೇತ ಸುಬ್ಬರಾಯ ಶಾಸ್ತ್ರಿಗಳು ಮನೆಗೆ ಬಂದರು. "ಹತ್ತು ನಿಮಿಷ ಹೊತ್ತಾಯ್ತು. ಅಪ್ಪ ಹೇಳಿದರು, ಒಳ್ಳೇ ಘಳಿಗೇಲಿ ಹೋಗೋಣ ಅಂತ. ನಿಮಗೆ ತೊಂದರೆಯಾಯ್ತೇನೊ" ಎಂದು ಶಾಮು ವಿನಯದಿಂದ ಹೇಳಿದ. ಜಾಣ ಶಾಮು ನಡವಳಿಕಸ್ಥ ಕೂಡ.

ನಮ್ಮ ಮನೆ ದಿವಾನಖಾನೆ ಹೇಗಿತ್ತು ಅಂತ. ಥೇಟ್ ಇನ್ನೊಬ್ಬರ ಮನೆ ಇದ್ದ ಹಾಗೆ ನನಗೇನೆ ಕಾಣಿಸ್ತು. ಎಲ್ಲರೂ ರತ್ನಗಂಬಳಿ ಮೇಲೆ ಕೂತುಕೊಂಡೆವು. ದಿವಾನಖಾನೆ ಆ ಕಡೆಯಲ್ಲಿ ಚಾಪೆ ಮೇಲೆ ಹೆಂಗಸರೆಲ್ಲರೂ ಕುಳಿತುಕೊಂಡರು. ರಸಾಯನ, ಹುಳಿಯವಲಕ್ಕಿ, ಕಾಫಿ ಎಲ್ಲವನ್ನೂ ಮಾಡಿಕೊಟ್ಟಾಯ್ತು. ಒಂದೇ ಹೆಣ್ಣು, ಮೊದಲನೆಯದು ಎಂದು ಹೇಳಿ, ಶಾರೀನೂ ಕರೆಸಿ, ನಮಸ್ಕಾರ ಮಾಡಿಸಿದ್ದಾಯಿತು. ಶಾಸ್ತ್ರಿಗಳ ಹೆಂಡತಿ "ಹಾಡು ಬರುತ್ತ್ಯೇನಮ್ಮಾ?" ಎಂದಾಗ, ಭಾಗ್ಯಾದ ಲಕ್ಷ್ಮಿ ಬಾರಮ್ಮ" ಹಾಡಿದಳು ಶಾರಿ. "ಎಷ್ಟು ಚೆನ್ನಾಗಿ ಮುದಿ ಮುತ್ತೈದೆಯರ ಹಾಗೆ ಹಾಡ್ತಿಯಲ್ಲೆ ತಾಯಿ, ಭಾಗ್ಯದ ಲಕ್ಷ್ಮಿ ನೀ ಕರೆದರೆ ಬಂದೇಬಿಡ್ತಾಳೆ ಅನ್ನಿಸುತ್ತಮ್ಮ" ಎಂದು ಶಾಸ್ತ್ರಿಗಳ ಹೆಂಡತಿ ಮೆಚ್ಚುಗೆ ಸೂಚಿಸಿದರು.

"ನೀವು ದೆಲ್ಲಿಗೆ ಅಂತರ ವಿಶ್ವವಿದ್ಯಾಲಯದ ಚರ್ಚಾ ಸ್ಪರ್ಧೆಗೆ ಬಂದಿದ್ದಿರಾ? ಎಲ್ಲೋ ನೋಡಿದ ಹಾಗೆ ಜ್ಞಾಪಕ" ಅಂದ ಶಾಮು.

ಕಾಲುಬೆರಳಿನ ಮೇಲಿನ ನೋಟವನ್ನು ಎತ್ತದೆ, ಶಾರಿ ಹೇಳಿದಳು, "ನಮ್ಮ ಕಾಲೇಜಿನ ಪ್ರತಿನಿಧಿಯಾಗಿ ನಾನು ಭಾಗವಹಿಸಿದ್ದೆ" ಎಂದು.

"ಆರು ಗಂಟೆ ಮನೆಗೆ ಹೋಗ್ಬೇಕು" ಎಂದರು ಸುಬ್ಬರಾಯ ಶಾಸ್ತ್ರಿಗಳು. ತೆಂಗಿನಕಾಯಿ ತಾಂಬೂಲ ಇಟ್ಟುಕೊಂಡು ಬರಲು ಶಾರೀನೂ, ಅವರ ತಾಯೀನೂ ಒಳಕ್ಕೆ ಹೋದರು.

ಆಗ ಏನಾಯಿತು ಗೊತ್ತೆ?

ನಮ್ಮ ಚಿಕ್ಕಹುಡುಗ ಮೂರು ವರ್ಷದೋನು, ಕಿಟ್ಟಿ ಇದಾನಲ್ಲ. ಅವನು ನನ್ನ ಕೊಠಡಿಯಿಂದ ಒಂದು ಶೀಸೇನ ಹಿಡಿದುಕೊಂಡು "ಅಪ್ಪಾ! ಇದನ್ನೆಲಿಡಲಿ" ಎಂದು ಹೇಳುತ್ತಾ ಬಂದ. ಮೂರು ಕೆನ್ನೆಗಳಲ್ಲೂ ಗುಳಿ ಬಿದ್ದ ದಪ್ಪನಾದ ಶೀಷೆ. ಸ್ಕಾಟ್‌ಲೆಂಡಿನಿಂದ ಸಮುದ್ರ ಯಾನ ಮಾಡಿಕೊಂಡು ಬಂದ ಘರಂ ತೀರ್ಥ ತುಂಬಿದ್ದ ಶೀಷೆ!! ಅದರ ಮೇಲಿದ್ದ ಕಾಗದವೆಲ್ಲಾ ಹಾಗೆ ಇದೆ. "ಎಷ್ಟು ಚೆನ್ನಾಗಿದೆ ಈ ಖಾಲಿ ಶೀಷೆ! ನಂಕೊಡಪ್ಪ ಮಗೂ" ಎಂದರು, ಭಾವಿ ಭೀಗಿತ್ತಿ. ಕೊಬ್ಬರಿ ಎಣ್ಣೆ ಹಾಕಿಡುಕ್ಕೆ ಬಲು ಚೆನ್ನಾಗಿದೆ ಎಂದರು. ಕಿಟ್ಟಿ ಆ ಶೀಷೆನ ಆಕೆ ಕೈಲಿಟ್ಟ. ಆಕೆ ಕೈಲಿ ಮುತ್ತು ಕೊಡಿಸಿಕೊಂಡ.

ಅಷ್ಟು ಹೊತ್ತಿಗೆ ನನ್ನಾಕೆ ಎಲಡಿಕೆ ತೆಂಗಿನಕಾಯಿ ತಟ್ಟೆ ತೆಗೆದುಕೊಂಡು ಬಂದಳು. ನೋಡಿದಳು, ಶೀಷೆ ಹಿಡಿದಿದ್ದ ಭಾವಿ ಬೀಗಿತ್ತೀನ. ಮಾತಾಡದೆ ಫಲತಾಂಬೂಲ, ಕುಂಕುಮ ಅರಿಶಿನ ಕೊಟ್ಟಳು. ಅವರೆಲ್ಲ ಹೊರಟುಹೋದರು. ಅವರನ್ನು ಬೀಳ್ಕೊಟ್ಟು ಮನೆಯೊಳಕ್ಕೆ ಬಂದೆವು.

*　　*　　*　　*　　*

ಆಗಲೆ ನೋಡಿ ಎರಡು ಕೊಟ್ಟೆ ಕಿಟ್ಟಿಗೆ. ತಬ್ಬಲಿ ಮುಂಡೇದೆ, ನನ್ನ ರೂಮಿಗೆ ಯಾಕೊ ಹೋದೆ? ಹೋದೋನು ಈ ಶೀಷೆನ ಯಾಕೊ ತಂದೆ ಎಂದು. "ಭಾನುವಾರದ ಗಲಭೇಲಿ ನೀವು ಮೇಜಿನ ಕೆಳಗೆ ಮರತಿಟ್ಟರೆ, ಕೈಗೆ ಸಿಗೋಹಾಗೆ ಇಟ್ಟರೆ, ಪಾಪ, ಅದೇನ್ಮಾಡುತ್ತೆ ಅಂತ" ಎಂದಳು, ಇವಳು.

ಜಾತಕ ಕೂಡಿ ಬಂದಿತ್ತು. ಶಾರಿ ಹಾಡು ಬೀಗಿತ್ತಿಗೆ ಹಿಡಿಸಿತ್ತು, ಹುಡುಗ ಹುಡುಗೀನ ದಿಲ್ಲೀಲಿ ಕಂಡು ಮೆಚ್ಚಿತ್ತು. ಎಲ್ಲ ತಪ್ಪಿ ಹೋಗುತ್ತಲ್ಲ, ಈ ಮನೇಲಿ ಇಂಥ ಶೀಷೆ ಇದೆ ಅಂದ್ರೆ. ಶಾಸ್ತ್ರಿಗಳ ಹೆಂಡತಿಗೆ ಶೀಷೆ ಸುಳು ತಿಳಿದಾಗ ಮದುವೆ ಮಾತಿಗೆ ತುಂಡು ಹಾಕಿದ ಹಾಗೆ ಅಲ್ಲವೆ ಎಂದು ಹಲುಬಾಡಿದೆ.

*　　*　　*　　*　　*

ಆದರೆ ಮದುವೆಯಾಗೆಹೋಯ್ತು. ಮೊದಲ ಮೊಮ್ಮಗ ಆದಮೇಲೆ ಅಳಿಯನ್ನು ಕೇಳಿದೆ. "ಆವತ್ತು ನಿಮ್ಮ ತಾಯಿ ಕೈಲಿ ಕಿಟ್ಟು ಶೀಷೆ ಇಟ್ಟಾಗ, ಮದುವೆ ಬಿದ್ದುಹೋಯ್ತು ಅಂತಿದ್ದೆ. ಏನಾಯ್ತು ಆಮೇಲೆ" ಎಂದು. "ಅಮ್ಮ ಕೇಳಿದರೆ ಅದೊಂದು ಥರ್‍ದಾ ಗಂಧದ ನೀರು. ಕಂಟ್ರಾಕ್ಟರುಗಳು ಇದನ್ನೆ ಅತಿಥಿ ಅಭ್ಯಾಗತರಿಗೆ ಹಂಚೋದು ಅಂತ ನಾನು ಹೇಳೋಣ ಅಂತಿದ್ದೆ. ಆದರೆ ನನಗೆ ಮೊದಲೇನೆ ಅಪ್ಪ 'ಈಗೀಗ ಗಂಗಾ ಜಲವನ್ನು ತರುಕ್ಕೆ ಇಂಥಾ ಶೀಷೇನೆ ಉಪಯೋಗಿಸ್ತಾರೆ ಕಣೆ. ಮೊದಲಿನ ಹಾಗೆ, ನಮ್ಮ ಕಾಲದಲ್ಲಿದ್ದ ಹಾಗೆ, ಹಿತ್ತಾಳೆ ಕುಡಿಕೇಲಿ, ಮೇಣ ಮೆತ್ತಿರುತ್ತಲ್ಲ, ಅದರಲ್ಲ ತರುಲ್ಲ ಕಣೆ! ಅವರ ಮನೇಲಿ ಯಾರೊ ಕಾಶಿಯಾತ್ರೆಗೆ ಹೋಗಿ ಬಂದಿರಬೇಕು' ಎಂದರು. ನಾನು ತೆಪ್ಪಗಾದೆ" ಎಂದ.

ಶಾಮು ಬಲು ಜಾಣ, ಅವರಪ್ಪ ಅವನಿಗಿಂತ ಜಾಣ! ನಮ್ಮ ಶಾರಿ ಪುಣ್ಯ.

■

# ಹಾರ್ಮೋನಿಯ ಗಾನ

(ಶ್ರೀ ವೀ.ಸೀ.ಯವರಲ್ಲಿ ಕ್ಷಮಾಪಣೆಗಳೊಡನೆ)

ಶಂಭರಿಯ ಗಾನಕಿದು ಮಿಗಿಲೆನಿಸಿ ಅಂಜಿಪುದು ।
ಚಂಡಿಯಂ ಹಾರ್ಮೋನಿಯ ನುಡಿಯುತಿಹುದು ॥
ಗಂಟಲಿನ ಬಿರುನಾದವನು ಐಕ್ಯಗೊಳಿಸುತ್ತ ।
ತುಂಬಿದುಸಿರಿಂ ತಾ ಬೊಗಳುತಿಹುದು ॥ ೧ ॥

ಮಸುಕಿಟವು ನೆತ್ತಿರಕೆ ಬಾಯಾರುತ್ತೈತಂದು ।
ಬಿಸಿಮೈಯ್ಯ ಮೇಲೇರಿ ಮೊರೆಯುವಂತೆ ॥
ಶಶಿಮೊಗವ ರಾಹುವದು ಅಪ್ಪಳಿಸಿ ಹಿಡಿವಂತೆ ।
ಬುಸುಗುಡುತ ಬಳಿವರ್ಪ ಸರ್ಪದಂತೆ ॥ ೨ ॥

ದೂರದಲಿ ಸಾರುತಿಹ ಅಗಸನನು ಕಂಡು ।
ಕಿರಿಚುತರಚುತ ಧಾವಿಸುವ ಗಾರ್ಧಭನವೊಲು ॥
ಬಿರುಗಾಳಿಯೊಡನಾಡಿ ತೇಲುತಿಹ ಎಲೆಯಂತೆ ।
ಕಿರುಗುಡುಗು ಗಗನವನು ಹರಿದು ಬಂದಂತೆ ॥ ೩ ॥

ಅನಾಥ ದೈವವದು ತಾ ಸೇವೆಗೊಳ್ಳಲು ಬಂದು ।
ವಿನಯದಿಂ ಗಾಯಕನ ಕರನಡೆಸುತಿಹುದೊ ॥
ಇನ್ನಿತರ ಗಾನಗಳ ಸೊಂಪನ್ನು ಸೂಚಿರ್ಪ ।
ದನಿಸಂತೆ ಕಿವಿಬೇನೆ ಬರಿಸುತ್ತಲಿಹುದೊ ॥ ೪ ॥

ರಕ್ಕಸರ ಸೊಕ್ಕಡಿಪ ಬಿರುಗಾನ ತನದೆಂದು ।
ಕರ್ಕಶದ ದನಿಯನ್ನು ಬೀರುತಿಹುದು ॥
ಮುಕ್ಕರಿದು ಬಿಕ್ಕುತಲಿ ಕ್ರಮದೊಳಾರ್ಭಟಿಸಿ ।
ಅಕ್ಕರದಿ ಕೇಳ್ವರನು ಬಲು ದೂರಗೈಸಿ ॥ ॥ ೫ ॥

■

## ಆಶಾ ಕಾಕೀ

(ಶ್ರೀ ದ. ರಾ. ಬೇಂದ್ರೆಯವರಲ್ಲಿ ಕ್ಷಮಾಪಣೆಗಳೊಡನೆ)

ಮಾರ್ವಾಡೀ ನಿನ್ನ ಮಾರಿಮ್ಯಾಗऽ ।
ಆಶಾ ಕಾಕೀ ಆಡತಿತ್ತऽ ।
ಆಡತಿತ್ತ ಕಾಡತಿತ್ತऽ ।
ನೋಡಿ ನೋಡಿ ಕುಕ್ಕತಿತ್ತऽ ॥ ೧ ॥

ಮನಿ ಮನಿ ಮಣಿಯುತ್ತಿತ್ತ ।
ಕೂಡತಿತ್ತ ಕಳೆಯುತ್ತಿತ್ತ ॥
ಕಳೆಯುತ್ತಿತ್ತ ಬೆಳೆಸುತ್ತಿತ್ತ ।
ಮನ ಹಣಾ ತಾ ಕುಕ್ಕತಿತ್ತ ॥ ೨ ॥

ಕಣ್ಣಿನ್ಯಾಗ ಹೊನ್ನಿನ ನೋಟ ।
ತರ ತರ ಕುಣಿದಾಡತಿತ್ತ ॥
ಕುಣೀತಿತ್ತ ಸೆಣೀತಿತ್ತ ।
ಕನಸಿಲೂ ಒದೆದಾಡತಿತ್ತ ॥ ೩ ॥

ಆಶಾಬೆಟ್ಟದ ತುದಿಯ ಮ್ಯಾಗ ।
ಹದ್ದು ಒಂದು ಕೂಡತಿತ್ತ ॥
ಕೂಡತಿತ್ತ ಕಾಡತಿತ್ತ ।
ರೆಪ್ಪೆ ಹಾಕದೆ ನೋಡತಿತ್ತ ॥ ೪ ॥

ಹಲವು ಜೀವಾ ನೊಂದುಕೊಂಡು ।
ಹಗಲಿರಳೂ ಮಿಡಕಾಡುತಿತ್ತ ॥
ಮಿಡುಕಾಡತಿತ್ತ ತೊಡಕುತಿತ್ತ ।
ಸಾವ ಒಂದೇ ಹುಡುಕತಿತ್ತ ॥ ೫ ॥

ಒಡಲನೆತ್ತಿರ ಕಡಲು ಕೂಡ ।
ನಿನ್ನ ದಾಹವ ಹುದುದತ್ತ ॥
ಹುದುಗದತ್ತ ಬದುಕದತ್ತ ।
ದೊರಕದಕ್ಕ ಕೊರಗತಿತ್ತ ॥ ೬ ॥

# ಹೌಸ್ ಸರ್ಜನನಿಂದ . . . ಟಕಟಕ-ಗೆ

## (ಶ್ರೀ ಕುವೆಂಪುರವರಲ್ಲಿ ಕ್ಷಮಾಪಣೆಗಳೊಡನೆ)

ಕಿರುಮೀಸೆ ಬಂದ ಹೌಸ್ ಸರ್ಜನನು ಆಪರೇಷನ್ ಥಿಯೇಟರಿನಲ್ಲಿ ಹಿರಿಯ ಸರ್ಜನ್ ಬರುವ ಮೊದಲು ಕೈ ತೊಳೆಯುತ್ತಿದ್ದಾಗ 'ಟಕ ಟಕ' ಬಂದಳು ನವ ನರ್ಸು. ಈತ ಧೈರ್ಯಮಾಡಿ, ಎದೆಗೆ ಒತ್ತಿ ಬಂದುದನ್ನು ಬಾಯಿ ಬಿಟ್ಟು ಹೇಳುವ ವೇಳೆಗೆ, ಆಕೆಗೆ ವರ್ಗವಾಗಿಬಿಡುತ್ತೆ. ಪಾಪ! ಅವನು ಆ ಹಂಬಲವನ್ನು ಹೀಗೆ ಕೆಣಕವಾಡಿ ತನ್ನ ವ್ಯಥೆಯನ್ನು ಪರಿಹರಿಸಿಕೊಂಡಿರಬಹುದಲ್ಲವೆ?

O.T.ಯ* ಒಳಗಡೆ ಕೈಯನು ತಿಕ್ಕುತ
ನಿಂತಿರೆ, ಟಕಟಕ ನೀ ಬಂದೆ
ಕರಿಕುರುಳಿನ ಬಿಳಿ ಚಂದದ ಟೊಪ್ಪಿಯ
ಎಳೆ ವೈಯ್ಯಾರಿಯೆ ನೀ ಬಂದೆ
ನೋಡುತಲೆನ್ನನು ದೂರದಿ ನಿಂತೆ.
ಮೂಡಿತು ಹೃದಯದೊಳೊಲವಿನ ಚಿಂತೆ.

ನೆರಳನು ಚೆಲ್ಲದ ದೀಪದ ಕಾಂತಿಯು
ಮೇಜಿನ ಮೇಗಡೆ ಮಲಗಿತ್ತು.
ಸರ್ಜನ ದೇವನು ಬರುತಿಹ ಸಪ್ಪುಳ
ನಮ್ಮೊಳು ಮೌನವ ಮೂಡಿಸಿತು.
ಸಿನಿಮಾ ಬಿಂಬದ ತಾರೆಯವೊಲು ನೀ
ಟೊಂಕಿಸಿ ದೂರದಿ ನಿಂತಿದ್ದೆ.

ಎದೆಯೊಳು ಸೊಬಗಿನ ಸುಗ್ಗಿಯು ಬೆಳೆದು
ಕೈ ಬೀಸೆನ್ನನು ಸೆಳೆದಿತ್ತು.
ಕಂಡೂ ಕಾಣದ ಕಿರುನಗೆಯೊಂದು
ತುಟಿಗಳ ಮೇಲೆ ಮೆರೆದಿತ್ತು.
ಕುದಿಯುವ ವಯಸಿನ ಬಿಸಿಯುಸಿರಿಂದೆ

---

* O.T. ಎಂದರೆ ಆಪರೇಷನ್ ಥಿಯೇಟರ್—ವೈದ್ಯರ ಭಾಷೆಯಲ್ಲಿ.

ಎದುರಿಹ ಬಾಲೆಯ ನೋಡುತ ನಿಂತೆ.
ನಿನ್ನಾ ಬಾಳಿನ ಹೂವನು ಮುಡಿಯದೆ
ಮುದ್ದಿಸಿಯನುಭವಿಸಪ್ಪದೆ ನೀ
ಹೋಗುವೆ ಎಂದಾಗರಿತಿರಲಿಲ್ಲ!
ಕೆಸರಿನ ಕುಸುಮವೆ ಬಾಡಿದೆಯಾ!
ಇದುವೇ ತರಲೆಯೆ! ಲಭಿಸುವ ಮುನ್ನ




ಒಯ್ದಿತೆ ವರ್ಗದ ಆಣತಿ ನಿನ್ನ!

O.T.ಯ ಒಳಗಡೆ ಒಲಿದೆನು ಅಂದು
ನೆನೆವೆನು ನಾನದನೆಂದೆಂದೂ.
ಮನದೋಟದಿ ನಾನರಸುವೆ ನಿನ್ನ
ನಿನ್ನಾ ನೆನಪೇ ಹಿತವೀಗ.
ವರಿಸುವ ತರುಣಿಗೆ ನಿನ್ನೊನಪಿತ್ತು

ಧರ್ಮದ ಹಾದಿಲಿ ನಡೆಯಲಿ ಮನವು.
ಸುಮನ ಹತಾಶಾ ದೇಹವು ನೊಂದು
ತಲ್ಲಣಿಪುದು ಬೇಗೆಯಲಿಂದು!
ನೆನೆಯಲು ನಿನ್ನನು—ತೆರಳಿದ ತರಳೇ!
ತಕ್ಷಣ ತೊಲಗುವುದಾ ಬೇಗೆ.
ಬೇರೆಯ ಹೂಗಳ ಮುಡಿದರು ನಾನು
ಮರೆಯದೆ ನಿನ್ನನೆ ಮೊದಲೆನುವೆ.

ಕೆರಳಿಪ ನವ್ಯದ ತೆರದಲಿ ಬಂದೆ
ಟಕಟಕ ತಾಳವ ಹಾಕುತ ನಿಂದೆ.
ಧರ್ಮಕೆ ಇತ್ತಾ ಧೋತ್ರದ ತೆರದಲಿ
ಹರಿದೇ ಹೋದೆಯ ಎಳೆ ನೋಡೆ!
ಎಂದೋ ಕೇಳಿದ ಟಕಟಕ ಇಂದೂ
ತಾಳವ ತಟ್ಟುವುದೆಂದೆಂದೂ!



# ನೀ ಬರುವ ದಾರಿಯಲಿ

## (ಶ್ರೀ ಕೆ.ಎಸ್. ನರಸಿಂಹಸ್ವಾಮಿಯವರಲ್ಲಿ ಕ್ಷಮಾಪಣೆಗಳೊಡನೆ)

**ಕು**ದುರೆ ಜೂಜಿನಲ್ಲಿ, ಪಂದ್ಯ ಶುರುವಾಗುವ ಮೊದಲು, ಮೆಚ್ಚಿದ ಕುದುರೆಯ ಮೇಲ ಬಾಜಿ ಕಟ್ಟಿ, ಆತುರಾತುರದಿಂದ, ಪಂದ್ಯದ ಕುದುರೆಗಳಿಗಿಂತ ವೇಗವಾಗಿ ಓಡಿ ಬಂದು, ಕಟಕಟೆಯ ಹತ್ತಿರ ನಿಂದು, ತಮ್ಮ ಕುದುರೆ ಮೊದಲು ಬರಲಿ ಎಂದು, ಆ ಕುದುರೆಗೆ ಉತ್ತೇಜನ ಕೊಡಲೋಸುಗ "ಮೈ ಡಿಯರ್ ಕಮ್ ಆನ್" ಎಂದು ಕನ್ನಡಿಗರೂ, "ವಾ ಕಣ್ಣಾ" ಅಂತ ತಮಿಳರೂ, "ರಾ ಬಿಡ್ಡಾ" ಎಂದು ತೆಲುಗರೂ, ಇತ್ಯಾದಿ ಇತ್ಯಾದಿ ತಮ್ಮ ತಮ್ಮ ಪಿತೃ ಮಾತೃ ಭಾಷೆಗಳಲ್ಲಿ ಅರಚುತ್ತಾರೆ.

ಪ್ರೇಯಸಿಯು ಬರುವ ಹಾದಿಯನ್ನು ಎದುರು ನೋಡುತ್ತಿರುವ ಯಾವ ಅಂಥ ಪ್ರೇಮಿಯೂ ಕೂಡ, ಈ ಬಾಜಿದಾರರಷ್ಟು ಉನ್ಮತ್ತರಾಗಿರುವುದಿಲ್ಲ.

ಆದರೆ ನಮ್ಮ ಕನ್ನಡ ಬಾಜೀದಾರ, ಮುಂಬರುವ ಅಹಿತವನ್ನು ಅವ್ಯಕ್ತವಾಗಿ ಕಂಡೋ ಏನೋ, ಈ ರೀತಿ ಮೆಚ್ಚಿಸಿ ಕುದುರೆಯನ್ನು ಹಾಡಿ ಹಸೆಗೆ ಕರೆದಂತೆ ಕರೆಯುತ್ತಾನೆ.

ನೀ ಬರುವ ದಾರಿಯಲಿ
    ಹುಲ್ಲು ಹಸನಾಗಿ
ಸಾಲ್ ಸಾಲು ಕಂಬಗಳು
    ಥಳಿಸಿ ಬೆರಗಾಗಿ
ಪಂದ್ಯ ಮುಗಿಯುವ ತನಕ
ಎಳೆಬಿಸಿಲು ಬರುವನಕ
ತುಂತುರ್ಧ್ವನಿ ಅಲ್ಲೆಲ್ಲ ನೆಲವ ತಣಿಸಿರಲಿ.

ನೀ ಬರುವ ದಾರಿಯಲಿ
    ಸೊಕ್ಕಿಗರು ಕೂಗಿ
ಕಿರಿಸಂಜೆ ತಂಪಿನಲಿ
    ಕಾಲ್ಲೋಡಿಯೋಡಿ
ಟ್ರೋಫಿ ಕಾಣಲಿ ನಿನ್ನ
    ಕಣ್ಣ ಬಳಿ ಬೆನ್ನ
ಹತ್ತಾರು ಗಳಿಗೆಯಲಿ ಹಾದಿ ಹಾರಿರಲಿ.




ನೀ ಬರುವ ದಾರಿಯಲಿ
    ಹಣದಾಸೆ ಸುಳಿದು
ಸಂತಸವ ತೋರಿರಲಿ
    ಆಗುವುದ ನುಡಿದು
ಮುಂದೆ ಕಾದಿಹ ನೂರು
ಹರುಷಗಳ ಕಿಕ್ ತೆರೆದು
ಪಂದ್ಯವೊ? ಕುಣಿಗಲೋ?* ನೀನರಿಯುವಂತಿರಲಿ.



* ಹೆಸರಾಂತ ಜೂಜಿನ ಕುದುರೆಗಳು ಸೋಲಲು ಶುರುಮಾಡಿದರೆ ಸಂತಾನ ವೃದ್ಧಿಗಾಗಿ ಅವುಗಳನ್ನು ಕುಣಿಗಲ್ಲಿಗೆ ಕಳಿಸುವುದು ವಾಡಿಕೆ.

# ಚುನಾವಣಾ!

(ಶ್ರೀ ದ.ರಾ.ಬೇಂದ್ರೆಯವರಲ್ಲಿ ಕ್ಷಮಾಪಣೆಗಳೊಡನೆ)

ಆಗಿಂದಾಗ್ಗೆ ಗ್ರಹಣ ಹಿಡಿದಂತೆ ದೇಶಕ್ಕೆಲ್ಲಾ ಚುನಾವಣಾ ಹಿಡಿಯುತ್ತೆ. ಊರು, ಕೇರಿ ಬೀದಿ, ಬೀಡು ಎಲ್ಲವೂ ಈ ಚುನಾವಣಾ ಹುಚ್ಚುಹೊಳೆಯಲ್ಲಿ ತೇಲಿಹೋಗುತ್ತವೆ. ಊರಿನ ಕೇರಿಯ, ಬೀದಿಯ, ಚೌಕದ, ಬೀಡಿನ ಮುಖವೇ ಬದಲಾಯಿಸುತ್ತೆ.

ಈ ದೃಶ್ಯವನ್ನು ಕಂಡ, ಚುನಾವಣೆಗೆ ನಿಲ್ಲದ, ನಿಲ್ಲಬೇಕೆಂಬ ಆಸೆ ತುಸು ಇರ ನಾಗರಿಕನೊಬ್ಬನು ತನ್ನ ಗುಪ್ತ ಹಂಬಲವನ್ನು ಈ ರೀತಿ ಅಣಕವಾಡಿ ತಾನೂ ಶಾಂತಿಯನು ಕಾಣಲೆತ್ನಿಸಿದ್ದಿರಬಹುದಲ್ಲವೆ?

ಚು-ನಾವಣಾ ಬಂತು ನಾಡಿಗೆ।
ಬಂತು ಬೀಡಿಗೆ।
ಬಂತು ಬೀದಿಗೆ।
ಚು-ನಾವಣಾ ಬಂತು ॥

ಕದಡಿ ಬಂತು ಚು-ನಾವಣಾ।
ಕುಣಿದ್ಹಾಂಗೆ ರಾವಣ।
ಕುಣಿತಾವ ಗಾಳಿ।
ಜೈ-ರವದ ರೂಪ ತಾಳಿ ॥

ಚು-ನಾವಣಾ ಬಂತು ಘಟ್ಟಕ್ಕ।
ರಾಜ್ಯ ಪಟ್ಟಕ್ಕ।
ಬಾನಮಟ್ಟಕ್ಕ।
ಏರ್‍ಯಾದ ಮುಗಿಲು। ಭುವಿ ಕಾಣೆ ಹಾಡೆ ಹಗಲು ॥

ಚು-ನಾವಣಾ ಬಂತು ಹೋಟಲಿಗೆ।
ಅದೇ ಶುಭ ಗಳಿಗೆ।
ಹೋಳಿಗೆ ಮತ್ತು ಕೋಳಿಗೆ।
ಅಗ್ಯೇದ ಲಗ್ನ। ಅದರಾಗ ಜನರು ಮಗ್ನ ॥

ಚು-ನಾವಣಾ ಬಂತು ಊರಿಗೆ ।
ಕೇರಿ ಕೇರಿಗೆ ।
ಹೊಡೆದ ಝೋರಿಗೆ ।
ಜೋಕಾಲಿ ಏರಿ । ಅದುರ್‍ಯಾವ ಕನಕ ಹಾರಿ ।

ಚು-ನಾವಣಾ ಬಂತು ಮನಿಮನಿಗೆ ।
ಕೂಡಿ ದನಿ ದನಿಗೆ ।
ಗೆಲುವ ದನಿ ಕೊನಿಗೆ ।
ಒಡೆದಾಡ ಹಾಡೂ । ಕಸ ಉಕ್ಕತಾವ ನೋಡು ॥ ಚು-ನಾವಣಾ ಬಂತು ॥ ೧ ॥



ಜಟ್ಕ ತೊಟ್ಟಾವ ಪೋಸ್ಟರಿನ ಅಂಗಿ ।
ಕೆಸರ ನೋಡ ತಂಗೀ ।
ಹೊರಟಾವೆಲ್ಲೋ ಜಂಗೀ ।
ಜಾತ್ರಿಗೇನೋ । ಹಣ್ಣಾದುವಲ್ಲೆ ತಾನೋ ॥

ಮನೆಗೋಡೆ ನೋಡು ಈಗ ಹ್ಯಾಂಗ ।
ಮದುವಿ ಮಗನ್ಹಾಂಗ ।
ತಲೆಗೆ ಬಾಸಿಂಗ ।
ಕಟ್ಟಿಕೊಂಡು । ನಿಂತಾವ ಬೆದರಿಕೊಂಡು ॥

ಬಲು ಸಿಟ್ಟ ಹಣಗಾರನ್ಹಾಂಗ ।
ನೆಲಾ ನಿಲೆ ಹ್ಯಾಂಗ ।
ಬರಿ ಮಸಿ ಬಳಿದ್ಹಾಂಗ ।
ಸೊಕ್ಕತಾವ । ಇಂಗಾಲ ಕಕ್ಕತಾವ ॥

ಚೌಕ ಚೌಕ ಸಾವಿರ ಭಂಟ ।
ಅವಗೆಲ್ಲಾ ಆಣೆ ಎಂಟ ।
ಸುರಿತಾನೋ ನಿಂದ ನಂಟ ।
ಕೂಡ್ಯಾವ ಸಂತೆ । ಸುತ್ತೆಲ್ಲ ನೋಡ ನೋಡ ॥
ನಾಡೆಲ್ಲ ಭೇರಿಯ ಸಾರಿ ।
ಹರಿತಾವ ಝುರಿ
ಮಾತನ್ನ ತೋರಿ
ಈಗ ಯಾಕಕ । ಜನಕೆಲ್ಲ ಕುಡಿಸಲಾಕ । ಚು-ನಾವಣಾ ಬಂತು ॥ ೨ ॥

ಜನದ್ಮುಲ ಹೂಡಿದಾ ಮೋಸ ।
ಕಟ್ಟಿ ನೂರು ವೇಷ ।
ಕೊಟ್ಟ ಸಂತ್ರಾಸ ।
ಕುಣಿಸ್ತದ ತಾನಿನ ದಣಿತಾದ ।
ಚು-ನಾವಣಾ ಬಂತು ನಾಡಿಗೆ । ಬಂತು ಬೀಡಿಗೆ ।
ಬಂತು ಬೀದಿಗೆ । ಚು-ನಾವಣಾ ಬಂತು ॥

# ಶಿವು–ಮಾರ್ವಾಡಿ

(ಶ್ರೀ ಕುವೆಂಪುರವರಲ್ಲಿ ಕ್ಷಮಾಪಣೆಗಳೊಡನೆ)

ಬಿಸಿಲು ಕಾಲದ ಬೆಳಗ್ಗೆ, ಗಿರಿವಿ ಅಂಗಡಿಯಲ್ಲಿ ಮಾರ್ವಾಡಿ ಲೆಕ್ಕದ ಪುಸ್ತಕ ನೋಡಿದ್ದಾನೆ. ದಿನಪತ್ರಿಕೆಯಲ್ಲಿ ಬಂದ 'ಸಾಲ ಕೊಡುವವರ ಕಾನೂನ'ನ್ನೂ ಓದಿದ್ದಾನೆ. ಹಿಂದಿನ ದಿನವೇ ಶಿವು ಸಾಲ ಕೊಂಡುಹೋಗಿದ್ದಾನೆ. ಮಜಾ ಮಾಡುತ್ತಿದ್ದಾನೆ ಇಂದು.

ಇಂತಿಂತಹ ರೀತಿಯಲ್ಲಿ ಶಿವು ನಲಿದಿರಬಹುದು ಎಂಬುದನ್ನು ಊಹಿಸಿಯೇ ಮಾರ್ವಾಡಿ ಹೀಗೆ ಕರುಬಿರಬಹುದು.




ಕರುಬಿದನು ಮಾರ್ವಾಡಿ;
ಶಿವು ನಲಿದನು!
ಹೂವೊಡೆದ ಸೂರ್ಯಕಾಂತಿಯ ಕಿಟಕಿ ಬುಡದಲ್ಲಿ
ವೈಶಾಖದುದಯ ಹೀರಿದ ಕಾಫಿಯಲ್ಲಿ

ಬೀಸಿ ಬಹ ಪಂಕದೆಳ-ತಣ್ಣನೆ ಎಲರಿನಲ್ಲಿ
ಕಣ್ತೇಟೆಯಾಗುತಿರೆ, ಮನಸಿನಲ್ಲಿ
ಕರುಬಿದನು ಮಾರ್ವಾಡಿ;
ಶಿವು ನಲಿದನು!

ಹಸಿರು ಪಚ್ಚೆಯು ಅರಸುವಜ್ರಗಳು ಬೆರಳಿನಲ್ಲಿ
ಹೊಚ್ಚ ಹೊಸ ಬಣ್ಣ ವಾರೆ ರುಮಾಲಿನಲ್ಲಿ
ಬೆಳೆದ ಕಹಿ ಬಾಕಿ ಲೆಕ್ಕಗಳ ಹೊತ್ತಿಗೆಗಳಲ್ಲಿ
ಬಸಿರಾದ ಪ್ರೋನೋಟ ರಾ.ಶಿ.ಗಳ ನೋಡಿ
ಕರುಬಿದನು ಮಾರ್ವಾಡಿ;
ಶಿವು ನಲಿದನು!

ಸಾಲಸುಮ ಸೌಂದರ್ಯ ತಂದಿರಿಸಿ ಮಾಧುರ್ಯ,
ಸುಂಕರಿಸುತಿಹ ಅಂಕಿಗಳ ನೃತ್ಯ ನಗೆಯಿಂಪು,
ಕಲ್ಪನೆಯ ಸಾಲದ ಬರುವ ಆಸೆಯ ಔದಾರ್ಯ,
ಸಂತೋಷಲಕ್ಷ್ಮಿಯಪ್ಪುಗೆಯ ಝೋಂಪು;
ಕರುಬಿದನು ಮಾರ್ವಾಡಿ;
ಶಿವು ನಲಿದನು!

ನಮ್ಮ ಮನೆಯಂಗಳದಿ ನಾವಿಟ್ಟು ಬೆಳಸಿರ್ಪ
ಸರಳ ಬಡ್ಡಿಯ ಬಾಕಿ ನಮಗಿಲ್ಲವೆಂದು,
ಕಂಡವರು ಮನೆಯ ಬಂಡ್ವಾಳ ಪಡೆದಿಂದು
ನುಂಗಿಹರು ಕೋರ್ಟ ಕರುಣೆಯಲಿ ಎಂದು
ಕರುಬಿದನು ಮಾರ್ವಾಡಿ;
ಶಿವು ನಲಿದನು!

# ಅತ್ತೆ–ಅಳಿಯ

(ಶ್ರೀ ದ.ರಾ.ಬೇಂದ್ರೆಯವರಲ್ಲಿ ಕ್ಷಮಾಪಣೆಗಳೊಡನೆ)

**ಭಾ**ವಜೀವಿ 'ಪೋರಿ-ಪೋರ'ರಂತೆ ಕನಸು ಕಾಣಬಹುದು ಆದರೆ—

ಭಾವಮೈದುನನನ್ನು ಸಹಿಸಬೇಕಾದ ಜೀವಿ, ಅತ್ತೆಯ ಅಂಕೆಗೆ ಒಳಗಾದ ಅಳಿಯ, ಕನಸಿನಲ್ಲಿ ಕೂಡ ಈ ರೀತಿ ಕೆಣಕವಾಡಿ ತನ್ನ ಹೊಟ್ಟೆಯ ಸಂಕಟವನ್ನು ತೋಡಿಕೊಳ್ಳಬಹುದು!

"ಪೋರಿ–ಪೋರ" ನಾಲ್ಕು ಚರಣಗಳಲ್ಲಿ ಮುಗಿಯುವುದು ಸಹಜ! ಆದರೆ "ಅತ್ತೆ–ಅಳಿಯ" ಆರು ಚರಣ ನಡೆಯುವುದು ನ್ಯಾಯವಲ್ಲವೆ!



ಅತ್ತೆ ಆಕೆ, ಅಳಿಯ ನಾನು
ತೋರು ಕಣ್ಣಿಗೆ ಚಂದದಿಂದ
ಅಚ್ಚು ಮೆಚ್ಚು ಇದ್ದಂಗೇನs
ಇದ್ದರು, ಇದ್ದ್ಹಾಂಗಲ್ಲ.

ಯಾಕ? ಏನು? ಏತಕ್ಕಂತಕ
ನಾಕು ಮಾತು ಕೂಡಾ ಆಕೆ
ಒಮ್ಮೆಯಾದರೂ ನನ್ನ ಎಂದೂ
ಕೇಳಲಿಲ್ಲ–ಉತ್ತರ ಹೇಳಲಿಲ್ಲ!

ಹಾಕಿದ್ದುಂಡು ಕೊಟ್ಟಿದ್ದುಟ್ಟು
ಹೇಳಿದ್ಹಾಂಗ ಕೇಳಿಕೊಂಡು
ಬಾಳ ನಾನು ನಡಸುವುದಾದರೂ
ಸುಖವಿಲ್ಲ–ಕಾರಣ ಶಿವನೇ ಬಲ್ಲ.

ಸೀರೆ ಕೊಂಡರೆ ಎರಡನು ತರುವೆ;
ಸಂಜೆಗಿಂತ ಮುಂಚೆಯೇ ಬರುವೆ;
ಪಂಚೆ ಸೀರೆ ನಾನೇ ಒಗೆವೆ;
ನಗುವಿಲ್ಲ! ಕಾರಣ ಶಿವನೇ ಬಲ್ಲ.

ನಾಟಕ ಸಿನಿಮಾಕ್ಹೋದರು ಕೂಡ
ಆಕೆಯ ಜೊತೆಯಲೆ ಮಗಳೂ ಬರುವಳು;
ಆಕೆಯು ನಕ್ಕರೆ ನಾವೂ ನಗುವೆವು;
ಹಿತವಿಲ್ಲ–ಕಾರಣ ಶಿವನೇ ಬಲ್ಲ.

ಮಗಳೂ ಕೂಡ ಆಕೆಯ ತೆರದಲಿ
ಅಳಿಯನ ಮನೆಯಲಿ ಧುಮಗುಡಲೆಂದು
ಆಕೆಯ ಮನದಲಿ ಇದೆಯೋ ಏನೋ?
ದೇವರೇ ಬಲ್ಲ–ನಾನೂ ಸಾವಿಗೆ ಹೆದರುಲ್ಲ.

# ನಡುರಾತ್ರಿ

## (ಶ್ರೀ ವೀ.ಸೀ.ಯವರಲ್ಲಿ ಕ್ಷಮಾಪಣೆಗಳೊಡನೆ)

ಎರಡನೇ ಸಿನಿಮಾಕ್ಕೆ ಹೋದವರು, ಹೊರಗೆ ಬಂದಾಗ ರಾತ್ರಿ ೧೨.೩೦ ಆಗಿದೆ. ನಿಶಿರಾತ್ರಿ, ಹಸಿವು, ಮನೆ ನಾಲ್ಕು ಮೈಲಿ ದೂರ. ಹಾದಿ ಹೆದರಿಕೆ ತರುವಂತಹದು.

ಒಂದೇ ಒಂದು ಜಟ್ಕಾ ಇದೆ. ಅದರ ಸಾರಥಿ ಸುಮಾರು ೭೦ ವರ್ಷದವನಿರಬಹುದು. ಆ ಜಟ್ಕಾ ಕುದುರೆ ಅವನಿಗಿಂತ ಮುಪ್ಪಾಗಿ ಕಾಣುತ್ತಿದೆ. ಅದರ ಕಾಲೀ ಬಾಗಿದೆ. ಬೆನ್ನು ಬಿದ್ದಿದೆ. ಇದೆಯೋ ಇದಕ್ಕೆ ಜೀವ ಎಂಬಂತೆ, ಉಸಿರಾಡುವುದೂ ಕಾಣದಂತೆ ಕುದುರೆ ಕಾಂತಿಹೀನವಾಗಿದೆ.

ಆ ಹಯವೇ ಇವರಿಗೆ ದಾರಿಗಾಣಿಸಬೇಕು. ಆ ಹಯವೇ ಇವರಿಗೆ ಅಶ್ವವರ. ಸಾಕ್ಷಾತ್ತು ಉಚ್ಚೈಶ್ರವಸ್ಸು. ಹೊತ್ತು ಬಂದಾಗ ಕಾಣುವವನೇ ಹಯವದನನಲ್ಲವೆ!

ಅಂದ ಮೇಲೆ ಆ ಹಯಕ್ಕೆ ಇವರು ಈ ರೀತಿ ಹಾಡಿ ತಮ್ಮ ಮನೆಯ ಮಾರ್ಗ ಸುಗಮವಾಗಲೆಂದು ಪ್ರಾರ್ಥಿಸಬಹುದು.

ನಡೆ ಹಯವೆ ನಡೆ ಮುಂದಕೀಗ!
ಖಾರವಿಲ್ಲದ ಚಲನಚಿತ್ರವ್ಯಾಮೋಹಂ ತೊರೆದು
ಭರದಿ ಪೋಗುವ ನಾವು ಮನೆಗೆ ಈಗ—॥

ನಡುರಾತ್ರಿ ಮೀರಿಹುದು, ಜನ ನಿದ್ರಿಸುತ್ತಿಹರು,
ಒಡನಾಡಿಗಳ ಕೂಡಿ ಮನೆಯ ಸೇರುವೆವು;
ತಡೆಯವಿನ್ನೆನ್ನನೀ ತಾರೆ-ಪೋಸ್ಟರುಗಳು,
ನಡೆ ರಾಜಮಾರ್ಗದಲಿ ಮನೆಯ ಕಡೆಗೆ

ತಿರುತಿರುಗಿ ನನ್ನ ಕಡೆ ನೋಡದಿರು, ಕೆನೆಯದಿರು,
ಮುಗ್ಗರಿಸಿ ತಡವರಿಸಿ ಓಡಿ ಬಿಡಬೇಡ;
ಹಸಿವಿನಾ ಆತುರವು ಬಲುವಾಗಿ ಏರಿಹುದು;
ಕೆರೆಯ ನೀರ್ಕಾಲದೆಂಬಂಥ ಹಿರಿದಾಹ.

ಜನರು ಸುಳಿಯಗದಮ್ಮ ಹಾದಿಯಲಿ ನಡೆ ಈಗ,
ಮನವನೇಕಾಗ್ರದಲಿ ಮನೆಯ ಕಡೆಗಿರಿಸು;
ತನುವ ನೀನಂತ್ಯದಲಿ ಮನೆಗೆ ಸೇರಿಸುತ
ಶ್ವಾನ ಬಂದುದ ಕಂಡು ಹೆದರಿ ಬೀಳಿಸದೆ.



ಚಾಟಿ ಬಿಸಿಯನು ಕಂಡು ಥಂಡಿ ಕತ್ತಲಿನಲ್ಲಿ
ಸಹನೆ ಮೀರಿದ ಓಟ ನಿನ ಪಾಲಿಗಾಯ್ತು!
ಸ್ವಸ್ಥಚಿತ್ತದೊಳಿಂದು ನಡೆ ಮುಂದೆ ಹಯವೇ
ಆಶ್ವಾಸ ನೀಡುವೆನು ಕಡೆಯಾಟ ತೊರೆವೆ.

ಮನೆಗೆಮ್ಮ ಬಿಟ್ಟು ನೀ ನಿನ್ನ ಲಾಯಕೆ ತಿರುಗು;
ಉಷೆಯ ರೈಲ್ಗಾಗರರಿಗೆ ದಾರಿ ತೋರುತಿರು;
ಬೇಯುತಿದೆ ನಿನ್ನೊಡಲು ನೆನೆನೆನೆದು ಗುಗ್ಗುರಿಯ;
ದಯೆಯಿಂದ ಇಂದೊಮ್ಮೆ ಮನೆ ತೋರು ಬಂಧು.

# ಲಂಚ ಕೈಗೆ ತಾ

(ಶ್ರೀ ದ.ರಾ.ಬೇಂದ್ರೆಯವರಲ್ಲಿ ಕ್ಷಮಾಪಣೆಗಳೊಡನೆ)

ಕಾಣುವ ಕಾತರ ಇರುವವರಿಗೆ ಕಾಣದಂತೆ ಹಿಂಗೈಯಲ್ಲಿ ಅವತರಿಸುವ ಲಂಚ–ಮನಸ್ಸಿನಲ್ಲಿ ಹೊಳೆದು, ಕನಸಿನಲ್ಲಿ ಬೆಳೆದು, ಜೀವನವನ್ನೇ ಥಳಿಪುಗೊಳಿಸುತ್ತದೆ.

ಇಂತಹ ಸಂದರ್ಭಗಳಲ್ಲಿ ವಿವಿಧ ರೀತಿಯ ಲಂಚ ಮಾಡುವುದು ಸಹಜ.

ಪ್ರಕೃತಿಯಲ್ಲಿ ಕೂಡ ಹೂ ತಾನು ಬಸಿರಾಗಬಯಸಿದಾಗ ದುಂಬಿಯನ್ನು ಕರೆದು ಮಧುವಿನ ಲಂಚ ಕೊಟ್ಟು, ತನ್ನ ಬಯಕೆಯನ್ನು ಈಡೇರಿಸಿಕೊಳ್ಳುತ್ತದೆ.

ಅಂದ ಮೇಲೆ ಜಗದಲ್ಲಿ ರೂಪ ತಾಳಿರುವುದು ಒಂದಲ್ಲ ಒಂದು ರೀತಿಯಲ್ಲಿ ಲಂಚವೇ ಹೌದು. ಮೆಚ್ಚುಗೆಯ ಲಂಚವೇ ಈ ಕೆಣಕವಾಡಿಗೆ ವಸ್ತು!

ಮನಸಿನಲ್ಲಿ ಹೊಳೆದವನೇ
ಕನಸಿನಲ್ಲಿ ಬೆಳೆದವನೇ
ಜೀವನವನೆ ಬಲಿಸಿದವನೆ
ಎಲ್ಲಿರುವೆ ಬಾ!

ಗೆಲುವಿನಲ್ಲಿ ಮೂಡಿರುವಿ
ಜುಲುಮಿನಲ್ಲಿ ತಾಕಿರುವಿ
ಜಗದಿ ರೂಪ ತಾಳಿರುವಿ
ಕೈಗೆ ಕೈಯ ತಾ!

ಕಳ್ಳಕೊಲೆಗೆ ಸಿದ್ಧನಾಗೆ
ಸುಳ್ಳು ನಿಜಕೆ ಮಿಶ್ರವಾಗೆ
ಸಾಕ್ಷಿ ಕೆರಳಿ ನುಡಿಯುವಾಗ
ಮೂಡಿದವನೆ ಬಾ!

ಗಂಡು ಹೆಣ್ಣು ವರಿಸುವಾಗ
ಬೀಗರಿಬ್ಬರೊಂದಿದಾಗ
ಜೀವ ಸೆಲೆಯ ತೋಡುವಾಗ
ಬಹನೇ ಕೈಯ ತಾ!




ಹೂವು ಅರಳಿ ನಗುತಲಿರ
ತನ್ನ ಬಸಿರ ನನೆಯುತಿರೆ
ತುಂಬಿ ಬಂದು ಸಂಗಡಿಸಿರೆ
ಮಧುವ ಬಾಯ್ಗೆ ತಾ!

ಬೆಣ್ಣೆ ಕೈಯ ಹೊಸೆಯುತಿರೆ
ಕಣ್ಗೆ ಸುಣ್ಣ ಬೀಳುತಿರೆ
ಎಣ್ಕೆ 'ಬಿಲ್ಲ' ಹಿಡಿಯುತಿರೆ
ಚಾಚಿದ ಕೈ ತಾ!

# ರಾ.ಶಿ. ಕೃತಿಗಳು

## ನಗೆ ಬರಹಗಳು

ತುಟಿ ಮೀರಿದುದು
ಕೆಣಕೋಣು ಬಾರ
ಇಂದಾನೊಂದು ಕಾಲದಲ್ಲಿ
ಕೊರವಂಜಿಯ ಪಡುವಣ ಯಾತ್ರೆ
ನಗುಸರಸಿ ಅಪ್ಸರೆಯರು
ಕೊರವಂಜಿ ಕಂಡ ನಗು ಸಮಾಜ
ಕೊರವಂಜಿ ಕಂಡ ನಗು ವ್ಯಕ್ತಿಗಳು
ಕೊರವಂಜಿ ಕಂಡ ನಗು ದರ್ಬಾರಿಗರು
ಕೊರವಂಜಿ ಕಂಡ ನಗು ಸಂಸಾರಗಳು

## ನಗೆಹನಿಗಳು

ಥಳುಕು ತುಣುಕು
ನಗೆಗೆರೆ ಚಿತ್ರಗಳು
ನಗು

## ಕಳ್ಳರ ಕಥೆಗಳು

ಜಗ್ಗೋಜಿ
ಬುದ್ದೋಜಿ

## ದೆವ್ವಗಳ ಕಥೆಗಳು

ಪೋಂತಿಯಾನೋ
ಅಂಚೆಪೇದೆಯ ಅಂತರ್ ಹೆಂಡತಿ

## ದೈಹಿಕ ಆರೋಗ್ಯ

ಅಲರ್ಜಿ
ಆದರ್ಶ ಆರೋಗ್ಯ
ನಮ್ಮ ಅಡಿಗೆ ಪಥ್ಯದ ಊಟ

**ಮಾನಸಿಕ ಆರೋಗ್ಯ**

ಮನೋನಂದನ
ಮನಮಂಥನ
ಭಯ: ಸರಳ ವಿಶ್ಲೇಷಣೆ

**ವಿಚಾರ ಸಾಹಿತ್ಯ**

ಮನನ
ಮೃಗಶಿರ
ಕಾಲ
ಪಶ್ಯಾಮಿ ಕಥೆಗಳು
ಯೋಚಿಸಿದರೆ

**ವ್ಯಕ್ತಿ ಚಿತ್ರಗಳು**

ಟಿ.ಪಿ. ಕೈಲಾಸಂ
ಜಿ.ಪಿ. ರಾಜರತ್ನಂ

**ಕಾದಂಬರಿಗಳು**

ಪಂಪಾಪತಿಯ ಕೃಪೆ
ಹರಿದ ಉಯಿಲು
ಮಧುವನದಲ್ಲಿ ಮೇಳ
ಕಾರ್ತೀಕ ಸೋಮವಾರ

**ಕವನ ಸಂಗ್ರಹ**

ಸಾಕ್ಷಿ ಸಂಕಲಿಕೆ

**ಇಂಗ್ಲಿಷ್ ಪುಸ್ತಕಗಳು**

Kailasam and I
Ananda an Experiance
Ananda and the three Great Acharyas
Death and Nachiketas
Moral and Health



**ರಾ.ಶಿ.** ಎಂದೇ ಖ್ಯಾತರಾದ ಡಾ॥ ಎಂ. ಶಿವರಾಂ ಅವರ ಒಂಬತ್ತು ನಗೆ ಸಂಕಲನಗಳಿಂದ ಆಯ್ದ ಬರಹಗಳ ಸಂಕಲನವೇ ಈ ಕೃತಿ 'ನಗೆಗಾರ ರಾ.ಶಿ.'

ಈ ಬರಹಗಳು ರಾ.ಶಿ. ಅವರ ಹಾಸ್ಯಪ್ರಜ್ಞೆಯ ಒಂದು ಮುಖ ಅಷ್ಟೆ. ಅವರ ನಗೆ ಮನೋಭಾವದ ಇನ್ನೊಂದು ಆಯಾಮವೆಂದರೆ ಮಾತುಗಾರಿಕೆ. ಈ ಮಾತುಗಾರಿಕೆಯಲ್ಲಿ ಪಟಾಕಿ ಸಿಡಿದಂತೆ ಚಟಪಟಗುಟ್ಟುತ್ತಿದ್ದ ಅವರ ನಗೆ ಚಟಾಕಿಗಳು ಸುತ್ತಲಿನವರನ್ನು ಸದಾ ನಗೆಗಡಲಿನಲ್ಲಿ ಮುಳುಗಿಸುತ್ತಿದ್ದವು.

ಇಂಗ್ಲಿಷಿನ 'ಪಂಚ್' ವಾರಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ಲೇಖನಗಳು, ವ್ಯಂಗ್ಯಚಿತ್ರಗಳು, ಕುಹಕಿಡಿಗಳು ಇವರಿಗೆ 'ಕೊರವಂಜಿ' ರೂಪಿಸಲು ಪ್ರೇರೇಪಿಸಿತು.

ಕೈಲಾಸಂ ಅವರ ನಿಕಟವರ್ತಿಗಳಲ್ಲಿ ಒಬ್ಬರಾಗಿದ್ದ ರಾ.ಶಿ. ಅವರ ನಗೆಬರಹಗಳು ನಿಜಕ್ಕೂ ಕನ್ನಡ ಹಾಸ್ಯ ಸಾಹಿತ್ಯಕ್ಕೊಂದು ಉತ್ತಮ ಕೊಡುಗೆ.

ಪ್ರಿಸಮ್ ಬುಕ್ಸ್ ಪ್ರೈ. ಲಿ.
ಬೆಂಗಳೂರು - 560 070

ISBN: 81-7286-173-7
ರೂ. 120